# — ಆದ್ಯವಕ್ತವ್ಯ —



ಕೆಲವು ವರ್ಷಗಳ ಹಿಂದೆ ಶ್ರೀ ಪೂಜ್ಯ ಅನಂತಮತಿ ಅಮ್ಮನವರ ಚಾತುರ್ಮಾಸವು ಶ್ರೀ ಕ್ಷೇತ್ರ ಕುಂಥಲಗಿರಿಯಲ್ಲಿ ಆಗಿತ್ತು. ಆ ಸಮಯ ದಲ್ಲಿ ಅವರು ದಶಧರ್ಮದ ಮೇಲೆ ವಿಸ್ತಾರವಾದ ಉಪದೇಶವನ್ನು ಮಾಡಿದ್ದರು. ಅಲ್ಲಿ ಶ್ರೋತ್ರವೃಂದದವರಿಗೆ ಅದು ವಿಶೇಷವಾಗಿ ಹರ್ಷಕ್ಕೆ ಕಾರಣ ವಾಗಿತ್ತು. ಆ ಪ್ರವಚನವನ್ನು ಕೆಲವು ಭಕ್ತವೃಂದದವರು ಮರಾಠಿ ಭಾಷೆ ಯಲ್ಲಿ ಪ್ರಸಿದ್ಧ ಪಡಿಸಿದರು. ಅದರಿಂದ ಮರಾಠಿ ಬಲ್ಲ ಅನೇಕ ಭವ್ಯರಿಗೆ ಉಪಯೋಗವಾಯ್ತು. ಹೋದ ವರುಷ ಶ್ರೀ ಅಮ್ಮನವರ ಚಾತುರ್ಮಾಸವು ಇಂಡಿಯಲ್ಲಿ ಆಗಿತ್ತು. ಆ ಸಮಯದಲ್ಲಿ ಅಲ್ಲಿಯ ಭಕ್ತ ನಾಗರಿಕರು ಈ ಗ್ರಂಥದ ಕನ್ನಡ ಅನುವಾದವು ಪ್ರಕಟವಾಗಬೇಕೆಂಬ ಅಭಿಪ್ರಾಯ ವನ್ನು ಪಟ್ಟ ಮೇರೆಗೆ ಈ ಗ್ರಂಥವು ಕನ್ನಡ ಜಗತ್ತಿಗೆ ಬರುತ್ತಿದೆ. ಇದರ ಮೂಲ ಶ್ರೇಯವು ಪೂಜ್ಯ ಅಮ್ಮನವರಿಗೂ ಮತ್ತು ಉತ್ತರ ಶ್ರೇಯವು ಸದರಿ ಇಂಡಿಯ ಭಕ್ತವೃಂದದವರಿಗೂ ಮೀಸಲಾಗಿರಿಸಿದೆ.

ಶ್ರೀ ಪೂಜ್ಯ ಅನಂತಮತಿ ಅಮ್ಮನವರು ಈ ಪ್ರವಚನಗಳಲ್ಲಿ ದಶ ಧರ್ಮಗಳ ವಿಷಯವಾಗಿ ಅತ್ಯಂತ ವಿಸ್ತಾರದಿಂದ ವಿವೇಚಿಸಿದ್ದಾರೆ. ಅಷ್ಟೇ ಅಲ್ಲ. ಅಲ್ಲಲ್ಲಿ ಅನೇಕ ಉದಾಹರಣೆಗಳನ್ನು ಕೊಟ್ಟು ಕಥೆಗಳನ್ನು ವಿವ ರಿಸಿ ವರ್ಣಿಸಿದ್ದಾರೆ. ಇದರಿಂದ ಅವರ ಬಹುಶ್ರುತ ಜ್ಞಾನದ ಅರಿವಾಗುತ್ತ ದಲ್ಲದೆ ಬಹುಮುಖಿ ಪ್ರತಿಭೆಯ ದರ್ಶನವು ಆಗುತ್ತಿದೆ. ಸಾಧು ಸಾಧ್ವಿ ಯರಲ್ಲಿ ಚಾರಿತ್ರದೊಡನೆ ಜ್ಞಾನದ ಅಂಶವು ಅಧಿಕವಾದಷ್ಟು ಲೋಕ ಕಲ್ಯಾಣಕ್ಕೆ ಅದು ಉಪಯುಕ್ತವಾಗುತ್ತದೆಂದು ಹೇಳಲು ಅಡ್ಡಿ ಇಲ್ಲ. ಆದುದರಿಂದಲೇ ವಾಚಕರಿಗೂ ಈ ಗ್ರಂಥದ ಸ್ವಾಧ್ಯಾಯದಿಂದ ವಿಶೇಷ ಜ್ಞಾನವಾಗಬಹುದು.

ಉತ್ತಮಕ್ಷಮಾದಿ ದಶಧರ್ಮಗಳೇ ಆತ್ಮನ ನಿಜವಾದ ಗುಣಗಳು. ಅವುಗಳನ್ನು ಮರೆತು ಈ ಆತ್ಮನು ತನ್ನ ಸ್ವರೂಪದಿಂದ ದೂರ ಹೋಗು

ತ್ತಿದ್ದಾನೆ. ಆದುದರಿಂದಲೇ ಸಂಸಾರದಲ್ಲಿ ಅನೇಕ ವಿಧವಾದ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಈ ದುಃಖ ಪರಂಪರೆಯಿಂದ ಮುಕ್ತನಾಗಬೇಕಾದರೆ ಈ ದಶಧರ್ಮಗಳ ವಿಷಯವನ್ನು ಚೆನ್ನಾಗಿ ಅರಿತುಕೊಳ್ಳಬೇಕು, ಮನನ ಮಾಡಬೇಕು, ಸತತ ಚಿಂತಿಸುತ್ತಿರಬೇಕು. ಅದರಿಂದ ನಿಜವಾಗಿಯೂ ಆತ್ಮನ ಕಲ್ಯಾಣವಾಗುವುದರಲ್ಲಿ ಸಂಶಯವಿಲ್ಲ. ಈ ದೃಷ್ಟಿಯಲ್ಲಿ ಪೂ. ಅನಂತಮತಿ ಅಮ್ಮನವರ ಈ ಕಾರ್ಯವು ನಿಜವಾಗಿಯೂ ಲೋಕಕಲ್ಯಾಣದ ಮಾರ್ಗದಲ್ಲಿ ಚಿರಸ್ಮರಣೀಯವಾಗಿದೆ. ಆತ್ಮಕಲ್ಯಾಣವನ್ನು ಬಯಸುವವರು ಅವರಿಗೆ ಕೃತಜ್ಞರಾಗಬೇಕು.

## ಶ್ರೀ ಅನಂತಮತಿ ಅಮ್ಮನವರ ಪರಿಚಯ.

ಜೈನಾಚಾರ್ಯ ಪರಂಪರೆಯಲ್ಲಿ ಬಂದ ಪರಮಪೂಜ್ಯ ಆಚಾರ್ಯ ಶಾಂತಿಸಾಗರ ಸ್ವಾಮಿಗಳ ಶಿಷ್ಯರಾದ ಶ್ರೀ ಪೂಜ್ಯ ಆಚಾರ್ಯ ಪಾಯಸಾಗರ ಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ ದೀಕ್ಷಿತರಾದ ಸಾಧ್ವಿಗಳಿವರು. ಇವರ ಜನ್ಮವು ವೀರಜಿನ ಸಮೀಪದಲ್ಲಿರುವ ಆರಗ ಎಂಬ ಗ್ರಾಮದಲ್ಲಿ ಆಯಿತು. ಅಲ್ಲಿ ಬಾಳಪ್ಪ ವಡಗಾಂವೆ ಎಂಬ ಸತ್ವಶೀಲ ಶ್ರಾವಕ. ಅವರಿಗೆ ಸಕಲಗುಣ ಸಂಪನ್ನ ತಾನೀಬಾಯಿ ಎಂಬ ಭಾರ್ಯೆ. ಇವರೀರ್ವರ ಕುಕ್ಷಿಯಲ್ಲಿ ಈ ಕನ್ಯಾರತ್ನದ ಜನ್ಮವು ಸಂವತ ೧೯೬೫ ರಲ್ಲಿ ಆಯಿತು. ಈ ಕನ್ಯೆಯ ನಾಮಕರಣ ಅಂಜನಾಬಾಯಿ ಎಂದು ಮಾಡಲಾಯ್ತು. ತಾಯಿ ತಂದೆಗಳ ಸಂಸ್ಕಾರದಿಂದ ಬಾಲ್ಯಕಾಲದಿಂದಲೇ ಇವರಲ್ಲಿ ಜಿನದರ್ಶನ ಸ್ವಾಧ್ಯಾಯ, ಗುರುವಂದನೆ ಮೊದಲಾದುವುಗಳಲ್ಲಿ ಆಸಕ್ತಿ ಇತ್ತು. ಆದುದರಿಂದ ತಾಯಿ ತಂದೆಗಳಿಗೂ ಮತ್ತು ಇತರ ಬಂಧುಗಳಿಗೂ ಈ ಕನ್ಯೆಯನ್ನು ನೋಡಿ ಸಂತೋಷವಾಗುತ್ತಿತ್ತು. ಯೋಗ್ಯ ವಯಸ್ಸಾದ ನಂತರ ತಾಯಿ ತಂದೆಗಳು ಲೋಕ ರೂಢಿಯಂತೆ ಈ ಕನ್ಯೆಯ ವಿವಾಹವನ್ನು ಯೋಗ್ಯವರನನ್ನು ನೋಡಿ ಮಾಡಿದರು. ಆದರೆ ಮನಸ್ಸಿನಲ್ಲಿ ವೈರಾಗ್ಯಪರಿಣತಿ ಇದ್ದುದರಿಂದ ಈ ಕನ್ಯೆಗೆ ವಿವಾಹವಾದ ನಂತರವೂ ಸಂಸಾರದ ವಿಷಯಗಳಲ್ಲಿ ಮನಸ್ಸು ಹಿಡಿಯಲಿಲ್ಲ. ಸದಾ ಸಂಸಾರಭೋಗ

ಗಳಿಂದ ವಿರಕ್ತ ಪರಿಣತಿಯಲ್ಲಿರುತ್ತಿದ್ದಳು. ಕರ್ಮಧರ್ಮಸಂಯೋಗ ದಿಂದ ಬೆಡಗ ಎಂಬ ಊರಿನಲ್ಲಿ ಶ್ರೀ ಆಚಾರ್ಯ ಪಾಯಸಾಗರ ಸ್ವಾಮಿ ಗಳ ಸಂಘವು ಬಂದಿತ್ತು. ಪೂಜ್ಯಶ್ರೀಯವರ ಸಂಸಾರದ ನಶ್ವರತೆಯನ್ನು ವರ್ಣಿಸುವ ಪ್ರಭಾವಕ ಉಪದೇಶವಾಯಿತು. ಅದನ್ನು ಕೇಳಿ ಈ ಸತಿಗೂ ವೈರಾಗ್ಯದ ಉದಯವಾಗಿ ಅದು ದೃಢವಾಯ್ತು. ಅಲ್ಲಿ ೨೨ ನೆಯ ವಯ ಸ್ಸಿನಲ್ಲಿ ಶ್ರೀ ಆಚಾರ್ಯ ಪಾಯಸಾಗರ ಸ್ವಾಮಿಗಳ ಹಸ್ತದಿಂದ ದೀಕ್ಷೆ ಯನ್ನು ಪಡೆದರು. ದೀಕ್ಷಿತರಾದ ಮೇಲೆ ಸತತ ಸ್ವಾಧ್ಯಾಯ ತಪಗಳನಾ ಚರಿಸಿ ತನ್ನ ಜ್ಞಾನದಲ್ಲಿ ಮತ್ತು ಚಾರಿತ್ರದಲ್ಲಿ ನಿರ್ಮಲತೆಯನ್ನು ಮಾಡಿಕೊಂಡರು. ಸತತ ಜ್ಞಾನಾಭ್ಯಾಸವನ್ನು ಮಾಡುತ್ತಾ ಅನೇಕ ದೊಡ್ಡ ಗ್ರಂಥಗಳ ಸ್ವಾಧ್ಯಾಯವನ್ನು ಮಾಡಿಕೊಂಡು ಜೈನಾಗಮದ ವಿಷಯದಲ್ಲಿ ವಿಶಾಲವಾದ ಪರಿಚಯವನ್ನು ಮಾಡಿಕೊಂಡರು. ಪ್ರತಿವರ್ಷ ಅನೇಕ ನಗರಗಳಲ್ಲಿ ಚಾತುರ್ಮಾಸ ಮಾಡಿ ಅಲ್ಲಿಯ ಭವ್ಯರಿಗೆ ಹಿತವಾದ ಉಪದೇಶವನ್ನು ಕೊಟ್ಟು ಸನ್ಮಾರ್ಗದರ್ಶನವನ್ನು ಮಾಡಿಕೊಟ್ಟರು, ಕೊಡುತ್ತಿದ್ದಾರೆ. ಪಂಢರಪುರ, ಸೊಲ್ಲಾಪುರ, ಕೊಲ್ಲಾಪುರ, ಔರಂಗಾ ಬಾದ, ಇಂದೋರ ಮೊದಲಾದ ಭಾರತ ಪ್ರಸಿದ್ಧ ಅನೇಕ ನಗರಗಳಲ್ಲಿ ಚಾತುರ್ಮಾಸ ಮಾಡಿ ಲೋಕಕಲ್ಯಾಣವನ್ನು ಮಾಡಿದ್ದಾರೆ. ಮಾಡುತ್ತಿ ದ್ದಾರೆ. ಅನೇಕ ಧರ್ಮ ಸಂಕಟಗಳ ಸಮಯದಲ್ಲಿ ತನ್ನ ತಪಶ್ಚರ್ಯೆಯ ಸಾಮರ್ಥ್ಯದಿಂದ ಅದನ್ನು ದೂರ ಮಾಡಿದ್ದಾರೆ. ಅವರ ಉಪದೇಶದಿಂದ ಅನೇಕ ಭವ್ಯರು ತಮ್ಮ ಆತ್ಮಹಿತವನ್ನು ಮಾಡಿಕೊಳ್ಳುತ್ತಿದ್ದಾರೆ. ಅವರು ಹಿಂದೀ ಮರಾಠೀ ಕನ್ನಡದಲ್ಲಿ ಸರಸವಾದ ಪ್ರವಚನವನ್ನು ಮಾಡುತ್ತಾರಲ್ಲದೆ ಅವರ ಉಪದೇಶದಿಂದ ಅನೇಕ ಭವ್ಯರು ತಮ್ಮ ಆತ್ಮಹಿತವನ್ನು ಮಾಡಿ ಕೊಳ್ಳುತ್ತಿದ್ದಾರೆ, ಅವರ ಪ್ರವಚನಗಳು ಹಿಂದೀ ಮತ್ತು ಮರಾಠೀ ಭಾಷೆ ಗಳಲ್ಲಿ ಪ್ರಕಟವಾಗಿವೆ, ನಮ್ಮ ಕರ್ನಾಟಕದ ಜನರಿಗೂ ಅದರ ಉಪ ಯೋಗವಾಗಬೇಕೆಂಬ ಸದುದ್ದೇಶದಿಂದ ಈ ಪ್ರವಚನ ಸಂಗ್ರಹವನ್ನು ಕನ್ನಡದಲ್ಲಿ ಪ್ರಕಟಿಸಲಾಗಿದೆ. ಇದರಿಂದ ಕನ್ನಡಬಲ್ಲ ಜನರಿಗೆ ಯಥೇಷ್ಟ ಲಾಭವಾಗಬಹುದು.

**ಗ್ರಂಥ ಪ್ರಕಾಶನಕ್ಕೆ ಸಹಾಯತೆ.**

ಈ ಕನ್ನಡ ಪ್ರವಚನಗಳನ್ನು ಪ್ರಕಟಿಸುವುದಕ್ಕೆ ಇಂಡಿಯ ಧರ್ಮ ಬಂಧುಗಳು ಮತ್ತು ಇನ್ನೂ ಕೆಲವು ಗುರುಭಕ್ತರು ನೆರವಾಗಿದ್ದಾರೆ. ಅವ ರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಅವರ ಈ ಆವಶ್ಯಕ ದಾನದಿಂದ ಅಸಂಖ್ಯ ಪ್ರಾಣಿಗಳಿಗೆ ಉಪಕಾರವಾಗಬಹುದು. ಅದರ ಶ್ರೇಯವು ಅವ ರಿಗಿದೆ ಎಂಬ ಮಾತನ್ನು ಬರೆಯುವುದರಲ್ಲಿ ಸಂಕೋಚವಾಗುವುದಿಲ್ಲ.

**ಸಂಪಾದನ ಭಾರ.**

ಇದರ ಸಂಪಾದನ ಭಾರವನ್ನು ಶ್ರೀ ಪೂಜ್ಯ ಅಮ್ಮನವರು ಮತ್ತು ಇಂಡಿಯ ದರ್ಮ ಬಂಧುಗಳ ಇಚ್ಛೆಯಂತೆ ನಾವು ವಹಿಸಿದ್ದರೂ ಅನಿವಾ ರ್ಯವಾಗಿ ಇತರ ಅನೇಕ ಸಾಹಿತ್ಯಿಕ, ಸಾಮಾಜಿಕ ಕಾರ್ಯಭಾರಗಳ ಕಾರಣದಿಂದ ಪ್ರಕಟನೆಯಲ್ಲಿ ಅಪೇಕ್ಷಿತ ವಿಳಂಬವಾಯ್ತು ನಮ್ಮ ವಿವಶತೆಯನ್ನು ಲಕ್ಷ್ಯದಲ್ಲಿಟ್ಟು ಅವರೆಲ್ಲರೂ ನಮ್ಮನ್ನು ಕ್ಷಮಿಸುವರೆಂದು ಭರವಸೆಯಿದೆ.

ಅಮ್ಮನವರ ಪ್ರವಚನದ ಮೂಲಭಾವವನ್ನು ಪರಿವರ್ತಿಸದ ಅನುವಾ ದವನ್ನು ಮಾಡಲಾಗಿದೆ. ಸಂಶೋಧನೆಯ ವಿಷಯದಲ್ಲಿ ಯಥಾಶಕ್ತಿ ಲಕ್ಷ್ಯ ಕೊಡಲಾಗಿದೆ. ಉಳಿದಿದ್ದರೆ ವಿದ್ವಾಂಸರು ಪರಿಶೋಧಿಸಿಕೊಳ್ಳಬಹುದು.

ಪೂಜ್ಯ ಅಮ್ಮನವರು ಇದೇ ಪ್ರಕಾರದ ಗ್ರಂಥಗಳನ್ನು ರಚಿಸುವುದ ಕ್ಕೋಸ್ಕರವಾಗಿ ದೀರ್ಘಜೀವಿಗಳಾಗಬೇಕೆಂದೂ ಅವರಿಂದ ಇತೋಪ್ಯತಿ ಶಯವಾದ ಲೋಕಕಲ್ಯಾಣದ ಕಾರ್ಯಗಳಾಗಬೇಕೆಂದೂ ಶ್ರೀ ಭಗವಂತ ನಲ್ಲಿ ಪ್ರಾರ್ಥಿಸುತ್ತೇವೆ.

| | |
|---|---|
| ಸೊಲ್ಲಾಪುರ | ಸಜ್ಜನರ ವಿಧೇಯ |
| ಅಕ್ಷಯತೃತೀಯ | **ವರ್ಧಮಾನ ಪಾ. ಶಾಸ್ತ್ರಿ** |
| ವೀರ ನಿ. ಸಂ. ೨೪೮೪ | ಸಂಪಾದಕ— ಜೈನಬೋಧಕ, ಜೈನದರ್ಶನ. |

—o—

# ಶ್ರೀ ೧೦೫ ಕ್ಷು. ಅನಂತಮತಿ ಮಾತಾಜಿಯವರ
# * ಪರಿಚಯ *

( ರಚಯಿತಾ—ಭಿಕಚಂದ್ರ ಕೋಲೆ )

(ತರ್ಜ–ಆವೋ ಬಚ್ಚೋ ತುಮ್ಹೆ ದಿಖಾಯೆಂ ಝಾಂಕೀ ಹಿಂದುಸ್ಥಾನಕೀ
ಇಸ ಮಿಟ್ಟೀಸೆ ತಿಲಕ ಕರೋ ಯೇ ಧರತೀ ಹೈ ಬಲಿದಾನಕೀ ।)

ಆವೋ ಬಚ್ಚೋ ತುಮ್ಹೆ ದಿಖಾಯೆಂ ಝಾಂಕೀ ಮಾತಾಜೀಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ॥
ವಂದೇ ಜಿನವರಂ—ವಂದೇ ಜಿನವರಂ, ವಂದೇ ಜಿನವರಂ ।
ಮಹಾರಾಷ್ಟ್ರಮೆ ಜನ್ಮ ಹುವಾ ಹೈ ಆರಗ ನಾಮಕ ಗ್ರಾಮಮೆ ।
ನಾಮ ಪಿತಾಕಾ ಬಾಲಪ್ಪಾ ಹೈ ! ಮಾತಾ ತಾನೀಬಾಯೀ ಹೈ ।
ಮಾತಾ ಪಿತಾ ಭೀ ಧರ್ಮನಿಷ್ಠ ಔರ ಶಾಸ್ತ್ರ ವಿಷಯಕೆ ಜ್ಞಾನೀ ಹೈಂ ।
ಉನ್ನೀಸಸೌ ಪೈಂಸಠ ಸಂವತ, ತಿಥಿ ಹೈ ಉನಕೇ ಜನ್ಮಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ......ವಂದೇ ಜಿನವರಂ ೨ ॥ ॥ ೧ ॥
ಮಾತಾ ಪಿತಾನೆ ನಾಮ ಸುತಾಕಾ ಅಂಜನಾಬಾಯಿ ರಖಾ ಥಾ ।
ಬಚಪನಸೆ ಹೀ ಅಂಜನಾಬಾಯಿಕೊ ಧರ್ಮ ಮಾರ್ಗಸೆ ಪ್ಯಾರ ಥಾ ।
ಸೋಲಹ ಸಾಲಕೀ ಅಂಜನಾಬಾಯಿ ಜಬ ಉನಕಾ ವಿವಾಹ ಹುವಾ ।
ಖೋಜ ಪಿತಾನೆ ಲಾಯಕ ವರ ಔರ ಶಾದೀ ಇನಕೀ ಕರವಾದೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೆ ಜಿನವರಂ, ವಂದೆ ಜಿನವರಂ ॥ ಆವೋ ಬಚ್ಚೋ ॥ ೨ ॥
ಬಾಯೀಸಕೀ ಆಯುಮೆ ಉನಕೋ ವೈರಾಗ್ಯ ಭಾವನಾ ಆಗಯೀ ।
ಸಂಸಾರ ಛೋಡಕರ ಮೋಹ ತ್ಯಾಗಕರ ಮುನಿರಾಜಸೆ ದೀಕ್ಷಾ ಲೀ ।
ನಾಮ ಶ್ರೀ ಮುನಿಕಾ ಪಾಯಸಾಗರ ಜೋ ಬೆಡಗಗಾಂವಮೆ ಠಹರೆ ಥೇ
ದೀಕ್ಷಾ ಉನಸೇ ಲೇಕರ ಬದಲೀ ದುನಿಯಾ ಮಾತಾಜೀಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ ೨ ಆವೋ ಬಚ್ಚೋ ॥ ೩ ॥

ಜೈನ ಧರ್ಮಕಾ ಪ್ರಭಾವ ಕರನೆ ಜಗಹ–ಜಗಹ ಉಪದೇಶ ದಿಯಾ ।
ಭಾಷಾ ಮಧುರ ಸುನಕರ ಇನಕೀ ದಿಲಪರ ಸಚ್ಚಾ ಅಸರ ಹುವಾ ।
ಸಂಸ್ಕೃತ, ಕನ್ನಡ, ಮರಾಠಿ, ಹಿಂದಿ ಭಾಷಾಓಂಕೀ ಜ್ಞಾತಾ ಹೈಂ ।
ಜೈನ ಧರ್ಮಕಾ ದೀಪ ಜಲಾಯೇ ಬಾಜೀ ಲಗಾಯೀ ಥಾ
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ, ೨ ಆವೋ ಬಚ್ಚೋ ॥ ೪ ॥
ಇಂದ್ರಪುರೀಮೆ ಧರ್ಮ ಶಿರೋಮಣಿ ಹುಕುಮಚಂದಜೀ ರಹತೇ ಹೈಂ ।
ಜೈನ ಧರ್ಮಕಾ ಪ್ರಭಾವ ಕರನೇ ಹರದಮ ತತ್ಪರ ರಹತೇ ಹೈಂ ।
ವಿಶಾಲ ಧರ್ಮಶಾಲಾ ಹೈ ಜಿಸಮೆ ಮಾತಾಜೀನೆ ವಾಸ ಕಿಯಾ ।
ಪರ್ಯೂಷಣಮೆ ಉಪದೇಶ ದೇಕೆ ಜ್ಯೋತಿ ಜಗಾಯೀ ಜ್ಞಾನಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೆ ಜಿನವರಂ ೨ ಆವೋ ಬಚ್ಚೋ ॥ ೫ ॥
ಹುಕುಮಚಂದಜೀಕೀ ಧರ್ಮಪತ್ನಿ ಕಂಚನಬಾಯಿ ಕಹಲಾತೀ ಹೈಂ ।
ಸರಲ ಸ್ವಭಾವೀ ಅಹಂಕಾರ ಹೀನ ಐಸೀ ಉನಕೀ ಖ್ಯಾತಿ ಹೈ ।
ದೀನ ದುಖೀ ಜೀವೋಂಪರ ದಿಲಸೆ ಕರುಣಾ ಸ್ರೋತ ಬಹಾತೀ ಹೈಂ ।
ಬನೆ ಜಹಾಂತಕ ಆತೀ ಕರನೆ ಸೇವಾ ಮಾತಾಜೀಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ ೨ ಆವೋ ಬಚ್ಚೋ ॥ ೬ ॥
ಇಸೀ ನಗರಮೆ ಗುಲಾಬಬಾಯಿ ಸೇಠಾನೀ ಭೀ ರಹತೀ ಹೈಂ ।
ಲೆಫ್ಟನಂಟ ಕರ್ನಲ ಹಿರಾಲಾಲಜೀಕೀ ಮಾತಾಜೀ ಕಹಲಾತೀ ಹೈಂ ।
ಧರ್ಮ ಮಾರ್ಗಮೆ ಪ್ರೇಮ ಬಢಾನೆ ಅಪನಾ ಹಾಥ ಬಂಟಾತೀ ಹೈಂ ।
ದಾನ ಧರ್ಮ ಕರಕೆ ಬಢಾಯೀ ಮಹಿಮಾ ಮಾಲವ ಪ್ರಾಂತಕೀ ।
ಇಸ ಚಂದನಸೇ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ ೨ ಆವೋ ಬಚ್ಚೋ ॥ ೭ ॥
ಇಂದ್ರಪುರೀಮೆ ಬಡೇ ಬಡೇ ಪಂಡಿತ ಜ್ಞಾನೀ ರಹತೇ ಹೈಂ ।
ಬಂಶೀಧರಜೀ, ನಾಥುಲಾಲಜೀ, ರಮಾನಾಥಜೀ ಕಹಲಾತೆ ಹೈಂ ।
ಅಜ್ಞಾನ ಮಿಟಾನೆ ಜ್ಞಾನ ಜಗಾನೆ ರಾತ–ದಿನ ಏಕ ಕರತೆ ಹೈಂ ।

ಗ್ರಂಥೊಂಕೀ ರಚನಾ ಕರತೇ ಹೈಂ ರಾಹ ದಿಖಾನೆ ಮುಕ್ತಿಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ ಆವೋ ಬಚ್ಚೋ ॥ ೮ ॥
ಇಸೀ ನಗರಕೋ ಪವಿತ್ರ ಕರನೆ ಮಾತಾಜೀ ಭೀ ಆಯೀ ಹೈಂ ।
ಧರ್ಮ ಮಾರ್ಗಪರ ಚಲನೆ ವಾಸ್ತೆ ರಾಹಹಮೆ ದಿಖಾಯೀ ಹೈ ।
ಊಂಚೇ ಆದರ್ಶೋಂಪರ ರಹನೆ ತಕ ಝುಲಕ ನಈ ಸಮಝಾಈ ಹೈ ।
ಧರ್ಮ ಮಾರ್ಗ ಪ್ಯಾರ ಬಢಾಯಾ ಯಹ ಮಹಿಮಾ ಮಾತಾಜೀಕೀ ।
ಇಸ ಚಂದನಸೆ ತಿಲಕ ಕರೋ ತುಮ ಜ್ಯೋತಿ ಜಗಾನೆ ಧರ್ಮಕೀ ।
ವಂದೇ ಜಿನವರಂ, ವಂದೇ ಜಿನವರಂ ಆವೋ ಬಚ್ಚೋ ॥ ೯ ॥

## ಶ್ರೀ ಪರಮ ಪೂಜ್ಯ ೧೦೫ ಕ್ಷುಲ್ಲಿಕಾ ಅನಂತಮತಿ ಮಾತಾಜಿಯವರ ಪ್ರತಿ.

ಶುಭ ಕರ್ಮೋಂಕೆ ಪುಣ್ಯ ಉದಯಸೆ, ಏಕ ಸಹಾರಾ ಮುಝೆ ಮಿಲಾ ।
ಜೀವನ ಪಥಕೀ ರಾಹೋಂಕಾ, ದೀಪಕ ! ತುಮಹಾರಾ ಮುಝೆ ಮಿಲಾ ॥
ಆವಿರ್ಭಾವ ಹುವಾ ಸ್ವರ್ಣಿಮ ಮಯ, ಸದ್ಯಃ ಪ್ರಫುಲ್ಲತಾ ಕಾರೀ ।
ನೂತನ, ಸುಖದಾ ವಹ ಪ್ರಭಾತ ಹೈ, ಜನಗಣಸಭಕಾ ಹಿತಕಾರೀ ॥
ನಿಧಿ ಅಗಾಧಕಾ ಹೃದಯಸ್ಥಲಮೆ, ತರಣಿಃ ಆಲೋಕಿತ ಹೋತಾ ।
ಫಿರ ಭೀ ಆಶಿಷ ದೋ ಹೇ ಅಂಬೆ ! ಗುಣ ಗಾನೆ ಉದ್ಯತ ಹೋತಾ ।
ಸ್ವಯಂ ಭಿಜ್ಞ ಹೂಂ ಪೂರ್ಣ ರೂಪಸೆ, ಜಗ ಯಹ ಹಂಸಿ ಉಡಾವೇಗಾ
ತುಲನಾ ತೇಜಪುಂಜ ರವಿಶಶಿಕೀ, ಕ್ಷೀಣ ದೀಪಸೆ ಅಂಕೇಗಾ ॥
ಕಿಂತು ನಹಿಂ ಹೈ ಮುಝುಕೋ ಅಬ ಭಯ, ವರದಹಸ್ತ ಹೈ ಮಾಂ ತೇರಾ
ಶಾಂತಿ ಸುಧಾಕಾ ಸ್ರೋತ ಬಹಾನೆ, ಗಾಊಂಗಾ ಮೈಂ ಯಶ ತೇರಾ ॥
ಕ್ಷಣಿಕ ದರ್ಶಸೆ ಅಂತಸ್ಥಲಕೀ, ಜ್ಯೋತಿ ಜಾಗತೀ ಹೈ ಸಾರೀ ।
ಐಸೀ ಭವ್ಯ ಮೂರ್ತಿ ಹೈ ತೇರೀ, ಅಕ್ಷಯ ಸುಖಕರ ದುಃಖಹಾರೀ ॥
ಅರ್ಪಣ ಕರತಾ ಪಾದ ಪಂಕಜೋಂ ಮೆ ಶ್ರದ್ಧಾಕೆ ಸುಮನ ಲಿಯೇ ।
ಕೋಟಿ–ಕೋಟಿ ನತ ಮಸ್ತಕ ಹೋಕರ, ಶರಣಾಗತ 'ಜ್ಞಾನೇಶ' ಹಿಯೆ

ಕೃಪಾಕಾಂಕ್ಷಿ—ಜ್ಞಾನೇಶ.

## — ಭಜನ —

ಕರ್ಮ ಉದಯ ಅನಿವಾರ ಜಗತಮೆ । ಸಭೀ ಜೀವ ಭರಮಾಯೆ ಹೈಂ॥
ಕರ್ಮ ಉದಯಕೀ ಜಾಲನೆ । ಬಡೆ ಪುರುಷ ಭೀ ಆಯೆ ಹೈಂ ।
ಯುಗಕೆ ಆದೀ ತೀರ್ಥಂಕರ ಸ್ವಾಮಿ । ಛಹ ಮಹಿನಾ ಬಿನ ಅಶನ ರಹೆ ।
ಕರ್ಮ ಉದಯಸೆ ಸುಪಾರಸ ಪಾರಸ ಜಿನ ಉಪಸರ್ಗ ಲಹೈ ।
ಕರ್ಮ ಉದಯ ಚಕ್ರೀಪದ ಪಾಯೋ । ಭರತೇಶ್ವರ ಬಹು ಸೀಖ ಲಹ್ಯೆಂ
ಕರ್ಮ ಉದಯಸೆ ಉನ್ಹೋಂನೆ, ಮಾನಭಂಗಕೆ ದುಃಖ ಸಹೆ ॥ದೇಖನಾ॥
ಜೋ ಆದಿ ಕುಲಕಾ ತಿಲಕ ಕ್ಷತ್ರಿ ಅರ್ಕಕೀರ್ತಿ ಕುಮಾರ ಹೈ ।
ಭರತೇಶಕಾ ಬೇಟಾ ಬಡಾ । ಯುವರಾಜ ನೃಪ ಸಿರದಾರ ಹೈ ।
ಪರನಾರೀ ಕಾಜ ಅಕಾಜ । ಸೋ ಕ್ಯಾ ಕರೇ ಉಪಜಪಕಾರ ಹೈ ॥
ಯಹಾಂ ಕರ್ಮಕೀ ಕರ್ತವ್ಯತಾ । ಜಗಮೆ ಬಡೀ ಅನಿವಾರ ಹೈ ।
ಬಹುತಬಾರ ಜಗಜೀವ ಕರ್ಮನೆ । ಬಹುತ ಭ್ರಾಂತ ಭಟಕಾಯೆ ಹೈಂ
॥ ಕರ್ಮ ೧ ॥

ಕರ್ಮ ಉದಯ ದಶರಥ ರಾಜಾನೆ । ರಘುವೀರಸೆ ಸುತ ಪಾಯೆ ಥೇ ।
ಕರ್ಮ ಉದಯಸೆ ಉನ್ಹೀಕೋ । ಬನಕೆ ವಾಸ ಕರಾಯೆ ಥೇ ।
ಲಕ್ಷ್ಮಣಕೆ ರಾವಣಕೀ ಶಕ್ತಿ । ಲಗೀ ರಾಮ ಘಬರಾಯೆ ಥೇ ।
ಫಾಸೀ ಲಗಾಕೆ ಬನ ವಿಷೆಂ । ಬನಮಾಲಾ ಜಿಸಕಿ ಚಾಹಮೆ ।
ಮರತೀ ವಹೀ ಲಕ್ಷ್ಮಣ ತಹಾಂ । ವಿಧಿಯೋಗ ಪಹುಂಚೆ ರಾಹಮೆ ।
ಸಂಬೂಕನೆ ಬಾರಹ ಬರಷ । ಸಾಧಾ ಖಡಗ ದುಖ ಪಾಯಕೆ ।
ವಿಧಿ ಜೋಗ ಸೊ ಸಹಜೈ ಲಯೋ । ಲಕ್ಷ್ಮಣನೆ ಹಾತ ಬಢಾಯಕೆ ।
ಉಸ ಅಸೀಸೆ ಸಂಬೂಕ ಕುಮಾರನೆ । ಉನನೆ ಪ್ರಾಣ ಗಮಾಯೆ ಹೈಂ
॥ ಕರ್ಮ. ೨ ॥

ಕರ್ಮ ಉದಯ ಪಾಂಡವ ಬಹು ಭಟಕೆ। ಅಪನೆ ನಾಮ ಛಿಪಾಯೇ ಥೆ
ದೇಶದೇಶಮೆ ಉನ್ಹೋಂನೆ, ರೂಪ ಅನೇಕ ಬನಾಯೆ ಥೇ ।
ಬಾರಹ ಬರಸ ಸಹೇ ದುಖ ಭಾರಿ । ಭೋಜನ ಭೀ ನಹೀ ಪಾಯೆ ಥೇ ।
ಕರ್ಮಯೋಗಸೆ ವಿಪ್ರಬನಪಾಲ ಗ್ವಾಲ ಕಹಲಾಯೆ ಥೇ ॥ ದೇಖನಾ ॥

ವಿಧಿಯೋಗ ನಂಗೆ ಪಗ ಚಲೀ । ವಹ ಬಿಕಟ ವನಕೀ ವಾಟಮೆ ।
ಸತೀವ್ರತ ರಾನೀ ದ್ರೋಪದಿ । ಮಾಲೀನ ಬನಿ ಸೌಗಮೆ ।
ಅತಿ ಬಿಕಟ ರನ ಕರೀ ರಾಜ್ಯ ಪಾಯೋ । ಆಪನೋ ಹರಿ ಸಾತಮೆ ।
ವಿಧಿ ಯೋಗ ಫಿರ ಹೂಂ ದಶ ಛೂಟಾ । ಕರ್ಮ ನಹೀಂ ನಿಜ ಹಾತಮೆ।
ಕ್ಯಾ ಕೋಯೀ ತದಬೀರ ಕರ್ರೈ ನರ । ಪದವೀ ಘರ ಘಬರಾಯೆ ಹೈಂ
॥ ಕರ್ಮ ೩ ॥

ನಗರಸೇಟ ಕೋಟಿ ಧ್ವಜ ಘರಮೆ । ಜನ್ಮ ಹುವಾ ಸೋ ಸೇಠ ಕುವಾರ
ಕರ್ಮ ಉದಯಸೆ ವಿಸನಮೆ ಖೋಯಾ । ಸಾರಾ ದ್ರವ್ಯ ಗಂವಾರ ॥
ಕರ್ಮ ಉದಯ ಪರದೇಶ ಭ್ರಮಣಮೆ । ರಹಾ ನ ವಾಕೀ ದುಃಖ ಲಗಾಕರ
ಕರ್ಮ ಉದಯಸೆ ಉಸೀನೆ । ಫಿರ ಭೀ ಪಾಯಾ ನಿಧಿ ಭಂಢಾರ ।
ಕರ್ಮ ಹೀ ಸೆ ತಾಜ ಪಾವೈ । ಕರ್ಮಕಾ ತಾಬೇದಾರ ಹೈ ॥
ಕರ್ಮ ಹೀ ಸೋ ರಂಕ ಬನಕರ । ಫಿರ ಬನೆ ಸಿರದಾರ ಹೈ ।
ಜಿತನೀ ಅವಸ್ಥಾ ಕರ್ಮ ಕೃತ । ಸೋ ನಹೀಂ ನಿಜ ಇಖ್ತ್ಯಾರ ಹೈ ॥
ವಹ ಧನ್ಯ ಹೈ ಸಂಸಾರಮೆ ಜೋ ಕರೆ ಆಪ ಸವ್ಹಾರ ಹೈ ।
ಕರ್ಮ ಜಿತ ಪದ ಲಹೇ । ಜಿನೇಶ್ವರ, ವೇ ಜಗದೀಶ ಕಹಾಯೆ ಹೈಂ
॥ ಕರ್ಮ ೩ ॥

## — ಭಜನ —

ಏಕ ದಿನ ಜಂಗಲಮೆ ಘುಸಿಯಾರಾ । ಖೋದತ ಖೋದತ ಘಾಸ ಬಿಚಾರಾ
ಘಬರಾ ಗಯಾ ಧೂಪಕಾ ಮಾರಾ । ಛಾಯಾಮೆ ಉಠಿ ಆಯಾ । ಸುಪನೆ
ಏಕ ಈಂಟ ಸಿರಾಹನೆ ಧರ ಕೇ । ಸೋಯ ಗಯೋ ಪೃಥ್ವಿಮೇ ಪರಿಕೆ ॥
ಮುದೆ ಚೈನಸೆ ನೈನ ಸೈನಮೆ । ದೇಖೀ ಅದ್ಭುತ ಮಾಯಾ ॥ ಸುಪನೆ ೨
ದೇಖಾ ಏಕ ಶಹರ ಅತಿ ಭಾರೀ । ಕೋಟ ಕಿಲಾ ಗಢ ಮಹಲ ಅಟಾರೀ ।
ಪ್ರಜಾ ತಹಾಂ ಕೀ ಮಿಲಕರ ಸಾರೀ । ಇಸಕೋ ನೃಪತಿ ಬನಾಯಾ
॥ ಸುಪನೆ ೩ ॥
ಹಾಥೀ ಘೋಡೆ ರಥ ಅಸವಾರೀ । ಪಲ್ಟನ ಫೌಜ ಕರೆ ರಖವಾರೀ ।
ಸೇನಾಪತಿ ಮಂತ್ರಿ ದರಬಾರಿ । ಸಬನೆ ಶೀಶ ಝುಕಾಯಾ ॥ ಸುಪನೆ ೪ ॥
ಬೈಠಿ ತಖ್ತಪರ ಕರ್ರೈ ಹುಕೂಮತ । ಆಜ್ಞಾ ಮಾನೆ ಸಾರೆ ಭೂಪತಿ ।
ಛತ್ರ ಚಮರ ಶಿರ ಢುರೆ । ಸೇವ ಸಬ ಕರೇಂ ದೇಖಿ ಹರಷಾಯಾ
॥ ಸುಪನೆ ೫ ॥

ಬರಿ ನಾರಿ ಸುಂದರ ಸುಖದಾಯಿ | ಚಕ್ರವರ್ತಿ ಸಮ ಸಂಪತಿ ಪಾಯೀ |
ಭೋಗತ ಭೋಗ ಅನೇಕ ಚೈನಸೆ | ಲಾಖೋ ವರ್ಷ ಗವಾಯಾ
|| ಸುಪನೆ ೬ ||

ಏಕ ದಿನ ರಾಜ ಸಭಾಮೆ ಬೈಠೆ | ದೇ ಮುಖ ತಾಲು ಮೂಂಛಿಕೊ ಐಠೆ
ಇತನೆಮೆ ಕೋಯಿ ರಾಹಾಗೀರನೆ | ಆಕರ ಇಸೆ ಜಗಾಯಾ || ಸುಪನೆ ೭||

ಆಂಖ ಖುಲೀ ಜಬ ದೇಖಾ ಜಂಗಲ | ಕಹಾಂ ಗಯೇ ವೇ ಸಾರೆ ಮಂಗಲ
ರಾಜಪಾಟ ಸಬ ಠಾಟ ಬಾಟ | ಪಲಭರಮೆ ಕಹಾ ಸಮಾಯಾ | ಸುಪನೆ
ಹಾಯ ಹಾಯ ಕರ ರೋವನ ಲಾಗಾ | ಲೇ ಖುರಪಾ ಮಾರನಕೋ ಭಾಗಾ
ಅರೇ ಮೂಢ ಪಂಥೀ ತೈ ಮೇರಿ ಖೋಯ ದಮೀ ಸಬ ಮಾಯಾ
|| ಸುಪನೆ ೯ ||

ಇಸೀ ಭಾಂತಿ ದೇಖೆ ಜಗ ಸಪನಾ | ಪರವಸ್ತುಕೋ ಮಾನೆ ಅಪನಾ |
ಲಖಿ ದುನಿಯಾಕಿ ಝೂಠೀ ಸಪನಾ | ಮುಕ್ಖನ ಕ್ಯೋಂ ಗರವಾಯಾ
|| ಸುಪನೆ ೧೦ ||

## — ಭಜನ —

ಕರಮ ವೈರೀ ತೇರೀ ಹಸ್ತಿ | ಮಿಟಾಕರಕೆ ಹಿ ಛೋಡೆಂಗೆ |
ತೇರೀ ಕಬ್ಜೇಸೆ ಆತಮಕೋ | ಹಟಾ ಕರಕೆ ಹಿ ಛೋಡೇಂಗೆ || ಟೇಕ ||
ಹಮ ಅಬ ಇಸ ಮೋಹ ರಾಜಾಕೀ | ಹುಕಮುತ ಕೌನ ಮಾನೇಗಾ ||
ಲಡೇಂಗೆ ನಿಜ ಹಕ್ಕೋಂಪರ ನ ಹರಗಿಜ ಮುಂಹಕೋ ಮೋಡೇಂಗೆ ||೧||
ತುಝೆ ಅಭಿಮಾನ ಕೈ ಕ್ರೋಧಾದಿ | ಪಲಟನ ಪರ ದುರಾಚಾರೀ
ಕ್ಷಮಾ ಅರು ಶಾಂತಿಸೆ ಸಾರೀ | ತೇರೀ ಶಕ್ತಿ ಮರೋಡೆಂಗೆ || ೨ ||
ಚತುರಗತಿ ಜೇಲಖಾನೊಂಮೆ | ಹಮೆ ತೂ ಕೈದ ಕರತಾ ಹೈ |
ಅರೇ ಜಾಲಿಮ ಇನ್ಹಿ ಇಕ ದಿನ | ತಪೋಬುದ್ಧಿಸೆ ತೋಡೇಂಗೆ || ೩ ||
ಪುಲಿಸ ಖುಪಿಯಾಕೋ ದೇವೊಂನೆ | ಫಸಾಯಾ ಜಾಲಮೆ ಅಬತಕ |
ಉನ್ಹೆ ಭೀ ತರ್ಕ ಕರ | ಜಿನದೇವಸೆ ಅಬ ಪ್ರೇಮ ಜೋಡೇಂಗೆ || ೬ ||
ಗುಲಾಮೀಕೇ ಜಂಜೀರೆ ಕಾಟಕೆ | ಆಜಾದ ಹೋ ಮುಕ್ಖನ |
ಮಿಲೇ ಸ್ವರಾಜ್ಯ ಮುಕ್ತಿಕಾ | ವಹೀ ಲೇಕರಕೆ ಛೋಡೇಂಗೆ || ೭ ||

—o—

ಶ್ರೀಪೂಜ್ಯ ೧೦೫ ಅನಂತಮತಿ ಅಮ್ಮನವರ

# ದಶಧರ್ಮದ ವಿಷಯದಲ್ಲಿ ಅಮೂಲ್ಯ ಪ್ರವಚನ.

## ಮಂಗಲಾಚರಣೆ.

ಜೀಯಾಜ್ಜೈನಂ ಶಾಸನಮನಾದಿನಿಧನಂ ಸುವಂದ್ಯಮನವದ್ಯಂ ।
ಯದಪಿ ಚ ಕುಮತಾರಾತೀನದಯಂ ಧೂಮಧ್ವಜೋಪಮಂ
ದಹತಿ ॥ — ಪಂಚಾಧ್ಯಾಯಿ.

ಅರ್ಥಃ— ಯಾವ ಜೈನಸಿದ್ಧಾಂತವು ( ದಿ. ಜೈನ ಶಾಸ್ತ್ರ ಮತ್ತು ಧರ್ಮ ) ವಸ್ತು ಸ್ವರೂಪವನ್ನು ಪ್ರಕಟಿಸುತ್ತದೆಯೋ, ಯಾವುದು ಅನಾದಿ ಮತ್ತು ಅನಂತವಾಗಿದೆಯೋ, ಮತ್ತು ನಿರ್ದೋಷವಾಗಿರುತ್ತದೆಯೋ ಅದು ತತ್ವ ಜ್ಞಾನಿಗಳಿಂದ ಆದರಣೀಯ ಮತ್ತು ವಂದನೀಯವಾಗಿದೆ. ಅದು ಆಧುನಿಕ ಸದೋಷ, ಏಕಾಂತ ಹಟಗ್ರಾಹೀ ಧರ್ಮಗಳನ್ನು ಅಗ್ನಿಯಂತೆ ನಿರ್ದಯವಾಗಿ ಸುಡುತ್ತದೆ. ಅಂತಹ ನಿರ್ದೋಷವಾದ ಜೈನ ಶಾಸನವು ನಿರಂತರ ಜಯಶೀಲವಾಗಿರಲಿ.

## ಭೇದಾಭೇದ ರೂಪವಾದ ಧರ್ಮದ ಉಪದೇಶ.

ಈ ಧರ್ಮದ ಪರಿಪಾಟಿಯು ಅನಾದಿ ಕಾಲೀನವಾಗಿದೆ. ಅನಾದಿ ಕಾಲದಿಂದ ಈ ಧರ್ಮದ ಅವಲಂಬನೆಯನ್ನು ಮಾಡಿ ತೀರ್ಥಂಕರರು, ಚಕ್ರವರ್ತಿ, ಕಾಮದೇವ ಮೊದಲಾದ ಮಹಾ ಪುರುಷರು ಕರ್ಮ ನಿರ್ಜರೆಯನ್ನು ಮಾಡಿ ಮುಕ್ತಿಯನ್ನು ಹೊಂದುತ್ತಿರುವರು. ಈ ಪರಂಪರೆಯು ಸತತ ನಡೆದಿದೆ. ಶ್ರೀಭಗವಾನ್ ಆದಿನಾಥ ತೀರ್ಥಂಕರರು ಮತ್ತು ಅಂತಿಮ ತೀರ್ಥಂಕರ ಭಗವಾನ್ ಮಹಾವೀರರು, ಇವರ ಶಿಷ್ಯರು ಅಧಿಕ ಜ್ಞಾನಿಗ

ಳಾಗಿರಲಿಲ್ಲ. ಆದುದರಿಂದ ಅವರು ಭೇದರೂಪವಾದ ಚಾರಿತ್ರದ ಉಪದೇಶ ವನ್ನು ಮಾಡಿದರು. ಆದರೆ ಇತರ ಅಜಿತ ತೀರ್ಥಂಕರರು ಮೊದಲಾಗಿ ಪಾರ್ಶ್ವನಾಥ ತೀರ್ಥಂಕರರ ವರೆಗಿನ ತೀರ್ಥಂಕರರ ಸಮಯದಲ್ಲಿ ಶಿಷ್ಯರು ಜ್ಞಾನಿಗಳಾದ್ದು ಭದ್ರ ಪರಿಣಾಮಿಗಳಾಗಿದ್ದರು. ಆದುದರಿಂದ ಅವರು ಅಭೇದ ರೂಪವಾದ ನಿಶ್ಚಯ ಚಾರಿತ್ರದ ಉಪದೇಶವನ್ನು ಮಾಡಿದರು. ಆ ಕಾಲದಲ್ಲಿ ಎಲ್ಲರೂ ವಿಶೇಷತಃ ಜ್ಞಾನಿಗಳಾಗಿದ್ದರಿಂದ ಒಂದು ಸಾರಿ ಕೇಳಿದ ವಿಷಯವು ಅವರಿಗೆ ಕಂಠಪಾಠವಾಗುತ್ತಿತ್ತು. ಅಂತಿಮ ತೀರ್ಥಂ ಕರರಾದ ಮಹಾವೀರರ ಸಮಯದಲ್ಲಿ ಕಾಲದೋಷದಿಂದ ಜನರ ಬುದ್ಧಿ, ಆಯುಷ್ಯ, ಬಲ ಮೊದಲಾದವುಗಳಲ್ಲಿ ನ್ಯೂನತೆಯು ಬಂದಿದ್ದರಿಂದ ಶಾಸ್ತ್ರ ರಚನೆಯು ಆಗಬೇಕಾಗಿ ಬಂತು. ಭಗವಂತನ ದಿವ್ಯ ಧ್ವನಿಯಿಂದ ಶಾಸ್ತ್ರದ ಸೃಷ್ಟಿಯಾಯಿತು. ಈ ಅಪೇಕ್ಷೆಯಿಂದ ಆ ಕಾಲದಿಂದ ಶಾಸ್ತ್ರದ ರಚನೆ ಯಾಗಿ ಧರ್ಮದ ಪರಂಪರೆಯು ನಡೆಯುತ್ತಿದೆ. ಆದುದರಿಂದ ಈ ಶ್ರುತ ಪರಂಪರೆಗೆ ಸಾದಿ ಎಂದು ವ್ಯವಹಾರದಿಂದ ಹೇಳಿದ್ದರೂ ದ್ರವ್ಯದೃಷ್ಟಿಯಿಂದ ನಿಶ್ಚಯ ದೃಷ್ಟಿಯಿಂದ ಶ್ರುತ ಮತ್ತು ಧರ್ಮವು ಅನಾದಿ ಮತ್ತು ಅನಿಧ ನವಾಗಿದೆ. ವುಗಳ ನಾಶವು ಎಂದೂ ಆಗಲಾರದು.

ಧರ್ಮದ ಸ್ವರೂಪವು ಉತ್ತಮ ಕ್ಷಮಾದಿ ದಶಲಕ್ಷಣ ರೂಪವಾ ಗಿದೆ. ಈ ದಶಲಕ್ಷಣಗಳಿಂದ ಆತ್ಮನ ಅಂತರಂಗ ಧರ್ಮದ ಪರಿಚಯವಾ ಗುತ್ತದೆ. ವಸ್ತುವಿನ ಸ್ವಭಾವಕ್ಕೆ ಧರ್ಮವೆಂದು ಹೇಳುತ್ತಾರೆ. ಅಂದರೆ ಸ್ವಭಾವವೇ ಧರ್ಮರೂಪವಾಗಿದೆ. ಲೋಕದಲ್ಲಿರುವ ಯಾವ ಪದಾರ್ಥ ಗಳೂ ತಮ್ಮ ಸ್ವಭಾವವನ್ನು ಬಿಡುವುದಿಲ್ಲ. ಒಂದು ವೇಳೆ ಸ್ವಭಾವದ ನಾಶ ವಾದರೆ ಪದಾರ್ಥದ ನಾಶವಾಗಬಹುದು. ಅಂದರೆ ಪದಾರ್ಥದ ಅಸ್ತಿತ್ವ ಉಳಿಯಲಾರದು. ಆದುದರಿಂದ ಹಾಗೆ ಆಗಲಾರದು. ಆತ್ಮನೆಂಬ ದ್ರವ್ಯದ ಸ್ವಭಾವವು ಕ್ಷಮಾದಿರೂಪವಾಗಿದೆ. ಮತ್ತು ಕ್ರೋಧವು ಕರ್ಮಜನಿತ ಉಪಾಧಿಯಾಗಿದೆ. ಆವರಣವಾಗಿದೆ. ಕ್ರೋಧವೆಂಬ ಕರ್ಮದ ಅಭಾವ

ವಾಗಲು ಆತ್ಮನ ಕ್ಷಮೆಯೆಂಬ ಸ್ವಭಾವವು ತನ್ನಷ್ಟಕ್ಕೆ ತಾನೇ ಪ್ರಕಟ ವಾಗುವುದು. ಕ್ಷಮಾದಿಕ ಗುಣಗಳು ಆತ್ಮನ ಸ್ವಭಾವವಾಗಿದೆ. ಮೋಹ ನೀಯ ಕರ್ಮದ ಭೇದವಾದ ಕ್ರೋಧಾದಿ ಕಷಾಯಗಳ ದೆಶೆಯಿಂದ ಆತ್ಮನ ಸ್ವಭಾವವು ಅನಾದಿಕಾಲದಿಂದ ಮುಚ್ಚಲ್ಪಟ್ಟದೆ. ಕ್ರೋಧಾದಿ ಕಷಾಯಗಳ ಅಭಾವದಿಂದ ಕ್ಷಮಾದಿಕ ಆತ್ಮನ ಸ್ವಾಭಾವಿಕ ಗುಣಗಳು ಪ್ರಕಟವಾಗುತ್ತವೆ, ಆದುದರಿಂದ ನೀವು ಕ್ರೋಧಾದಿ ಕಷಾಯಗಳನ್ನು ಜಯಿಸಿರಿ.

## ಉತ್ತಮ ಕ್ಷಮಾ ಧರ್ಮಾಯ ನಮಃ

ಸೂತ್ರ— ಶರೀರಸ್ಥಿತಿಹೇತುಮಾರ್ಗಣಾರ್ಥಂ ಪರಕುಲಾನ್ಯುಪಗಚ್ಛತೋ ಭಿಕ್ಷೋರ್ದುಷ್ಟಜನಾಕ್ರೋಶಪ್ರಹಸನಾವಜ್ಞಾ ತಾಡನ ಶರೀರವ್ಯಾಪಾದನಾದೀನಾಂ ಸನ್ನಿಧಾನೇ ಕಾಲುಷ್ಯಾನುತ್ಪತ್ತಿಃ ಕ್ಷಮಾ ॥ (ಸರ್ವಾರ್ಥಸಿದ್ಧಿ)

## ಉತ್ತಮ ಕ್ಷಮಾ ಧರ್ಮದ ನಿರೂಪಣೆ.

ಕ್ರೋಧವೆಂಬ ಶತ್ರುವನ್ನು ಜಯಿಸುವುದಕ್ಕೆ ಉತ್ತಮ ಕ್ಷಮೆ ಎಂದು ಹೆಸರು. ಈ ಕ್ರೋಧವೆಂಬ ವೈರಿಯು ಜೀವನದಲ್ಲಿರುವ ಸಂಯಮಭಾವ, ಸಂತೋಷಭಾವ, ಮತ್ತು ನಿರಾಕುಲತಾ ಮೊದಲಾದ ಗುಣಗಳನ್ನು ಸುಡಲಿಕ್ಕೆ ಅಗ್ನಿರೂಪನಾಗಿದ್ದಾನೆ, ಈ ಅಗ್ನಿಯು ಸಮ್ಯಗ್ದರ್ಶನ ಮೊದಲಾದ ರತ್ನಭಂಡಾರಗಳನ್ನು ಸುಡುತ್ತದೆ. ಯಶಃಕೀರ್ತಿಯನ್ನು ನಷ್ಟ ಮಾಡುತ್ತದಲ್ಲದೆ ಅಪಕೀರ್ತಿಯನ್ನು ಬೆಳೆಸುತ್ತದೆ. ಆದುದರಿಂದ ಎಲೇ ಭವ್ಯಾತ್ಮರೇ ನೀವು ಕ್ರೋಧವೆಂಬ ಈ ಶತ್ರುವನ್ನು ನಾಶ ಮಾಡಿರಿ. ಈ ದೊಡ್ಡ ಶತ್ರುವನ್ನು ನಾಶ ಮಾಡದೆ ಆತ್ಮಕಲ್ಯಾಣನಾವಾಗರದು. ಆತ್ಮಕಲ್ಯಾಣ ಮಾಡಿಕೊಳ್ಳಬೇಕೆಂಬ ಇಚ್ಛೆ ಇದ್ದರೆ ನೀವು ಕ್ರೋಧರೂಪೀ ಅಗ್ನಿಯನ್ನು ಕ್ಷಮೆಯೆಂಬ ನೀರಿನಿಂದ ನಂದಿಸಿರಿ.

ಐಕಾ ದಶಧರ್ಮ ಶುಭಕರ್ಮ–
ಮೋಕ್ಷ ಸುಖಾಚೆ ಧರ್ಮ, ಐಕಾ ದಶಧರ್ಮ.
ಉಠತಾ ಕ್ರೋಧಾಗ್ನಿ ಸತ್ವರ–
ಘಾಲುನಿ ವಿಝುವಾ ನೀರ, ಐಕಾ ದಶಧರ್ಮ.

ಆದುದರಿಂದ ನೀವು ಮೋಕ್ಷ ಸುಖವನ್ನು ಕೊಡುವ ದಶಧರ್ಮ ವನ್ನು ಕೇಳಿ ಮನನ ಮಾಡಿರಿ. ಕ್ರೋಧಾಗ್ನಿಯು ಪ್ರಜ್ವಲಿತವಾಗಲು ಕ್ಷಮೆಯೆಂಬ ನೀರನ್ನು ಹಾಕಿ ಅದನ್ನು ಕೂಡಲೇ ಆರಿಸಿರಿ.

ಕ್ರೋಧವೈರಿಯನ್ನು ಜಯಿಸಿ ಇವನು ಜೀವಗಳಲ್ಲಿ ವೈರವನ್ನು ಬೆಳೆಸುವನು. ಬಹಳ ದಿವಸದ ಸಮ್ಯಕ್ತ್ವವನ್ನು ಒಂದು ಕ್ಷಣದಲ್ಲಿ ನಷ್ಟ ಮಾಡುವನು. ಕ್ರೋಧವೆಂಬ ರಾಕ್ಷಸನ ಅಧೀನಗಾದವರ ವಚನವು ಅಸತ್ಯ ವಾಗಿರುತ್ತದೆ. ಅದು ಲೋಕನಿಂದ್ಯ ಭಿಲ್ಲ ಚಾಂಡಾಲಾದಿಗಳಿಗೇನೆಯೇ ಮಾತಾಡಲು ಯೋಗ್ಯವಾಗಿರುತ್ತದೆ. ಇಂಥಹ ವಚನಗಳನ್ನು ಮಾತಾಡಿ ಕ್ರೋಧಿಯು ತನ್ನ ಸಮಸ್ತ ಧರ್ಮಗಳನ್ನು ಕೆಡಿಸುತ್ತಾನೆ. ಮನುಷ್ಯನು ಕ್ರೋಧಿಯಾದರೆ ತನ್ನ ತಾಯಿ–ತಂದೆಗಳಿಗೂ ಹೊಡೆಯುತ್ತಾನೆ. ಮಕ್ಕಳು ಸ್ತ್ರೀಯರು, ಬಾಲಕರು, ಸ್ವಾಮಿ, ಸೇವಕರು, ಮಿತ್ರರು ಎಂಬ ಭೇದ ಅಲ್ಲಿರುವುದಿಲ್ಲ. ಎಲ್ಲರಿಗೂ ಬಡೆದು ಅವರ ಪ್ರಾಣ ನಾಶ ಮಾಡುತ್ತಾನೆ. ಮತ್ತು ತೀವ್ರ ಕ್ರೋಧದಿಂದ ವಿಷ ಶಸ್ತ್ರಾದಿಗಳ ಪ್ರಯೋಗ ಮಾಡಿ ತನ್ನ ಆತ್ಮಹತ್ಯೆಯನ್ನು ಮಾಡುತ್ತಾನೆ. ಆದುದರಿಂದ ಎಲೇ ಭವ್ಯಾತ್ಮರೇ ! ಈ ವಿಷಯವನ್ನು ತಿಳಿದು ಮನನ ಮಾಡಿ ಆ ಕ್ರೋಧವನ್ನು ಬಿಡಿರಿ. ವಿವೇಕಿಗಳಾಗಿರಿ. ಜ್ಞಾನವಿಲ್ಲದೆ ಈ ಕ್ರೋಧವೆಂಬ ಶತ್ರುವನ್ನು ನಾಶ ಮಾಡಲು ಸಾಧ್ಯವಿಲ್ಲ, ಅಜ್ಞಾನಿಗಳು ಕ್ರೋಧವನ್ನು ಗೆಲ್ಲದೆ ತಮಗೆ ಸುಖವಾಗಬೇಕೆಂದು ಪ್ರಯತ್ನ ಪಡುತ್ತಿರುತ್ತಾರೆ. ಆದರೆ ಅದು ಸಿಗುವು ವುದಿಲ್ಲ. ಕಾರಣ ಸುಖವನ್ನು ನಾಶ ಮಾಡುವ ದೋಷವೆಂದರೆ ಕ್ರೋಧ.

ಅದನ್ನು ಜಯಿಸದೆ ಸುಖ ಪ್ರಾಪ್ತಿಯಾಗಲಾರದು. ಮಹಾಕವಿ ರತ್ನಾಕರನು ಶತಕತ್ರಯದಲ್ಲಿ ಹೀಗೆ ಹೇಳುತ್ತಾನೆ.

**ಬಿಡದೆ ಕಷಾಯಮುಂ ಸುಡದೆ ಇಂದ್ರಿಯ ತೃಷ್ಣೆಗಳಂ ಪರೀಷಹ-**
**ಕ್ಕೊಡನಿದಿರಾಗಿ ಗೆಲ್ಲದೆ ಸುಗುಪ್ತಿಗಳಂ ಪೊಗದಾತ್ಮನಂ ಮಲಂ**
**ಬಿಡೆ ತನುವಿಂದ ಬೇರ್ಪಡಿಸಿ ನೋಡದೆ ಸುಮ್ಮನೆ ಕರ್ಮಶತ್ರುವೇ**
**ಬಿಡುಬಿಡು ಪೋಗೆನಲ್ ನುಡಿಗೆ ಪೋದಪುದೇ ಅಪರಾಜಿತೇಶ್ವರಾ**

( ಶತಕತ್ರಯ )

ಅರ್ಥ—ಮನುಷ್ಯನು ತಾನು ಸುಖಿಯಾಗಬೇಕೆಂದು ಅಪೇಕ್ಷಿಸುತ್ತಾನೆ. ಆದರೆ ಕ್ರೋಧವನ್ನು ಬಿಡದೆ ಪಂಚೇಂದ್ರಿಯ ವಿಷಯಗಳನ್ನು ಸುಡದೆ ಇಪ್ಪತ್ತೆರಡು ಪರೀಷಹಗಳನ್ನು ಜಯಿಸದೆ, ಗುಪ್ತಿತ್ರಯಗಳನ್ನು ಹೊಂದದೆ, ಆತ್ಮನನ್ನು ಶರೀರದಿಂದ ಭಿನ್ನವಾಗಿ ನೋಡದೆ, ಕೇವಲ ಮಾತಿನಿಂದ ಕರ್ಮ ಶತ್ರುವನ್ನು ನೀನು ಹೋಗು ಹೋಗೆಂದು ಹೇಳಿದರೆ ಆ ಕರ್ಮಶತ್ರು ಹೋಗುವನೇ ? ಹೋಗಲಾರನು. ಅವನು ಹೋಗದೆ ಈ ಆತ್ಮನು ಸುಖಿಯಾಗಲಾರನು.

ಆದುದರಿಂದ ಮೊದಲು ಚಿತ್ತವನ್ನು ವಶ ಮಾಡಿಕೊಳ್ಳಿರಿ. ಕ್ರೋಧವನ್ನು ಬಿಡಿರಿ. ಮಾತಿನಿಂದ ಕರ್ಮಮಲ ಹೋಗುವುದಿಲ್ಲ. ಎಲ್ಲಾ ಶತ್ರುಗಳಲ್ಲಿ ಕ್ರೋಧನೆಂಬ ಶತ್ರುವು ಈ ಜೀವನ ಎಲ್ಲಾ ವಿಧದಿಂದಲೂ ಆಘಾತವನ್ನು ಮಾಡುತ್ತಾನೆ. ಬಹಳ ದೊಡ್ಡ ಶತ್ರುವೆಂದರೆ ಕ್ರೋಧ. ಕ್ರೋಧದಿಂದ ದೊಡ್ಡ ದೊಡ್ಡ ಪುರುಷರ ನಾಶವಾಗಿದೆ. ಕ್ರೋಧದಿಂದ ದ್ವೀಪಾಯನ ಮುನಿಯ ಸ್ಥಿತಿ ಏನಾಯಿತೆಂದು ನೋಡಿರಿ. ಅನೇಕ ವರ್ಷಗಳ ಘೋರ ತಪಶ್ಚರ್ಯೆಯನ್ನು ಮಾಡಿ ಋದ್ಧಿ ಸಂಪನ್ನನಾಗಿದ್ದರೂ ಕ್ರೋಧದ ವಶೀಭೂತನಾಗಿ ಆ ಯೋಗಿಯು ದೇವ ನಿರ್ಮಿತ ದ್ವಾರಕಾನಗರಿಯನ್ನು ಸುಟ್ಟು ಭಸ್ಮ ಮಾಡಿದನು. ಆದರೂ ಅವನ ಕ್ರೋಧದ ಉಪಶಮವಾಗ

ಲಿಲ್ಲ. ಪುನಃ ಆ ಕ್ರೋಧಾಗ್ನಿಯಿಂದ ತನ್ನನ್ನು ಸುಟ್ಟುಕೊಂಡು ದುರ್ಗತಿಗೆ ಹೋದನು. ಆದುದರಿಂದ ಭವ್ಯರೇ ! ಈ ವಿಷಯವನ್ನು ಚೆನ್ನಾಗಿ ತಿಳಿದು ನೀವು ಕೋಧವೆಂಬ ಘಾತಕ ಶತ್ರುವನ್ನು ನಾಶ ಮಾಡಲು ಪ್ರಯತ್ನ ಮಾಡಿರಿ. ಕ್ರೋಧವು ಆತ್ಮನ ಗುಣಧರ್ಮವಲ್ಲ. ಆತ್ಮನ ವೈಭಾವಿಕ ಶಕ್ತಿಯಿಂದ ಮತ್ತು ಪುದ್ಗಲ ಪರಪರಿಣತಿಯ ನಿಮಿತ್ತದಿಂದ ಆತ್ಮನು ಕೋಪಾವಿಷ್ಟನಾಗುತ್ತಾನೆ. ನಿಶ್ಚಯ ದೃಷ್ಟಿಯಿಂದ ವಿಚಾರ ಮಾಡಿದರೆ ಆತ್ಮನು ಕೋಪಿಯಲ್ಲ. ಅವನು ಹೇಗಿದ್ದಾನೆ ಈ ವಿಷಯವನ್ನು ಪರಮಾನಂದ ಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ.

ನ ಕೋಪಂ ನ ಮಾನಂ ನ ಮಾಯಾ ನ ಲೋಭಂ
ಚಿದಾನಂದರೂಪಂ ನಮೋ ವೀತರಾಗಂ ||

— ಪರಮಾನಂದಸ್ತೋತ್ರ.

ಅಂದರೆ ಆತ್ಮನು ಕ್ರೋಧಿಯಲ್ಲ, ಮಾನಿಯಲ್ಲ, ಮಾಯಾವಿಯಲ್ಲ, ಹಾಗೆಯೇ ಲೋಭಿಯೂ ಅಲ್ಲ. ಅವನು ಚಿದಾನಂದ ಮತ್ತು ವೀತರಾಗ ಸ್ವರೂಪಿಯಾಗಿದ್ದಾನೆ.

ಪರ ಪರಿಣತಿಯನ್ನು ತನ್ನದೆಂದು ತಿಳಿದುಕೊಂಡು ಅವನು ದುಃಖಿಯಾಗಿದ್ದಾನೆ. ನೀರು ನದಿಯಲ್ಲಿ ತನ್ನ ಸ್ವರೂಪದಲ್ಲಿರುವಾಗ ತಣ್ಣಗಾಗಿರುತ್ತದೆ. ಅದೇ ನೀರು ಪಾತ್ರದಲ್ಲಿ ಬಂದು ಅದಕ್ಕೆ ಬೆಂಕಿಯ ಸಂಗತಿ ಸಿಕ್ಕಿದರೆ ಬಿಸಿಯಾಗುತ್ತದೆ. ತನ್ನ ಸ್ವರೂಪವನ್ನು ಬಿಡುತ್ತದೆ. ದುಃಖಿಯಾಗುತ್ತದೆ. ಇದೇ ಪ್ರಕಾರವಾಗಿ ಅನಾದಿ ಕಾಲದಿಂದ ಆತ್ಮನು ಶರೀರದ ಸಂಗವನ್ನು ಮಾಡಿ ದುಃಖವನ್ನು ಅನುಭವಿಸುತ್ತಿದ್ದಾನೆ. ಇದು ನನ್ನ ನಿಜವಾದ ಸ್ವರೂಪವಲ್ಲವೆಂಬ ವಿವೇಕವು ಭೇದವಿಜ್ಞಾನದ ಬಲದಿಂದ ಯಾವಾಗ ಅವನಿಗೆ ಆಗುವುದೋ ಆಗ ಕ್ರೋಧವಶನಾಗದೆ ಅವನು ತನ್ನ ಸ್ವರೂಪದಲ್ಲಿರುವನು. ಭೇದವಿಜ್ಞಾನವು ಜೀವನ ಕ್ರೋಧವೆಂಬ ದೊಡ್ಡ ಕಗ್ಗತ್ತಲೆ

ಯನ್ನು ದೂರ ಮಾಡಲು ದೀಪದಂತಿವೆ. ಸೂರ್ಯನಂತಿದೆ. ಆ ಭೇದ ಜ್ಞಾನದ ಬಲದಿಂದ ಕ್ರೋಧವೆಂಬ ಅಂಧಕಾರವನ್ನು ಈ ಜೀವನು ಸುಲಭ ವಾಗಿ ಜಯಿಸುವನು, ಅದನ್ನು ಹೇಗೆ ಜಯಿಸುವನೆಂಬು ಆಚಾರ್ಯರು ಇಲ್ಲಿ ಹೇಳಿದ್ದಾರೆ.

**ಜ್ಞಾನಂ ಸ್ಯಾತ್ಕುಮತಾಂಧಕಾರತರಣಿ ಜ್ಞಾನಂ ಜಗಲ್ಲೋಚನಂ**
**ಜ್ಞಾನಂ ನೀತಿತರಂಗಿಣೀ ಜಲನಿಧಿರ್ಜ್ಞಾನಂ ಕಷಾಯಾಪಹಂ,**
**ಜ್ಞಾನಂ ನಿರ್ವೃತಿ ವಶ್ಯಮಂತ್ರಮಮಲಂ ಜ್ಞಾನಂ ಮನಃ ಪಾವನಂ**
**ಜ್ಞಾನಂ ಸ್ವರ್ಗಗತಿ ಪ್ರಯಾಣಪಟಹಂ ಜ್ಞಾನಂ ನಿದಾನಂ ಶ್ರಿಯಃ**

( ಪ್ರಶ್ನೋತ್ತರ ಮಾಣಿಕ್ಯಮಾಲಾ )

ಅರ್ಥಃ—ಜ್ಞಾನವು ಮಿಥ್ಯಾತ್ವವೆಂಬ ಕತ್ತಲೆಯನ್ನು ನಾಶ ಮಾಡಲು ಸೂರ್ಯನಂತಿದೆ. ಇದು ಸಮಸ್ತ ಲೋಕದ ಕಣ್ಣಿನಂತಿದೆ. ನೀತಿ ಎಂಬ ನದಿಗಳ ಉಗಮಸ್ಥಾನವಾಗಿದೆ. ಕ್ರೋಧಕಷಾಯವನ್ನು ನಾಶ ಮಾಡುವ ಪ್ರಬಲ ಶಸ್ತ್ರವಾಗಿದೆ. ಮುಕ್ತಿ ಎಂಬ ನಾರಿಯನ್ನು ವಶ ಮಾಡಲು ಮಂತ್ರದಂತಿದೆ. ಮನಸ್ಸನ್ನು ಪವಿತ್ರ ಮಾಡಲು ನೀರಿನಂತಿದೆ. ಸ್ವರ್ಗ ಪ್ರಯಾಣ ಮಾಡುವ ಶುಭ ವೇಳೆಯ ಮಂಗಲವಾದ್ಯವಾಗಿದೆ. ಇಷ್ಟೇ ಅಲ್ಲ. ಈ ಜ್ಞಾನವು ಸರ್ವ ಸಂಪತ್ತಿಗಳ ಆಧಾರರೂಪವಾಗಿದೆ.

ಆದರೆ ಈ ಜ್ಞಾನ ಯಾವುದು ? ಅನಂತ ಸಾರಿ ಈ ಜೀವನು ಜ್ಞಾನಿಯಾಗಿದ್ದಾನೆ. ಲೌಕಿಕ ಶಿಕ್ಷಣದ ಉಚ್ಚ ಪದವಿಗಳನ್ನು ಪ್ರಾಪ್ತ ಮಾಡಿ ಜ್ಞಾನಿ ಎಂದೆನ್ನಿಸಿಕೊಂಡಿದ್ದಾನೆ. ಆದರೆ ಈ ಜ್ಞಾನದಿಂದ ಕರ್ಮ ವೆಂಬ ದೊಡ್ಡ ಶತ್ರುವನ್ನು ನಾಶ ಮಾಡಲು ಶಕ್ಯವಿಲ್ಲ. ಆದುದರಿಂದ ನೀವು ಭೇದ ಜ್ಞಾನಿಗಳಾಗಬೇಕು. ಭೇದಜ್ಞಾನದ ಶಕ್ತಿಯು ಅಪರಿಮಿತವಾಗಿದೆ. ಭೇದಜ್ಞಾನಿಯು ಹೀಗೆ ವಿಚಾರ ಮಾಡುತ್ತಾನೆ. ಕರ್ಮದ ಉದಯ ಮತ್ತು ಉದೀರಣಾ ಜಡರೂಪವಾಗಿದೆ. ಪುದ್ಗಲರೂಪವಾಗಿದೆ. ಇವುಗಳಿಂದ ನಾನು ಭಿನ್ನನಾಗಿದ್ದೇನೆ. ನಾನು ದ್ರಷ್ಟಾರೂಪದಲ್ಲಿದ್ದೇನೆ. ಈ ಜ್ಞಾನವು

ವನಗೆ ಇನ್ನೂ ದೊರೆತಿಲ್ಲ. ಆದುದರಿಂದಲೇ ನಾನು ಇದುವರೆಗೆ ಸಂಸಾರ ದಲ್ಲಿ ಭ್ರಮಣ ಮಾಡುತ್ತಿದ್ದೇನೆ. ಭೇದ ಜ್ಞಾನ ಆಗದಿದ್ದರೆ ಸಂಸಾರದಿಂದ ಬಿಡುಗಡೆಯಾಗಲು ಸಾಧ್ಯವಿಲ್ಲ. ಭೇದಜ್ಞಾನವು ಹೇಗಿದೆ ? ಅದು ಜೀವನ ಅನಂತಭವದ ಕರ್ಮವೆಂಬ ಕಲ್ಮಷವನ್ನು ನಿಮಿಷ ಮಾತ್ರದಲ್ಲಿ ನಾಶ ಮಾಡುತ್ತದೆ. ಆದುದರಿಂದ ನೀವು ಶಮ್ಯಕ್ತ್ವ ಮತ್ತು ಸುಜ್ಞಾನಿಗಳ ಗಿರಿ. ಷಟ್‌ಖಂಡ ರಾಜ್ಯ ಭೋಗಗಳನ್ನು ಭೋಗಿಸುತ್ತಿದ್ದರೂ, ವಿಪುಲ ಸಂಸಾ ರದಲ್ಲಿ ಮುಳುಗಿದ್ದರೂ ಭರತೇಶ್ವರನು ಪ್ರತಿ ನಿತ್ಯ ಯಾವ ವಿಚಾರದಲ್ಲಿದ್ದ ನೆಂದು ಈ ಕೆಳಗಿನ ಪಂಕ್ತಿಗಳಿಂದ ತಿಳಿಯುತ್ತದೆ.

ನಾನಾತ್ಮನಿದು ದೇಹ ತಾನೆ ಸುಜ್ಞಾನಿ-
ಯಜ್ಞಾನಿಯಿದು ದೇಹಯೆಂದರಿದೂ,
ಜ್ಞಾನಾಕ್ಷದಿಂದ ಹಂಸನ ನೋಡು-
ತಿದ್ದನಾ ಭೂನಾಥ ತನ್ನ ದೇಹದೊಳು ||

( ಭರತೇಶವೈಭವ )

ಅರ್ಥಃ— ಚಕ್ರವರ್ತಿ ಭರತೇಶ್ವರನು ಸದಾ ಈ ವಿಚಾರವನ್ನು ಭಾವಿ ಸುತ್ತಿದ್ದನು- ನಾನು ಆತ್ಮನಿದ್ದೇನೆ. ಇದು ಶರೀರ ಜಡ, ಆತ್ಮನಿಂದ ಭಿನ್ನ ವಾಗಿದೆ. ಅಜ್ಞಾನಿಯಾಗಿದೆ. ಶರೀರ ಮತ್ತು ಆತ್ಮ ಈ ಎರಡೂ ಸ್ವತಂತ್ರ ಭಿನ್ನವಾಗಿವೆ. ಶರೀರದೊಡನೆ ಆತ್ಮನ ಏನೂ ಸಂಬಂಧವಿಲ್ಲ. ಈ ಸುಜ್ಞಾ ನವೆಂಬ ಕಣ್ಣಿನಿಂದ ಶರೀರದಲ್ಲಿರುವ ಪರಮಾತ್ಮನ ದರ್ಶನ ಮಾಡುತ್ತಿ ದ್ದನು. ಈ ಭೇದವಿಜ್ಞಾನದ ಬಲದಿಂದ ಅಂತರ್ಮುಹೂರ್ತದಲ್ಲಿಯೇ ಅವನು ಆತ್ಮಸಿದ್ಧಿಯನ್ನು ಪಡೆದನು.

ಭೇದ ವಿಜ್ಞಾನದ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇದರ ಸಾಮರ್ಥ್ಯದಿಂದಲೇ ಭರತೇಶ್ವರನು ಕೇವಲಜ್ಞಾನ ಸಂಪನ್ನನಾದನು ಮೋಕ್ಷ ಸಾಮ್ರಾಜ್ಯದ ಅಧಿಪತಿಯಾದನು.

ಅಲ್ಪ ಕಾಲನೆ ಭರತ ಚಕ್ರಧರ–ನಿಜ ಆತಮಕೋಧ್ಯಾಯ ಖರೊ। ಕೇವಲಜ್ಞಾನ ಪಾಯಭವಿಬೋಧೇ ತತ್ಷಣಪಾಯೇ ಲೋಕಶಿರೋ ॥ (ಅಧ್ಯಾತ್ಮಪದ ಸಂಗ್ರಹ)

ಅರ್ಥಃ—ಅಲ್ಪ ಕಾಲದಲ್ಲಿಯೇ ಭರತಚಕ್ರವರ್ತಿಯು ತನ್ನ ಆತ್ಮನನ್ನು ಧ್ಯಾನ ಮಾಡಿ ಕೇವಲಜ್ಞಾನವನ್ನು ಹೊಂದಿದನು. ಭವ್ಯರಿಗೆ ಉಪದೇಶ ಮಾಡಿ ಲೋಕ ಶಿಖರವನ್ನ ತತ್‌ಕ್ಷಣ ಹೊಂದಿದನು. ಹೀಗೆ ಭೇದವಿಜ್ಞಾನದ ಮಹಿಮೆಯು ಅಚಿಂತ್ಯವಾಗಿದೆ. ಆದುದರಿಂದ ಭವ್ಯಾತ್ಮರೇ! ನಿಮಗೆ ಕೇವಲ ಜ್ಞಾನವನ್ನು ಹೊಂದಬೇಕೆಂಬ ಇಚ್ಛೆ ಇದ್ದರೆ ಈ ಪ್ರಕಾರ ಭೇದ ವಿಜ್ಞಾನದ ಬಲದಿಂದ ನಿಜಾತ್ಮನ ಧ್ಯಾನವನ್ನು ಮಾಡಲು ಪ್ರಯತ್ನಿಸಿರಿ. ಈ ಭೇದವಿಜ್ಞಾನದ ಸಹಾಯವಿಲ್ಲದೆ ಎಷ್ಟು ತಪಶ್ಚರ್ಯೆಯನ್ನು ಮಾಡಿದರೂ ಏನೂ ಪ್ರಯೋಜನವಿಲ್ಲ. ಅದೆಲ್ಲಾ ಅಜ್ಞಾನದ ಕಾರ್ಯ. ವ್ಯರ್ಥ. ಅಜ್ಞಾನೀ ಮತ್ತು ಸುಜ್ಞಾನಿಯಲ್ಲಿ ಎಷ್ಟು ಅಂತರವಿದೆ ಎಂಬುದನ್ನು ಆಚಾರ್ಯರು ಹೇಳುತ್ತಾರೆ.

ಜಂ ಅಣ್ಣಾಣೀ ಕಮ್ಮಂ ಖವೇಯಿ ಭವಸಯ ಸಹಸ್ಸಕೋಡೀಹಿಂ
ತಂ ಣಾಣೀ ತಿಹಿಂ ಗುತ್ತೊ ಖವೇಯಿ ಉಸ್ಸಾಸಮೆತ್ತೇಣ ॥

(ಪ್ರಶ್ನೋತ್ತರಮಾಣಿಕ್ಯಮಾಲಾ)

ಅರ್ಥ:—ಅಜ್ಞಾನೀ ಜೀವನು ಕೋಟಿ ಜನ್ಮಗಳಲ್ಲಿ ಕಾಯಕ್ಲೇಶಗಳನ್ನು ಸಹಿಸಿ ಮಾಡಿದ ತಪಶ್ಚರ್ಯೆಯಲ್ಲಿ ಎಷ್ಟು ಕರ್ಮಗಳನ್ನು ನಾಶ ಮಾಡುವನೋ ಅಷ್ಟು ಕರ್ಮಗಳನ್ನು ಜ್ಞಾನೀ ಜೀವನು ಒಂದು ಉಚ್ಛ್ವಾಸ ಮಾತ್ರ ಕಾಲದಲ್ಲಿ ನಾಶ ಮಾಡಿ ಬಿಡುವನು. ಭೇದ ವಿಜ್ಞಾನದ ಮಹಿಮೆಯು ಅಗಾಧವಾಗಿದೆ. ಎಂಬ ವಿಷಯವನ್ನು ಅರಿತು ಈ ಜೀವನು ಭೇದವಿಜ್ಞಾನವನ್ನು ಪ್ರಾಪ್ತಿ ಮಾಡಿಕೊಂಡರೆ ಮಹತ್ಪುಣ್ಯದಿಂದ ದೊರೆತ ಈ ಮನುಷ್ಯ ಜನ್ಮವನ್ನು ಸಾರ್ಥಕ ಮಾಡಿಕೊಂಡ

ಹಾಗಾಗಬಹುದು. ಈ ಮನುಷ್ಯ ಶರೀರದಿಂದ ಆತ್ಮಸಿದ್ಧಿಯನ್ನು ಮಾಡಿಕೊಳ್ಳುವ ಸುಲಭ ಉಪಾಯ ಯಾವುದೆಂಬುದನ್ನು ಆಚಾರ್ಯರು ಹೇಳುತ್ತಾರೆ. ಅದನ್ನು ಮನನ ಮಾಡಿರಿ.

ಭೇದ ವಿಜ್ಞಾನೀ ಜೀವನು ಉದಯದಲ್ಲಿ ಬರುವ ಕರ್ಮಗಳನ್ನು ಜಡ ಪುದ್ಗಲಗಳ ಪರಿಣತಿ ಎಂದು ತಿಳಿದು ಅವುಗಳಲ್ಲಿ ರಾಗದ್ವೇಷವನ್ನು ಮಾಡುವುದಿಲ್ಲ ನನ್ನ ಆತ್ಮನು ಜ್ಞಾನದರ್ಶನಮಯನಾಗಿದ್ದಾನೆ. ಕರ್ಮವು ಅನೇಕ ವಿಧದಿಂದ ಉದಯದಲ್ಲಿ ಬರುತ್ತದೆ. ಆದರೆ ಅದೆಲ್ಲಾ ಜಡರೂಪವಾಗಿದೆ. ಹೀಗೆ ತಿಳಿದು ಉದಯದಲ್ಲಿ ಬರುವ ಕರ್ಮಗಳ ವಿಷಯದಲ್ಲಿ ರಾಗದ್ವೇಷಗಳನ್ನು ಮಾಡದೆ ತನ್ನ ಸ್ವರೂಪದಲ್ಲಿ ಸ್ಥಿರವಾಗಿದ್ದು ಕರ್ಮ ನಿರ್ಜರೆಯನ್ನು ಮಾಡುತ್ತಿರುತ್ತಾನೆ. ಶಾಸ್ತ್ರಕಾರರೂ ಹಾಗೆಯೇ ಹೇಳುತ್ತಾರೆ.

**ಉದಯ ವಿಪಾಕ ಅನೇಕ ವಿಧ ಕರ್ಮ ಜಿನೇಶ ಬಖಾನ**
**ಮಮ ಸ್ವಭಾವ ಸೋ ಹೈ ನಹೀ, ಮೇ ಇಕ ಜ್ಞಾಯಕವಾನ ||**

( ಸಮಯಸಾರ )

ಅರ್ಥ:— ಕರ್ಮೋದಯ ಜಡ ಪುದ್ಗಲ ಸ್ವರೂಪವಾಗಿದೆ ನಾನು ಜ್ಞಾಯಕ ಸ್ವರೂಪನಾಗಿದ್ದೇನೆ. ಎಂದು ಈ ಆತ್ಮನು ಅತ್ಯಂತ ನಿಶ್ಚಯ ದೃಷ್ಟಿಯಿಂದ ಸ್ವಸ್ವರೂಪವನ್ನು ತಿಳಿದು ಅದರ ಮೇಲೆ ದೃಢ ವಿಶ್ವಾಸವಿಟ್ಟ ಜ್ಞಾನಿಗಳು ಕರ್ಮನಿರ್ಜರೆಯನ್ನು ಮಾಡುತ್ತಾರೆ. ಆದುದರಿಂದಲೇ ಜ್ಞಾನಿಗಳು ಸಂಸಾರದಲ್ಲಿ ಇದ್ದರೂ ಸಂಸಾರ ರಹಿತರಾಗಿರುತ್ತಾರೆ. ಭಾವ ಇಂದ್ರಿಯ ರೂಪ ನನ್ನ ಆತ್ಮ ಸ್ವಭಾವವೇ ನನ್ನ ಭಾವ ಪ್ರಾಣವಾಗಿದೆ. ಅದೇ ಉತ್ತಮ ಕ್ಷಮಾದಿ ದಶಧರ್ಮಸ್ವರೂಪವಾಗಿದೆ. ಆ ಧರ್ಮಗಳಲ್ಲಿ ಇದ್ದು ಜ್ಞಾನಿಯು ತನ್ನ ಪರಿಣಾಮಗಳನ್ನು ಶುದ್ಧ ಮಾಡುತ್ತಾನೆ. ಮತ್ತು ಅನಂತ ಜನ್ಮಗಳಲ್ಲಿ ಅಜ್ಞಾನದಿಂದ ಅರ್ಜಿತವಾದ ಕರ್ಮಮಲಗಳನ್ನು ನಾಶ ಮಾಡುತ್ತಾನೆ.

ಆದುದರಿಂದ ಭವ್ಯಾತ್ಮರೇ ! ನಿಮಗೆ ಆತ್ಮಕಲ್ಯಾಣವನ್ನು ಮಾಡಿಕೊಳ್ಳಬೇಕೆಂದು ಇಚ್ಛೆ ಇದ್ದರೆ ನೀವು ಈ ಕ್ರೋಧನೆಂಬ ಶತ್ರುವನ್ನು ನಾಶ ಮಾಡುವ ಪ್ರಯತ್ನ ಮಾಡಿರಿ. ಮೇಲಿಂದ ಮೇಲೆ ಮಿಥ್ಯಾಕರ್ಮದ ಉದಯ ಮತ್ತು ಕಷಾಯವೆಂಬ ಕಳ್ಳರು ಆತ್ಮನಿಧಿ ಎಂಬ ಭಂಡಾರವನ್ನು ಅಪಹರಿಸಲು ಕಾದು ಕೂತಿದ್ದಾರೆ ನೀವು ಭೇದವಿಜ್ಞಾನದ ದೃಷ್ಟಿಯಲ್ಲಿದ್ದು ಸ್ವಸ್ವರೂಪರಸವನ್ನು ಕುಡಿಯಿರಿ. ಅಂದರೆ ಆ ಕಳ್ಳರನ್ನು ಹೊಡೆದೋಡಿಸುವ ಶಕ್ತಿಯು ನಿಮ್ಮಲ್ಲಿ ಬರಬಹುದು. ಅನೇಕ ಭವಗಳಲ್ಲಿ ಅರ್ಜಿಸಿದ ಕರ್ಮಗಳು ಭೇದವಿಜ್ಞಾನದಿಂದ ನಿಮಿಷಮಾತ್ರದಲ್ಲಿ ನಷ್ಟವಾಗುತ್ತವೆ.

ಕ್ಷಣಭರ ನಿಜರಸಕೋ ಪೀ ಚೇತನ,
ಮಿಥ್ಯಾಮಲಕೋ ಧೋ ದೇತಾ ಹೈ ।
ಕಾಷಾಯಿಕ ಭಾವ ವಿನಷ್ಟ ಕಿಯೆ,
ನಿಜ ಆನಂದ ಅಮೃತ ಜೋ ಪೀತಾ ಹೈ ॥

( ಅಮರಗ್ರಂಥ )

ಭವ್ಯರೇ, ಒಂದು ನಿಮಿಷ ಮಾತ್ರವೇ ಆಗಲಿ ನೀವು ನಿಮ್ಮ ಆತ್ಮಸ್ವರೂಪದಲ್ಲಿರಲು ಪ್ರಯತ್ನ ಮಾಡಿರಿ. ಮತ್ತು ಚೈತನ್ಯರಸದ ಆನಂದವನ್ನು ಅನುಭವಿಸಿರಿ. ಆ ರಸದಲ್ಲಿ ಅನೇಕ ಭವಗಳಲ್ಲಿ ಅರ್ಜಿಸಿದ ಕರ್ಮಮಲಗಳನ್ನು ತೊಳೆಯುವ ಶಕ್ತಿ ಇದೆ, ಆದುದರಿಂದ ಮಹಾಪುರುಷರು ಅದರ ಅಭ್ಯಾಸವನ್ನು ಯಾವಾಗಲೂ ಮಾಡುತ್ತಿರುತ್ತಾರೆ. ಅವರು ಭಗವಂತನ ವಾಣಿಯಲ್ಲಿ ವಿಶ್ವಾಸವನ್ನಿಡುತ್ತಾರೆ. ತೀರ್ಥಂಕರ ಪರಂಪರೆಯಿಂದ ಅವಿಚ್ಛಿನ್ನ ರೂಪವಾಗಿ ಬಂದ ಈ ಧರ್ಮವನ್ನು ಗಣಧರರು, ಆಚಾರ್ಯರು, ರಕ್ಷಣೆ ಮಾಡಿಕೊಂಡು ಬರುತ್ತಾರೆ. ಅವರು ಈ ಧರ್ಮದಿಂದ ಸ್ವಯಂ ಉದ್ಧಾರವನ್ನು ಹೊಂದಿದ್ದಾರೆ. ಬೇರೆ ಭವ್ಯರಿಗೂ ಉಪದೇಶವನ್ನು ಕೊಟ್ಟು ಉದ್ಧರಿಸಿದ್ದಾರೆ. ಆದುದರಿಂದ ಅವರಿಗೆ ಮಹಾಗುರುವೆಂದು ಹೇಳಿದ್ದಾರೆ.

ಒಂದು ದಿವಸ ಧರ್ಮರಾಯನಿಗೆ ಗುರುಗಳು ಕೇಳುತ್ತಿದ್ದಾರೆ ಧರ್ಮರಾಯಾ, ಯಾವ ಪಾಠವನ್ನು ಅಭ್ಯಾಸ ಮಾಡುತ್ತಿದ್ದಿಯೋ ? ಧರ್ಮರಾಯನು ವಿನಯದಿಂದ ಉತ್ತರಿಸಿದನು. ಗುರುದೇವ ! ನಾನು ಕೋಪ ಕೊಟ್ಟ ಕ್ಷಮೆ ಎಂಬ ಪಾಠವನ್ನು ನನ್ನ ಹೃದಯವೆಂಬ ಕಾಗದದ ಮೇಲೆ ಬರೆಯುತ್ತಿದ್ದೇನೆ. ನಾನು ಅವಶ್ಯ ಉತ್ತೀರ್ಣನಾಗುತ್ತೇನೆಂದು ಎನಗೆ ಆತ್ಮವಿಶ್ವಾಸವಿದೆ.

ಈ ಮಾತನ್ನು ಕೇಳಿ ಗುರುಗಳಿಗೆ ಅತ್ಯಾನಂದವಾಯಿತು. ಅವರು ಧರ್ಮರಾಯನಿಗೆ ಆನಂದಾತಿರೇಕದಿಂದ ಧರ್ಮರಾಯನೇ, ನಿನ್ನ ಆತ್ಮೋದ್ಧಾರವು ಅವಶ್ಯ ಆಗುವುದು, ಹೆದರ ಬೇಡ, ಎಂದು ಆಶೀರ್ವದಿಸಿದರು. ನೋಡಿ, ಜ್ಞಾನಿಗಳು ಜ್ಞಾನಬಲದಿಂದ ತಾವೂ ಸಂತುಷ್ಟರಾಗುತ್ತಾರೆ ತನ್ನ ವಚನದಿಂದ ಇತರರನ್ನು ಸಂತೋಷ ಪಡಿಸುತ್ತಾರೆ. ಈ ರೀತಿಯಿಂದ ಪಾಂಡವರು ಕಾಡಿನಲ್ಲಿದ್ದು ಕರ್ಮನಿರ್ಜರೆಯನ್ನು ಮಾಡುತ್ತಿದ್ದರು. ಅವರಿಗೆ ಎಂಥಹ ಕಷ್ಟ ಬಂದರೂ ಸಂತೋಷವೃತ್ತಿ ಮತ್ತು ಶಾಂತವೃತ್ತಿಯನ್ನು ಬಿಡುತ್ತಿರಲಿಲ್ಲ. ಆದ್ದರಿಂದಲೇ ಅವರಿಗೆ ಕರ್ಮನಿರ್ಜರೆಯಾಗುತ್ತಿತ್ತು.

ಕೌರವರು ವನವಾಸವನ್ನು ಅನುಭವಿಸುತ್ತಿರುವ ಪಾಂಡವರಿಗೆ ತಮ್ಮ ತಮ್ಮ ರಾಜ್ಯವೈಭವವನ್ನು ತೋರಿಸ ಬೇಕೆಂದು ಮತ್ತು ಅವರ ಮನಸ್ಸಿನ ಸಂತೋಷವನ್ನು ನಷ್ಟ ಮಾಡಬೇಕೆಂದೂ, ಉದ್ದೇಶವನ್ನಿಟ್ಟು ಕೊಂಡು ಸೈನ್ಯ ಮತ್ತು ವಿಮಾನಗಳನ್ನು ತೆಗೆದುಕೊಂಡು ಆ ವನ ಪ್ರದೇಶಕ್ಕೆ ಬಂದರು. ದೇವೇಂದ್ರನು ಇದನ್ನು ನೋಡಿದನು. ಈ ಕೌರವರು ಸತ್ಪಾತ್ರರಾದ ಪಾಂಡವರಿಗೆ ಕಷ್ಟವನ್ನು ಕೊಡುವ ಪಾಪಿಗಳು. ಆದುದರಿಂದ ಇವರಿಗೆ ಯೋಗ್ಯ ಶಾಸನವನ್ನು ಮಾಡಬೇಕೆಂಬ ವಿಚಾರದಿಂದ ಅರ್ಜುನನ ಮಿತ್ರನಾದ ದೇವನು ಕೌರವರ ವಿಮಾನವನ್ನು ಆಕಾಶದಲ್ಲಿಯೇ ತಡೆಗಟ್ಟಿದನು. ಮತ್ತು ಶಸ್ತ್ರದಿಂದ ಅವರನ್ನು ಬಂಧಿಸಿದನು. ಇದನ್ನು

ನೋಡಿ ಕೌರವರ ಸ್ತ್ರೀಯರು ಗಾಬರಿಯಾಗಿ ಧರ್ಮರಾಜನಕಡೆಗೆ ಓಡಿ ಬಂದರು. ಕೈಮುಗಿದು ಪ್ರಾರ್ಥಿಸಿದರು—ಕ್ಷಮಾಸಾಗರರೇ, ಅಜ್ಞಾನಿಗ ಗಳಿಂದಾದ ಅಪರಾಧವನ್ನು ಮನ್ನಿಸಿ ನಮಗೆ ಪತಿದಾನವನ್ನು ಮಾಡಿರಿ. ಇದನ್ನು ಕೇಳಿ ಧರ್ಮರಾಯನ ಹೃದಯವು ದಯೆಯಿಂದ ದ್ರವಿಸಿತು. ಅರ್ಜುನನಕಡೆ ನೋಡಿ, ಅರ್ಜುನಾ, ನಿನ್ನ ಮಿತ್ರನಿಗೆ ಹೇಳಿ ಕೌರವರನ್ನು ಬಂಧನದಿಂದ ಮುಕ್ತರನ್ನಾಗಿ ಮಾಡು, ಎಂದನು. ಇದನ್ನು ಕೇಳಿ ಭೀಮ ಸೇನನು 'ಅನ್ಯಾಯ ಮಾಡುವವರಿಗೆ ಯೋಗ್ಯ ಶಾಸನವನ್ನು ಮಾಡಲೇ ಬೇಕು. ಅದರಿಂದೇನು ಹಾನಿ' ಎಂದನು.

ಧರ್ಮರಾಯಃ—ಬಂಧು, ಹೀಗಲ್ಲ ಶತ್ರುಗಳು ಶರಣದಲ್ಲಿ ಬಂದ ನಂತರ ಅವರ ವಿಷಯದಲ್ಲಿ ಕೋಪಿಸದೆ ಅವರನ್ನು ರಕ್ಷಿಸುವುದೇ ಕ್ಷತ್ರಿಯರ ಧರ್ಮವಾಗಿದೆ. ಇದನ್ನು ತಿಳಿಯಬೇಕು.

ಸತಾಂ ಹಿ ಕೋಪೋ ನಮನಾವಸಾನಃ ।

(ಚಂದ್ರಪ್ರಭಕಾವ್ಯ)

ಸಜ್ಜನರ ಕೋಪವು ನಮಸ್ಕಾರ ಮಾಡಿದ ಕೂಡಲೇ ನಷ್ಟವಾಗು ವುದು. ಆ ದೇವನು ಕೌರವರನ್ನು ಧರ್ಮರಾಜನ ಪಾದಗಳಲ್ಲಿ ತಂದನು. ಧರ್ಮರಾಯನೂ ಅವರನ್ನು ಬಂಧನದಿಂದ ಬಿಡಿಸಿದನು. ಮತ್ತು ಮೇಲಿಂದ ನೀವು ಹೆದರಬೇಡಿ ಎಂದು ಆಶ್ವಾಸನೆಯನ್ನಿತ್ತು ಕಳುಹಿಸಿದನು. ಕೌರವರು ಮಾತ್ರ ಒಳಗಿಂದ ಒಳಗೆ ಬಿಸಿಬಿಸಿಯಾಗಿ ದ್ವೇಷಭಾವನೆಯಿಂದ ಅನೇಕ ಕರ್ಮಗಳನ್ನು ಕಟ್ಟಿಕೊಂಡರು. ಪಾಂಡವರು ಮಾತ್ರ ಸಮಾಧಾನವೃತ್ತಿ ಯಿಂದ ಆನಂದದಿಂದಿದ್ದು ಕರ್ಮದ ನಿರ್ಜರೆಯನ್ನು ಮಾಡಿಕೊಂಡರು.

ಆದುದರಿಂದ ಭವ್ಯಾತ್ಮರೇ! ನೋಡಿರಿ, ಈ ಕ್ರೋಧದಿಂದ ಕೌರ ವರು ಈ ಲೋಕದಲ್ಲಿ ಅಪರಾಧಿಗಳಾಗಿ ಅಪಕೀರ್ತಿಗೆ ಭಾಗಿಗಳಾದರು. ಮತ್ತು ಪರಜನ್ಮದಲ್ಲಿ ವೈರವನ್ನು ಕಟ್ಟಿಕೊಂಡು ಸಂಸಾರದಲ್ಲಿ ಪರಿಭ್ರ

ಮಣೆ ಮಾಡಿ ಭವರೋಗಿಗಳಾದರು. ಆದರೆ ಕ್ರೋಧ ಪರಿಣಾಮವನ್ನು ಜಯಿಸಿ ಪಾಂಡವರು ಈ ಜಗತ್ತಿನಲ್ಲಿ ಪ್ರಸಿದ್ಧರಾಗಿ ಸತ್ಕೀರ್ತಿಶಾಲಿಗಳಾದರು. ಮತ್ತು ಕೇವಲಿಗಳಾಗಿ ನಿತ್ಯಸುಖವನ್ನು ಅನುಭವಿಸಿದರು. ಆದುದರಿಂದ ಭವ್ಯರೇ, ನೀವು ಕ್ರೋಧವನ್ನು ಜಯಿಸಿರಿ. ಮತ್ತು ಸುಖಿಗಳಾಗಿರಿ.

ಉತ್ತಮ ವಿಶೇಷಣದಿಂದ ಅಲಂಕೃತವಾದ ಕ್ಷಮಾಧರ್ಮವು ಇಂಥಹ ಮಹಾಪುರುಷರ ಹೃದಯದಲ್ಲಿಯೇ ಇರುತ್ತದೆ. ಇರಲಿ. ನೀವೂ ಮಹಾಪುರುಷರಾಗಿ ಕ್ಷಮಾ ಧರ್ಮದ ಪಾಲನೆಯನ್ನು ಮಾಡಿರಿ. ಇದು ಆಚಾರ್ಯ ವಚನವಿದೆ. ಕ್ರೋಧವೆಂಬ ಶತ್ರುವನ್ನು ಜಯಿಸದೆ ಯಾವ ವ್ರತ ನಿಯಮಾದಿಗಳೂ ಸಿದ್ಧಿಸಲಾರವು. ಆದುದರಿಂದ ಮೊದಲು ಕ್ರೋಧವನ್ನು ಬಿಡಿರಿ. ಸುಖಿಯಾಗಿರಿ. ಸಜ್ಜನರು, ಸಾಧು-ಸಂತರು ಕ್ರೋಧವನ್ನು ಬಿಡುತ್ತಾರೆ ಮತ್ತು ವಂದನೀಯರಾಗುತ್ತಾರೆ. ಆದುದರಿಂದ ಯಾವಾಗಲೂ ಸಜ್ಜನರ ಸಂಗತಿಯನ್ನು ಮಾಡಿರಿ. ದುರ್ಜನರ ಸಂಗತಿಯಿಂದ ಕಷ್ಟವಾಗುತ್ತದೆ. ಲವಣದ ಸಂಸರ್ಗದಿಂದ ಒಳ್ಳೆಯ ಹಾಲೂ ಕೆಟ್ಟು ಹೋಗುತ್ತದೆ. ಸಾವಯಧಮ್ಮದೋಹಾದಲ್ಲಿ ಹೀಗೆ ಹೇಳಿದ್ದಾರೆ.

ಖಾರ್‍ಯಾ ಘಟಾಂತ ಭರಿಲೆ ಜರೀ ಗೋಡ ಪಾಣೀ ।
ಖಾರೇಚೆ ಹೋಯ ಮನಿ ಸಂಶಯ ನೈವ ಆಣೀ ॥

ಅಂದರೆ ಉಪ್ಪಿನ ಪಾತ್ರೆಯಲ್ಲಿ ಸಿಹಿ ನೀರನ್ನು ತುಂಬಿದರೂ ಅದು ಉಪ್ಪೇ ಆಗುವುದರಲ್ಲಿ ಸಂಶಯವಿಲ್ಲ. ಅನಾದಿ ಕಾಲದಿಂದ ಈ ಮನಸ್ಸೆಂಬ ಪಾತ್ರದಲ್ಲಿ ಕ್ರೋಧವೆಂಬ ಉಪ್ಪು ತುಂಬಿದೆ. ಆದುದರಿಂದ ಈ ಪಾತ್ರವು ಮಲಿನವಾಗಿದೆ. ಹೀಗಿರುವಾಗ ಅದರಲ್ಲಿ ಕ್ಷಮೆಯೆಂಬ ನೀರು ಹೇಗೆ ಇರಲು ಸಾಧ್ಯವಿದೆ ? ಅದು ನಾಶವಾಗುವುದರಲ್ಲಿ ಸಂದೇಹವಿಲ್ಲ. ಆ ಪಾತ್ರವನ್ನು ಸ್ವಚ್ಛ ಮಾಡಲು ಸಮ್ಯಕ್ತ್ವವೆಂಬ ನೀರನ್ನು ತೆಗೆದುಕೊಂಡು

ವಿವೇಕವೆಂಬ ಸಾಧನದಿಂದ ಸ್ವಚ್ಛವಾಗಿ ತೊಳೆಯಿರಿ. ಮತ್ತು ಆ ಪಾತ್ರವು ದಶಧರ್ಮವನ್ನು ಇಡಲು ಯೋಗ್ಯವಾಗಬಹುದು. ಆ ದಶಧರ್ಮಗಳು ಯಾವುವೆಂದು ಈ ಕೆಳಗಿನ ಶ್ಲೋಕದಲ್ಲಿ ಹೇಳಿದ್ದಾರೆ.

ಧರ್ಮಸ್ಯ ಚಿನ್ಹಂ ಪ್ರತಿಪಾದ್ಯತೇ ಹಿ,
ಕ್ಷಮಾದಿ ವರ್ಗಸ್ಯ ತಪೋ ಜಪೋsಪಿ,
ವ್ರತೋಪವಾಸಂ ಯಜನಂ ಸುದಾನಂ,
ಶಾಂತಿಃ ಸುಶೀಲಂ ಸಮತಾ ದಯಾ ಹಿ ॥ ೨೦ ॥
ಧರ್ಮೋಹ್ಯಹಿಂಸಾ ಗದಿತಂ ಹ್ಯಚೌರ್ಯಂ,
ತ್ಯಾಗೋ ಹಿ ಸಂಗಸ್ಯ ಚ ಬ್ರಹ್ಮಚರ್ಯಂ,
ನಿಜಾತ್ಮಧರ್ಮೆ ಸ್ವಪದೇ ಸ್ಥಿರತ್ವಂ,
ಧ್ಯಾನಂ ಪ್ರಭೋರ್ವಾ ಸ್ವರಸಸ್ಯ ಪಾನಂ ॥ ೨೧ ॥

( ಬೋಧಾಮೃತ )

ಧೈರ್ಯ, ಕ್ಷಮೆ, ಮನಸ್ಸಿನಲ್ಲಿ ದುಷ್ಟ ವಿಚಾರವನ್ನು ಮಾಡದಿರುವುದು ಕಳ್ಳತನ ಮಾಡದಿರುವುದು, ಇಂದ್ರಿಯಗಳನ್ನು ವಶಮಾಡಿಕೊಳ್ಳುವುದು, ಮನ ವಚನ ಕಾಯದಿಂದ ಪಾಪವನ್ನು ಮಾಡದಿರುವುದು, ಆತ್ಮಜ್ಞಾನದಲ್ಲಿ ಚಿತ್ತವನ್ನಿಡುವುದು, ಸತ್ಯವನ್ನು ಮಾತಾಡುವುದು, ಕೋಪ ಮಾಡದಿರುವುದು, ಇವು ಧರ್ಮದ ಚಿನ್ಹೆಯೆಂದು ಹೇಳಲಾಗಿದೆ.

ಹಾಗೆಯೇ ಜಪ ತಪ, ವ್ರತ, ಉಪವಾಸ, ಪೂಜಾ, ದಾನ, ಶಾಂತಿ ಸದಾಚಾರ, ಸಮತಾ, ದಯೆ, ಮತ್ತು ಪಂಚಪಾಪದಿಂದ ನಿವೃತ್ತಿಯನ್ನು ಹೊಂದುವುದು, ಆತ್ಮನಲ್ಲಿ ಸ್ಥಿರವಾಗಿರುವುದು ಪರಮಾತ್ಮನ ಧ್ಯಾನ ಮತ್ತು ಆತ್ಮರಸದ ಪಾನ ಇವೆಲ್ಲಾ ಧರ್ಮದ ಲಕ್ಷಣಗಳು.

ಈ ದಶಲಕ್ಷಣಲಕ್ಷಣ ಯುಕ್ತನಾದ ಧರ್ಮಗಳು ಯಾರ ಹೃದಯ ದಲ್ಲಿ ತುಂಬಿದೆಯೋ ಅಲ್ಲಿ ಕೋಪಕ್ಕೆ ಸ್ಥಾನವಿಲ್ಲ. ಸಮ್ಯಕ್ತ್ವದ ಎಂಟು ಅಂಗಗಳಲ್ಲಿ ಕ್ಷಮೆಯು ಆತ್ಮನ ಅನುಜೀವೀ ಗುಣವಾಗಿದೆ ಆತ್ಮನನ್ನು ಬಿಟ್ಟು ಕ್ಷಮೆಯು ಬೇರೆ ಕಡೆಯಲ್ಲಿ ಇರಲು ಸಾಧ್ಯವಿಲ್ಲ. ಆ ಆತ್ಮಧರ್ಮ ವನ್ನು ಪರಿಪಾಲಿಸುವ ಸಾಧುಗಳು, ಸಂತರು ಸಜ್ಜನರು ಎಂಥಹ ಆಪ ತ್ತಿಯು ಬಂದೊದಗಿದರೂ ತಮ್ಮ ಆತ್ಮ ಧರ್ಮದಿಂದ ಚ್ಯುತರಾಗುವುದಿಲ್ಲ. ಒಂದು ಕಡೆ ಹೀಗೆ ಹೇಳಿದ್ದಾರೆ.

ಘೃಷ್ಟಂ ಘೃಷ್ಟಂ ಪುನರಪಿ ಪುನಶ್ಚಂದನಂ ಚಾರು ಗಂಧಂ,
ಛಿನ್ನಂ ಛಿನ್ನಂ ಪುನರಪಿ ಪುನಃ ಸ್ವಾದುತಾಮಿಕ್ಷುದಂಡಂ,
ದಗ್ಧಂ ದಗ್ಧಂ ಪುನರಪಿ ಪುನಃ ಕಾಂಚನಂ ಚಾರುವರ್ಣಂ,
ಪ್ರಾಣಾಂತೇಪಿ ಪ್ರಕೃತಿವಿಕೃತಿರ್ಜಾಯತೇ ನೋತ್ತಮಾನಾಂ ||

ಅರ್ಥಃ—ಚಂದನವನ್ನು ಪುನಃ ಪುನಃ ಅರೆದಷ್ಟು ಅದರಲ್ಲಿ ಸುಗಂ ಧವು ಹೆಚ್ಚುತ್ತದೆ. ಕಬ್ಬನ್ನು ಪುನಃ ಪುನಃ ತುಂಡು ಮಾಡಿದಷ್ಟು ಅದರಲ್ಲಿ ಮಧುರತೆಯು ಹೆಚ್ಚಾಗುತ್ತದೆ. ಭಂಗಾರವನ್ನು ಬೆಂಕಿಯಲ್ಲಿ ಕಾಸಿದಷ್ಟು ಅವರಲ್ಲಿ ಬಣ್ಣವು ಬೆಳೆಯುತ್ತದೆ. ಹಾಗೆಯೇ ಪ್ರಾಣ ಹೋದರೂ ಸಜ್ಜ ನರು ತಮ್ಮ ಒಳ್ಳೆಯ ಸ್ವಭಾವವನ್ನು ಬಿಡುವುದಿಲ್ಲ. ಸರ್ವ ಸಂಪತ್ತಿಯಲ್ಲಿ ಶ್ರೇಷ್ಠವಾದ ಭೇದಜ್ಞಾನವೆಂಬ ಸಂಪತ್ತಿಯು ಯಾರಿಗೆ ಪ್ರಾಪ್ತವಾಗಿ ದೆಯೋ ಅವರು ಆ ಶಕ್ತಿಯಿಂದ ಕ್ರೋಧವೆಂಬ ಶತ್ರುವನ್ನು ಅನಾಯಾಸ ವಾಗಿ ಜಯಿಸುತ್ತಾರೆ, ಈ ಪ್ರಕಾರದ ಅಖಂಡ ಪ್ರಕಾರದ ಧೈರ್ಯ ಮತ್ತು ಶ್ರದ್ಧೆಯು ಯಾರ ಹೃದಯದಲ್ಲಿದೆಯೋ ಅವರೇ ಧನ್ಯರು ನೋಡಿರಿ.

ಒಂದಾನೊಂದು ಊರಿನ ಅನೇಕ ಮಂದಿ ಯಾತ್ರೆಗೆ ಹೊರಟಿದ್ದರು ಹೋಗುವಾಗ ಗಾಡಿಯಲ್ಲಿ ಕೂತುಕೊಳ್ಳುವ ವಿಷಯದಲ್ಲಿ ಹೆಂಗಸರೊ ಳಗೆ ಜಗಳವಾಗಹತ್ತಿತು. ಒಬ್ಬ ಕೋಪಿಷ್ಠಳಾದ ಹೆಂಗಸು ಮತ್ತೊಬ್ಬ ಶಾಂತಳಾದ ಹೆಂಗಸಿಗೆ ಅತ್ಯಂತ ಕೋಪದಿಂದ ಹೇಳತೊಡಗಿದಳುಃ—

ನೀನು ಕತ್ತೆಯಾಗಿದ್ದೀ, ಮೂರ್ಖಳಾಗಿದ್ದೀ, ನಿರ್ಬುದ್ಧಳಾಗಿದ್ದೀ, ಹೀಗೆ ಅನೇಕ ದುರ್ವಚನಗಳಿಂದ ಬೈದಳು. ಶಾಂತಳಾದ ಅವಳು ಕೇಳಿ ತನ್ನ ಮನಸ್ಸಿನಲ್ಲಿ ಕೋಪಗೊಳ್ಳದೆ ಹೇಳತೊಡಗಿದಳು. ಬಾಯಿಯವರೇ, ನೀವು ಏನು ಹೇಳುತ್ತೀರಾ ಅದು ನಿಜವಾಗಿದೆ. ನಾನು ಅನಂತ ಭವದಲ್ಲಿ ತಿರುಗುತ್ತಿದ್ದೇನೆ. ನಾನು ಕತ್ತೆಯ ಪರ್ಯಾಯವನ್ನು ಧಾರಣೆ ಮಾಡಿರಬಹುದು. ಅಜ್ಞಾನಿಯೂ ಆಗಿರಬಹುದು. ನೀವು ಏನು ಹೇಳುತ್ತಿದ್ದೀರಾ ಅದು ಪುದ್ಗಲಕ್ಕೆ ಹೇಳುತ್ತಿದ್ದೀರಿ. ಶರೀರವು ಜಡವಾಗಿದೆ. ಆದುದರಿಂದ ಅದಕ್ಕೆ ಹೇಳಿದ ಮಾತ್ರಕ್ಕೆ ನನಗೆ ಸಿಟ್ಟು ಬರುವ ಕಾರಣವಿಲ್ಲ. ನನ್ನ ಆತ್ಮನು ಕ್ರೋಧಿಯಲ್ಲ.

ಆ ಹೆಂಗಸು ಪೂರ್ವ ಪುಣ್ಯದ ಉದಯದಿಂದ ಮಂದಕಷಾಯಿಯಾಗಿದ್ದಳು. ಅವಳಿಗೆ ಸಿಟ್ಟು ಬರಲಿಲ್ಲ. ಅದರಿಂದ ಆ ಕೋಪಿಷ್ಠಳಿಗೆ ಪುನಃ ಹೆಚ್ಚು ಕೋಪಗೊಂಡು ಅವಳಿಗೆ ಹೊಡೆದಳು ಬಡೆದಳು ಅದನ್ನು ಅವಳು ಶಾಂತಚಿತ್ತದಿಂದ ಸಹಿಸಿಕೊಂಡಳು. ನನಗೆ ಜಡ ಬಡಿಯುತ್ತದೆ. ಜಡಕ್ಕೆ ಬಡಿಯುತ್ತದೆ. ಇವುಗಳಿಂದ ಭಿನ್ನನಾದ ಆತ್ಮನು ಬೇರೆಯಾಗಿದ್ದಾನೆ. ಶರೀರ ಹೋದರೂ ಚಿಂತೆ ಇಲ್ಲ. ನನ್ನ ಕ್ಷಮಾ ಧರ್ಮವನ್ನು ನಾನು ಬಿಡಲಾರೆ. ದುಷ್ಟರು ನನಗೆ ತೊಂದರೆ ಕೊಟ್ಟರೂ ನಾನು ನನ್ನ ಸಹನಶೀಲತೆಯನ್ನು ಬಿಡಲಾರೆ, ಎಂದು ಅತ್ಯಂತ ಸ್ಥಿರ ಸ್ವಭಾವದಿಂದ ಅವಳು ಧ್ಯಾನಮಗ್ನಳಾದಳು. ದುಷ್ಟರು ಎಷ್ಟು ಉಪದ್ರವ ಕೊಟ್ಟರೂ ಸಜ್ಜನರು ತಮ್ಮ ಸ್ವಭಾವವನ್ನು ಬಿಡುವುದಿಲ್ಲ.

ಯಹತನ ಜಾವೇ ತೋ ಜಾವೇ ಉತ್ತಮ ಕ್ಷಮಾ ನಹಿ ಜಾವೇ
ವಿನಾ ದೋಷ ದುರ್ಜನ ದುಃಖ ದೇವೆ ಹಿಮ್ಮತ ಧಾರ ಸಹಲೇವೇ
ಕ್ರೋಧ ಜರಾ ನಹಿ ಆವೇ, ಮೇರೀ ಉತ್ತಮ ಕ್ಷಮಾ ನಹಿ ಜಾವೆ

ಅಧ್ಯಾತ್ಮಪದ ಸಂಗ್ರಹ.

ದೊಡ್ಡ ಆಪತ್ತಿಯ ಸಮಯದಲ್ಲಿಯೂ ಅವಳು ತನ್ನ ಧ್ಯಾನವನ್ನು ಬಿಡಲಿಲ್ಲ. ಈ ವಿಷಯವನ್ನು ಸ್ವರ್ಗದ ದೇವತೆಯು ನೋಡಿ ಪ್ರಸನ್ನಳಾದಳು. ಅವಳನ್ನು ಸಿಂಹಾಸನದಲ್ಲಿ ಕೂಡಿಸಿ ವಸ್ತ್ರಾಲಂಕಾರಗಳನ್ನು ಅರ್ಪಿಸಿದಳು. ಮತ್ತು " ನಿನ್ನ ಕ್ಷಮಾ ಧರ್ಮ ಮತ್ತು ನಿನ್ನ ಧೈರ್ಯಕ್ಕೆ ಧನ್ಯವಾದ. ಯಾವ ಸಮಯದಲ್ಲಿ ನಿನಗೆ ನನ್ನ ಅಗತ್ಯವಿದೆಯೋ ಸ್ಮರಣೆ ಮಾಡಿದ ಕೂಡಲೇ ನಾನು ಬರುವೆನು. ಎಂದು ಹೇಳಿ ಹೊರಟು ಹೋದಳು.

ನೋಡಿರಿ, ಭವ್ಯರೇ, ಅವಳು ಒಂದು ಉತ್ತಮ ಕ್ಷಮೆಯನ್ನು ಪಾಲಿಸಿದ್ದರಿಂದ ದೇವತೆಗಳಿಂದಲೂ ಪೂಜ್ಯಳಾದಳು. ಕೀರ್ತಿಶಾಲಿಯಾದಳು. ಮತ್ತು ಉತ್ತಮ ಗತಿಗೆ ಹೋದಳು. ಮತ್ತು ಆ ದುಷ್ಟ ಹೆಂಗಸು ಅಪಕೀರ್ತಿಗೆ ಗುರಿಯಾದಳು. ಮುಂದೆ ದುರ್ಗತಿಗೆ ಹೋದಳು. ಇದನ್ನು ತಿಳಿದುಕೊಂಡು ಅನಾದಿಕಾಲದಿಂದ ಬಂದ ಕ್ರೋಧವೆಂಬ ವೈರಿಯನ್ನು ಎಷ್ಟರವರೆಗೆ ನೀವು ಜಯಿಸುವುದಿಲ್ಲವೋ ಅಷ್ಟರವರೆಗೆ ಆತ್ಮಕಲ್ಯಾಣವಾಗಲಾರದು. ಯಥಾರ್ಥ ಸುಖ ಸಿಗಲಾರದು. ಯಥಾರ್ಥ ಸುಖವನ್ನು ಪ್ರಾಪ್ತ ಮಾಡುವ ಪ್ರಯತ್ನ ಮಾಡಿರಿ. ಭೇದವಿಜ್ಞಾನವೆಂಬ ಧನವನ್ನು ಹೃದಯದಲ್ಲಿಟ್ಟು ಕೊಳ್ಳಿರಿ. ಆ ಧನದಿಂದ ನೀವು ನಿಮ್ಮ ಎಲ್ಲಾ ವಿಘ್ನಪರಂಪರೆಗಳನ್ನು ನಾಶ ಮಾಡಬಹುದು. ಭೇದವಿಜ್ಞಾನ ಹೇಗಿದೆ ನೋಡಿರಿ.

ನ ಚೌರಹಾರ್ಯಂ ನ ಚ ರಾಜಹಾರ್ಯಂ
ನ ಭ್ರಾತೃ ಭಾಜ್ಯಂ ನ ಚ ಭಾರಕಾರಿ
ವ್ಯಯೇ ಕೃತೇ ವರ್ಧತ ಎವ ನಿತ್ಯಂ
ವಿದ್ಯಾಧನಂ ಸರ್ವಧನಪ್ರಧಾನಂ ||

ಸುಭಾಷಿತ ರತ್ನಾವಲಿ.

ಯಾವ ಧನವನ್ನು ಕಳ್ಳರು ಅಪಹರಿಸಲು ಸಾಧ್ಯವಿಲ್ಲ, ರಾಜನು ಅಪಹರಿಸಲು ಸಾಧ್ಯವಿಲ್ಲ, ದಾಯಾದಿಗಳು ವಿಭಾಜಿಸಲು ಸಾಧ್ಯವಿಲ್ಲ, ಯಾವುದರ ಭಾರವಾಗುವುದಿಲ್ಲ, ಯಾವುದನ್ನು ಖರ್ಚು ಮಾಡಿದರೂ ಸತತ ವೃದ್ಧಿಯಾಗುತ್ತದೆಯೋ ಅಂಥಹ ಭೇದವಿಜ್ಞಾನವೆಂಬ ಧನವು ಎಲ್ಲಾ ಧನಗಳಿಂದಲೂ ಶ್ರೇಷ್ಟವಾಗಿದೆ. ಆ ಧನವನ್ನು ಸಂಪಾದಿಸಿದ ಮಹಾ ಪುರುಷರು ಹೀಗೆ ವಿಚಾರ ಮಾಡುತ್ತಾರೆ. ಸಂಸಾರದಲ್ಲಿ ಏನಾಗುತ್ತದೆಯೋ ಅದೆಲ್ಲಾ ಈ ಜಡ ಪುದ್ಗಲ ಪಿಂಡಕ್ಕೆ ಆಗುತ್ತದೆ. ಅಖಂಡ ಅವಿನಾಶಿಯಾದ ನನ್ನ ಆತ್ಮನು ಅದರಿಂದ ಭಿನ್ನನಾಗಿದ್ದಾನೆ. ಶರೀರ ಹೋದರೂ ಚಿಂತೆ ಇಲ್ಲ. ನನ್ನ ಕ್ಷಮಾ ಧರ್ಮವನ್ನು ನಾನು ಎಂದೂ ಬಿಡಲಾರೆ ಈ ಪ್ರಕಾರ ಅಖಂಡ ಧೈರ್ಯ ಮತ್ತು ನಿಷ್ಠೆಯು ಯಾರ ಹೃದಯದಲ್ಲಿದೆಯೋ ಅವರು ಕೋಪವೆಂಬ ವೈರಿಯನ್ನು ಸುಲಭವಾಗಿ ಜಯಿಸುವರು. ಈ ಕೆಳಗಿನ ಘಟನೆಯನ್ನು ನೋಡಿರಿ.

ಸುದರ್ಶನ ಶ್ರೇಷ್ಠಿಯು ಸ್ಮಶಾನದಲ್ಲಿ ತನ್ನ ಆತ್ಮಧ್ಯಾನದಲ್ಲಿ ತಲ್ಲೀನನಾಗಿದ್ದನು. ಅತ್ಯಂತ ನಿರ್ವಿಕಲ್ಪಕವಾದ ಧ್ಯಾನವನ್ನು ಮಾಡುತ್ತಿದ್ದನು. ಅದರಿಂದ ಅನೇಕ ಭವಗಳಲ್ಲಿ ಅರ್ಜಿಸಿದ ಕರ್ಮಗಳ ನಿರ್ಜರೆಯಾಗುತ್ತಿತ್ತು. ಅವನ ಪರೀಕ್ಷೆಯನ್ನು ಮಾಡುವುದಕ್ಕೋಸ್ಕರ ಕರ್ಮದ ಉದಯವು ಹೇಗೆ ಬಂತು ನೋಡಿರಿ.

ಆ ರಾಜ್ಯದ ರಾಣಿಯು ಅವನ ರೂಪವನ್ನು ನೋಡಿ ಮೋಹಿತಳಾದಳು. ಅವನನ್ನು ಅರಮನೆಯ ಅಂತಃಪುರದಲ್ಲಿ ತರಿಸಿ ಅನೇಕ ವಿಧದಿಂದ ಅವನನ್ನು ಧ್ಯಾನದಿಂದ ವಿಚಲಿತನನ್ನಾಗಿ ಮಾಡಲು ಪ್ರಯತ್ನಿಸಿದಳು. ಉಪಸರ್ಗ ಮಾಡಿದಳು. ಆದರೂ ಸುದರ್ಶನ ಶ್ರೇಷ್ಠಿಯು ತನ್ನ ಧ್ಯಾನದಿಂದ ಚ್ಯುತನಾಗಲಿಲ್ಲ. ಮತ್ತು ತನ್ನ ಸ್ವರೂಪದಲ್ಲಿದ್ದು ಆತ್ಮ ಸ್ವರೂಪದ ಆನಂದವೆಂಬ ರಸವನ್ನು ಪಾನ ಮಾಡುತ್ತಿದ್ದನು. ಆಗ ಅವನ ಸ್ವರೂಪ ಹೇಗಿತ್ತು ಅಥವಾ ನಿರ್ವಿಕಾರವಾದ ಆತ್ಮ ಸ್ವರೂಪವು ಹೇಗಿದೆ ನೋಡಿರಿ.

ನಿರ್ವಿಕಾರಂ ನಿರಾಬಾಧಂ
ಸರ್ವಸಂಗ ವಿವರ್ಜಿತಂ
ಪರಮಾನಂದ ಸಂಪನ್ನಂ
ಶುದ್ಧ ಚೈತನ್ಯ ಲಕ್ಷಣಂ ॥

ಪರಮಾನಂದ ಸ್ತೋತ್ರ.

ಈ ಪ್ರಕಾರವಾದ ಆತ್ಮನ ಚಿಂತನೆಯನ್ನು ಮಾಡಿಕೊಂಡು ಅವನು ಧ್ಯಾನದಲ್ಲಿ ಸ್ಥಿರನಾದನು. ರಾಣಿಯು ತನ್ನ ಉಪಾಯವು ವ್ಯರ್ಥವಾಗುವುದನ್ನು ನೋಡಿ ಆ ಮಹಾ ಪುರುಷನ ಮೇಲೆಯೇ ಆರೋಪವನ್ನು ಮಾಡುವ ವಿಚಾರ ಮಾಡಿದಳು. ಕಪಟತನದಿಂದ ಬೊಬ್ಬೆ ಹೊಡೆದು ರಾಜನನ್ನು ಕರೆಯಿಸಿದಳು. ರಾಜನು ಬಂದು ಅಂತಃಪುರದಲ್ಲಿ ಸುದರ್ಶನನು ಧ್ಯಾನಸ್ಥನಾಗಿರುವುದನ್ನು ನೋಡಿದನು. ಅವನಿಗೆ ತೀವ್ರ ಕೋಪ ಬಂತು. ಅವನು ಕ್ರೋಧದ ಉದ್ರೇಕದಿಂದ ಹಿಂದೆ ಮುಂದೆ ವಿಚಾರ ಮಾಡದೆ, ಅವನನ್ನು ಗಲ್ಲಕ್ಕೆ ಏರಿಸಲು ಆಜ್ಞೆ ಇತ್ತನು. ಸೇವಕರು ಅವನನ್ನು ಕಟ್ಟಿಗೆ ಗಲ್ಲಕ್ಕೇರಿಸಲು ತೆಗೆದುಕೊಂಡು ಹೋದರು ನೋಡಿರಿ. ಕರ್ಮದ ಆಟ ಹೇಗಿದೆ ?

ನಿರ್ದೋಷ, ನಿಷ್ಕಲಂಕ ಸುದರ್ಶನ ಶ್ರೇಷ್ಠಿಯ ಮೇಲೆ ಎಷ್ಟು ಸಂಕಟ ಬಂತು ? ಆದರೆ ಇವರು ಹೀಗೆ ವಿಚಾರ ಮಾಡತೊಡಗಿದರು ' ಈ ಎಲ್ಲಾ ಸಂಕಟಗಳು ನನ್ನ ಜಡ ಶರೀರಕ್ಕೆ ಆಗುತ್ತಿವೆ, ನನ್ನ ಆತ್ಮನಿಗೆ ಏನೂ ಆಗುವುದಿಲ್ಲ. ನಾನು ಶಿವಸ್ವರೂಪನಾಗಿದ್ದೇನೆ. '

ಶಿವಂ ಶುದ್ಧ ಬುದ್ಧಂ ಪರಂ ವಿಶ್ವನಾಥಂ
ನ ದೇವೋ ನ ಬಂಧುರ್ನ ಕರ್ಮಾಣಿ ಕರ್ತಾ
ನ ಅಂಗಂ ನ ಸಂಗಂ ನಚೇಚ್ಛಾನ ಕಾಮಂ
ಚಿದಾನಂದರೂಪಂ ನಮೋ ವೀತರಾಗಂ ॥

ವೀತರಾಗ ಸ್ತೋತ್ರ.

ನಾನು ಶುದ್ಧ, ಬುದ್ಧ ನಿರ್ವಿಕಲ್ಪಕರೂಪನಾಗಿದ್ದೇನೆ. ಅಂಗ ಸಂಗ, ಇವೆಲ್ಲಾ ಕರ್ಮಜನ್ಯವಾಗಿವೆ. ಆ ಕರ್ಮವು ಜಡವನ್ನು ಅನುಭವಿಸಿ, ಭೋಗಿಸಿ, ಉದಯದಲ್ಲಿ ಬಂದು ಹೋಗುತ್ತವೆ. ಸಂಕಟದ ಸಮಯದಲ್ಲಿ ಣವೋಂಕಾರ ಮಂತ್ರವು ಸ್ಮರಣೆ ಮಾಡಲು ಯೋಗ್ಯವಾಗಿದೆ. ಸುದರ್ಶನ ಶ್ರೇಷ್ಠಿಯು ಅತ್ಯಂತ ಭಕ್ತಿ ಭಾವದಿಂದ ಣಮೋಕಾರ ಮಂತ್ರವನ್ನು ಜಪಿಸತೊಡಗಿದನು. ಅದರ ಪ್ರಭಾವದಿಂದ ವಿಘ್ನಪರಂಪರೆಗಳು ಹೇಗೆ ನಷ್ಟವಾದವು ನೋಡಿರಿ.

ಜಬ ಸೇಠ್ ಸುದರ್ಶನನೆ ಶೂಲೀಪರ
ಮೌತಕಾ ಜಲವಾ ದೇಖಥಾ
ಆವಾಜ ಹೂಯಿೂ ಇತ ಅಂಕರಸೇ,
ಬಸ ಮಂತ್ರ ಪದಾ ಣಮೋಕಾರ ಜಪೋ ||

ಅಧ್ಯಾತ್ಮಪದ ಸಂಗ್ರಹ.

ಆ ಶೂಲಿಯಿಂದ ಈ ಶಬ್ದವು ಬರತೊಡಗಿತು. ‘ರಾಜನೇ ನೋಡು, ನೋಡು ನಿನ್ನ ಪಾಪಿಯಾದ ರಾಣಿಯು ನಿರ್ದೋಷಿಯಾದ ಸುದರ್ಶನ ಶ್ರೇಷ್ಠಿಯ ಮೇಲೆ ಕಲಂಕ ಹೊರಿಸುತ್ತಿದ್ದಾಳೆ. ಅದರ ವಿಚಾರವನ್ನು ನೀನು ಮಾಡದೆ ಕ್ರೋಧವಶನಾಗಿ ಅನ್ಯಾಯವನ್ನು ಮಾಡುತ್ತಿದ್ದೀಯೇ ಈ ಶಬ್ದದೊಡನೆ ಆ ಶಸ್ತ್ರಗಳೆಲ್ಲಾ ಮುತ್ತು ಮತ್ತು ರತ್ನದ ಹಾರಗಳಾಗಿ ಅವನ ಕಂಠದಲ್ಲಿ ಅಲಂಕರಿಸಿದವು. ಅದರಿಂದ ಎಲ್ಲಾ ಕಡೆಯಲ್ಲಿ ಧನ್ಯ ಧನ್ಯ ಎಂಬ ಜಯ ಜಯ ಕಾರ ಶಬ್ದದೊಡನೆ ಪುಷ್ಪವೃಷ್ಟಿಯಾಯಿತು. ಈ ಎಲ್ಲಾ ಚಮತ್ಕಾರವನ್ನು ನೋಡಿ ರಾಜನಿಗೆ ಮತ್ತು ಅಲ್ಲಿದ್ದ ಎಲ್ಲರಿಗೆ ಆಶ್ಚರ್ಯವಾಯ್ತು. ರಾಜನು ಭಯಭೀತನಾಗಿ ಸುದರ್ಶನನ ಚರಣಕ್ಕೆ ವಂದಿಸಿದನು. ಶ್ರೇಷ್ಠಿಯೇ, ನನನ್ನು ರಕ್ಷಿಸು, ರಕ್ಷಿಸು, ಎಂದು ದೀನವಾಣಿ ಯಿಂದ ಹೇಳಿದನು. ಸುದರ್ಶನನು ಕ್ರೋಧವಶನಾಗದೆ ರಾಜನೇ, ಹೆದರ ಬೇಡ, ಶಾಂತಿಯನ್ನು ಹೊಂದು ಎಂದನು.

ರಾಣಿಯ ಮಾಯಾಚಾರದ ವರ್ತನೆಯನ್ನು ನೋಡಿ ರಾಜನಿಗೆ ವೈರಾಗ್ಯವಾಯಿತು. ಎಲ್ಲರೂ ಅವಳನ್ನು ಧಿಕ್ಕರಿಸಿದರು. ಅವಳು ಮುಂದಿನ ಭವದ ಕರ್ಮವನ್ನು ಕಟ್ಟಿಕೊಂಡಳು. ಆದುದರಿಂದ ಭವ್ಯಾತ್ಮರೇ! ನೋಡಿ, ತನ್ನ ಆತ್ಮಧರ್ಮದಲ್ಲಿರುವುದೇ ನಿಶ್ಚಯ ಕ್ಷಮಾಧರ್ಮವಾಗಿದೆ. ಇಂಥಹ ಸಂಕಟದ ಸಮಯದಲ್ಲಿಯೂ ತನ್ನ ಆತ್ಮಸ್ವರೂಪವಾದ ಕ್ಷಮಾ ಧರ್ಮದಿಂದ ಚ್ಯುತನಾಗದಿರುವುದು ಮಹಾಪುರುಷರ ಲಕ್ಷಣವಾಗಿದೆ. ನಿಮಗೆ ಕರ್ಮದಿಂದ ಬಿಡುಗಡೆಯಾಗುವ ಇಚ್ಛೆ ಇದ್ದರೆ ಈ ಪ್ರಕಾರ ಕ್ಷಮಾಧರ್ಮವನ್ನು ಧಾರಣೆ ಮಾಡಿರಿ. ಇದು ಭಗವಂತನ ವಚನವಿದೆ. ಇದನ್ನು ನಂಬಿರಿ.

ನಿಮಗೆ ಈ ಸಂಸಾರದಿಂದ ಬೇಗನೇ ಬಿಡುಗಡೆಯಾಗಲೆಂದು ಇಚ್ಛೆ ಇದ್ದರೆ ಪಾಪ ಪುಣ್ಯಗಳ ವಿಚಾರ ಮಾಡಿರಿ. ಗುಣವಂತರನ್ನು ನೋಡಿ ಸಂತೋಷ ಪಡಿರಿ. ತಮ್ಮ ಹೃದಯದಲ್ಲಿ ಸದ್ಗುಣಕ್ಕೆ ಸ್ಥಾನವನ್ನು ಕೊಡಿರಿ ಸದ್ಗುಣಗಳನ್ನು ನಾಶ ಮಾಡಬೇಡಿರಿ. ಅನೇಕ ಗುಣಗಳನ್ನು ನಾಶ ಮಾಡುವ ಕ್ರೋಧವು ಯಮನಂತಿದೆ. ಕ್ರೋಧೀ ಮನುಷ್ಯನು ಮೊದಲು ತನ್ನ ಜ್ಞಾನದರ್ಶನ, ಕ್ಷಮೆ ಮೊದಲಾದ ಅನೇಕ ಗುಣಗಳನ್ನು ನಾಶ ಮಾಡುತ್ತಾನೆ ನಂತರ ಕರ್ಮದ ವಶನಾಗಿ ಬೇರೆಯವರ ನಾಶವಾಗು ತ್ತದೋ ಇಲ್ಲವೋ ಎಂಬ ವಿಚಾರವನ್ನು ಮಾಡದೆ ಬೇರೆಯವರನ್ನು ಘಾತ ಮಾಡಲು ಪ್ರಯತ್ನ ಪಡುತ್ತಾನೆ. ಕ್ರೋಧದ ಪ್ರಭಾವದಿಂದ ದೊಡ್ಡ ದೊಡ್ಡ ತಪಸ್ವಿಗಳೂ ಮುನಿಗಳೂ ಧರ್ಮಭ್ರಷ್ಟರಾಗಿ ದುರ್ಗತಿಯನ್ನು ಹೊಂದಿದರು. ಈ ಕ್ರೋಧವು ಇಹಲೋಕದಲ್ಲಿ ಸರ್ವಗುಣಗಳನ್ನು ನಾಶ ಮಾಡುತ್ತದೆ. ಪರಲೋಕದಲ್ಲಿ ಪಾಪ ಬಂಧವನ್ನು ಮಾಡಿಸಿ ನರಕಾದಿ ದುರ್ಗತಿಗಳಿಗಿಳಿಸುತ್ತದೆ. ಇದನ್ನು ವಿಚಾರ ಮಾಡಿ ಭವ್ಯಾತ್ಮರೇ! ಕ್ರೋಧ ವನ್ನು ಬಿಡಿರಿ. ಮತ್ತು ನೀವು ಅನಾದಿಕಾಲದಿಂದ ಜಿನಧರ್ಮದ ಆರಾಧ ನೆಯನ್ನು ಮಾಡಿರುವುದರಿಂದ ಮತ್ತು ಸಮ್ಯಕ್ತ್ವ-ಶ್ರದ್ಧೆಯನ್ನು ಹೊಂದ

ದಿರುವುದರಿಂದ ಈ ಸಂಸಾರವೆಂಬ ಸಮುದ್ರದಲ್ಲಿ ತೊಳಲುತ್ತಿದ್ದೀರಿ ಬಳಲುತ್ತಿದ್ದೀರಿ.

ಸಂಸಾರ ವನ ಭ್ರಮಣಂ
ಕುರ್ವನ್ ಆರಾಧಿತೋ ನ ಜಿನಧರ್ಮ
ತೇನವಿನಾ ವರಂ ದುಃಖಂ,
ಪ್ರಾಪ್ತೋಸಿ ಅನಂತವಾರಂ ||

ಕಲ್ಯಾಣಾಲೋಚನಾ.

ಜೀವನೇ, ಈ ಸಂಸಾರ ಪರಿಭ್ರಮಣೆಯನ್ನು ಮಾಡಿಕೊಂಡು ಅದರಲ್ಲಿ ಜಿನಧರ್ಮದ ಆಶ್ರಯವನ್ನು ಮಾಡಲಿಲ್ಲ. ಆದುದರಿಂದಲೇ ಅನಂತ ಸಾರಿ ದುಃಖವನ್ನು ಪ್ರಾಪ್ತ ಮಾಡಿಕೊಂಡಿದ್ದೀಯೇ, ಆದುದರಿಂದ ಜಿನಧರ್ಮವನ್ನು ಆಶ್ರಯಿಸಿ, ಇನ್ನಾದರೂ ಸಮ್ಯಕ್ ಶ್ರದ್ಧೆಯನ್ನು ಮಾಡು. ಈ ಸಮ್ಯಕ್ ಶ್ರದ್ಧೆಯನ್ನು ಬಿಟ್ಟು ಆತ್ಮ ಕಲ್ಯಾಣವನ್ನು ಮಾಡಲು ಬೇರೆ ಯಾವ ಉಪಾಯವು ಇಲ್ಲ. ಸಮ್ಯಗ್ದರ್ಶನವೂ ಎಲ್ಲಾ ಧನಗಳಲ್ಲಿಯೂ ಪ್ರಧಾನವಾದ ಧನವಾಗಿದೆ, ಆದುದರಿಂದ ನೀವು ಸಮ್ಯಗ್ದರ್ಶನವನ್ನು ಧಾರಣೆ ಮಾಡಿರಿ. ಸಮ್ಯಕ್ತ್ವವೆಂಬ ಅಲಂಕಾರವಿಲ್ಲದಿದ್ದರೆ ಎಷ್ಟು ಜಡ ಅಲಂಕಾರಗಳನ್ನು ಹಾಕಿದರೂ ಶೋಭೆಯಿಲ್ಲ.

ಸಮ್ಯಕ್ತ್ವಂ ಭೂಷಣಂ ನಾಸ್ತಿ ಭೂಷಣಂ ಭುವನತ್ರಯೇ ।
ಧನಂ ಸರ್ವಧನೇಭ್ಯೋಹಿ ಸಮ್ಯಕ್ತ್ವ ಧನಮುತ್ತಮಂ ||

ಪ್ರಶ್ನೋತ್ತರ ಮಾಣಿಕ್ಯಮಾಲಾ.

ಈ ಮೂರು ಲೋಕದಲ್ಲಿ ಸಮ್ಯಕ್ತ್ವವನ್ನು ಬಿಟ್ಟು ಬೇರೆ ಯಾವ ಅಲಂಕಾರವೂ ಇಲ್ಲ. ಎಲ್ಲಾ ಧನಗಳಲ್ಲಿ ಸಮ್ಯಕ್ತ್ವವೆಂಬ ಧನವು ಪ್ರಧಾನ ಮತ್ತು ಶ್ರೇಷ್ಠವಾದ ಧನವಾಗಿದೆ, ಆದುದರಿಂದ ಆ ಸಮ್ಯಕ್ತ್ವದ ಪ್ರಾಪ್ತಿಯನ್ನು ಮಾಡಿಕೊಳ್ಳಿರಿ. ಉತ್ತಮ ಕ್ಷಮಾ ಧರ್ಮವು ಸಮ್ಯಗ್‌ದೃಷ್ಟಿಯ ಹೃದಯದಲ್ಲಿ ವಾಸ ಮಾಡಿಕೊಂಡಿರುತ್ತದೆ. ಸಮ್ಯಗ್‌ದೃಷ್ಟಿ ಜೀವನಿಗೂ

ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ಕೋಪವು ಬರುತ್ತದೆ. ಆದರೆ ಸಮ್ಯಕ್ತ್ವದ ಪ್ರಭಾವದಿಂದ ಸ್ವಲ್ಪ ಸಮಯದಲ್ಲಿಯೇ ಉಪಶಮವಾಗುತ್ತದೆ. ಸಮ್ಯಗ್‌ದೃಷ್ಟಿಯು ತನ್ನ ಹೃದಯದಲ್ಲಿ ದೀರ್ಘಕಾಲದ ವರೆಗೆ ಕ್ರೋಧವನ್ನು ಇಡುವುದಿಲ್ಲ. ಆದುದರಿಂದ ಈ ಮಾನವ ಜೀವದಲ್ಲಿ ಸಮ್ಯಗ್‌ದೃಷ್ಟಿಯು ಶ್ರೇಷ್ಟನಾದವನೆಂದು ಹೇಳಲ್ಪಡುತ್ತಾನೆ.

**ಉತ್ತಮೇತು ಕ್ಷಣಂ ಕೋಪೋ, ಮಧ್ಯಮೇ ಘಟಿಕಾದ್ವಯಂ ।**
**ಅಧಮೇ ಸ್ಯಾದಹೋರಾತ್ರಂ, ಚಾಂಡಾಲೇ ಮಾರಣಾಂತಿಕಂ ॥**

ಸುಭಾಷಿತ ರತ್ನಾವಲಿ.

ನೀತಿಕಾರರು ಹೀಗೆ ಹೇಳುತ್ತಾರೆ. ಉತ್ತಮ ಮನುಷ್ಯರಲ್ಲಿ ಕ್ರೋಧವು ಬಂದರೆ ಒಂದು ಕ್ಷಣಮಾತ್ರ ಇರುತ್ತದೆ. ಮಧ್ಯಮ ಮನುಷ್ಯರಲ್ಲಿ ಎರಡು ಗಳಿಗೆಗಳಿರುತ್ತದೆ. ನೀಚರಿಗೆ ಕೋಪ ಬಂದರೆ ರಾತ್ರೆ ಹಗಲು ಇರುತ್ತದೆ. ಇನ್ನು ನೀಚ ಪ್ರಕೃತಿಯುಗಾದ ಚಾಂಡಾಲರಿಗ ಕ್ರೋಧ ಬಂದರೆ ಆಮರಣ ಇರುತ್ತದೆ. ಆದುದರಿಂದ ಎಲೇ ಭವ್ಯಾತ್ಮರೇ ! ನೀವು ಉತ್ತಮರೆಂದೆನ್ನಿಸಿಕೊಂಡು ಉತ್ತಮ ಕ್ಷಮಾ ಧರ್ಮದ ಲಾಭವನ್ನು ಪಡೆದು ಕೊಳ್ಳಿರಿ. ಜ್ಞಾನಿಗಳು ಉತ್ತಮ ಧರ್ಮವನ್ನು ಚಿಂತಾಮಣಿ ರತ್ನವೆಂದು ತಿಳಿಯುತ್ತಾರೆ. ಉತ್ತಮ ಕ್ಷಮೆಯೇ ಮನಸ್ಸಿನಲ್ಲಿ ಉಜ್ವಲತೆಯನ್ನು ನಿರ್ಮಿಸುತ್ತದೆ. ಕ್ಷಮೆ ಇಲ್ಲದಿದ್ದರೆ ಅನೇಕ ವ್ರತ, ಉಪವಾಸ ಮತ್ತು ಘೋರ ತಪಶ್ಚರಣೆಯನ್ನು ಮಾಡಿಯೂ ಏನೂ ಉಪಯೋಗವಿಲ್ಲ. ಅದರಿಂದ ಆತ್ಮಕಲ್ಯಾಣವಾಗದೆ ಅಧೋಗತಿಗೆ ಹೋದ ಎಷ್ಟೋ ದೃಷ್ಟಾಂತಗಳು ಶಾಸ್ತ್ರದಲ್ಲಿ ಕಾಣುತ್ತವೆ.

ಒಂದು ಶಾಸ್ತ್ರದಲ್ಲಿ ಈ ರೀತಿ ಬಂದಿದೆ. ಒಬ್ಬ ಮಾಸೋಪವಾಸೀ ಮುನಿಗಳು ತಪಶ್ಚರ್ಯೆಯನ್ನು ಮಾಡುತ್ತಿದ್ದರು. ಆ ರಾಜ್ಯದ ರಾಜನು ತನ್ನ ಅರಮನೆಯಲ್ಲಿ ಮುನಿಗಳ ಆಹಾರವಾಗಬೇಕೆಂಬ ಭಾವನೆಯಿಂದ

ರಾಜ್ಯದಲ್ಲಿ ಬೇರೆಯವರು ಯಾರೂ ಆಹಾರ ದಾನಕ್ಕೆ ನಿಲ್ಲಬಾರದೆಂದು ಆಜ್ಞೆಯನ್ನು ಹೊರಡಿಸಿದನು. ಮುನಿಗಳು ಮಾಸೋಪವಾಸವನ್ನು ಮುಗಿಸಿ ಪಾರಣೆಗೆ ಊರಿಗೆ ಬಂದರು ಆಹಾರ ಕೊಡಲು ಯಾರೂ ನಿಲ್ಲ ಲಿಲ್ಲ. ಮುನಿಗಳು ತಿರುಗಾಡಿ ಆಹಾರ ಸಿಗದೆ ಪುನಃ ಮಾಸೋಪವಾಸ ವನ್ನು ಧಾರಣೆ ಮಾಡಿ ಧ್ಯಾನದಲ್ಲಿ ನಿತ್ತರು. ಪುನಃ ಒಂದು ತಿಂಗಳ ನಂತರ ಪಾರಣೆಗೋಸ್ಕರ ಊರಿಗೆ ಬಂದರು. ಆವಾಗಲೂ ಯಾರೂ ಆಹಾ ರಕ್ಕೆ ನಿಲ್ಲಲಿಲ್ಲ, ರಾಜನೂ ನಿಲ್ಲಲಿಲ್ಲ, ಮೂರು ತಿಂಗಳು ಉಪವಾಸ ಮಾಡಿಯೂ ಮುನಿಗಳು ಶಾಂತರಾಗಿದ್ದರು.

ಆದರೆ ಕರ್ಮದ ಉದಯದಿಂದ ನಿಮಿತ್ತವು ಹೀಗಾಯ್ತು. ಒಬ್ಬ ಹೆಂಗಸು « ರಾಜನು ತಾನೂ ಆಹಾರ ಕೊಡುವುದಿಲ್ಲ. ಬೇರೆಯವರಿಗೂ ಕೊಡಲು ಬಿಡುವುದಿಲ್ಲ.” ಎಂದು ಹೇಳಿದಳು. ಈ ಮಾತನ್ನು ಕೇಳಿ ಮುನಿಗಳ ಕ್ರೋಧವು ಉದ್ರೇಕಿಸಿತು. ಅದರಿಂದ ಮರಣ ಹೊಂದಿ ಅವರು ಕುದೇವನಾಗಿ ಹುಟ್ಟಿದರು. ಕರ್ಮದ ಗತಿಯನ್ನು ನೋಡಿರಿ. ಮಹಾವ್ರತ ವನ್ನು ಧಾರಣೆ ಮಾಡಿಯೂ ಕುದೇವನಾಗಿ ಹುಟ್ಟಬೇಕಾಯಿತು. ಕುದೇವನು ಅವಧಿಜ್ಞಾನದಿಂದ ತನ್ನ ಪೂರ್ವಭವದ ವಿಷಯವನ್ನು ವಿಚಾರ ಮಾಡಿ ಯಾವ ವೈರಿಯು ನನ್ನನ್ನು ಹಿಂದಿನ ಜನ್ಮದಲ್ಲಿ ಮೋಸ ಗೊಳಿಸಿದನೋ ಅವನ ಸೇಡು ತೀರಿಸದೆ ಬಿಡಲಾರೆ, ಹೀಗೆ ನಿದಾನ ಮಾಡಿ ಕೊಂಡು ಅಲ್ಲಿಂದ ಮುಂದೆ ಚೇಲನಾ ರಾಣಿಯ ಗರ್ಭದಲ್ಲಿ ಬಂದನು. ಮತ್ತು ಕುಣಿಕನೆಂಬ ರಾಜಕುಮಾರನಾಗಿ ಹುಟ್ಟಿ ತನ್ನ ತಂದೆಯಾದ ಶ್ರೇಣಿಕನನ್ನು ಬಂಧನಬದ್ಧನನ್ನಾಗಿ ಮಾಡಿದನು. ಹಿಂದಿನ ಭವದ ರಾಜನೇ ಶ್ರೇಣಿಕನಾಗಿ ಹುಟ್ಟಿದನು. ಶ್ರೇಣಿಕ ಚರಿತ್ರೆಯಲ್ಲಿ ಈ ಪ್ರಸಿದ್ಧ ಘಟನೆಯು ಉಲ್ಲೇಖವಿದೆ. ಆದುದರಿಂದ ಭವ್ಯಾತ್ಮರೇ ! ಈ ಕ್ರೋಧವೆಂಬ ಶತ್ರುವನ್ನು ನಾಶ ಮಾಡಿ ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಇದು ಭಗವಂತನ ವಚನವಿದೆ. ಜ್ಞಾನಿಗಳು ಭಗವಂತನ ವಚನದಲ್ಲಿ ದೃಢವಾದ ವಿಶ್ವಾಸವ

ನ್ನಿಟ್ಟು ಯಾವ ಕಾರ್ಯವು ಯೋಗ್ಯವಾಗಿದೆ, ಯಾವ ಕಾರ್ಯವು ಅಯೋಗ್ಯವಾಗಿದೆ, ಯಾವುದು ಹಿತಕರ, ಯಾವುದು ಅಹಿತಕರ, ಇದರ ವಿಚಾರವನ್ನು ಮಾಡಿ ಆತ್ಮಕಲ್ಯಾಣದ ಕಾರ್ಯದಲ್ಲಿ ತನ್ನ ಸಮಯವನ್ನು ಕಳೆಯುತ್ತಾರೆ. ಆದುದರಿಂದ ಅವರಿಗೆ ಸಂಸಾರದಲ್ಲಿ ಇದ್ದೂ ದೀರ್ಘ ಸಂಸಾರಕ್ಕೆ ಕಾರಣವಾದ ಕರ್ಮಬಂಧನವಾಗುವುದಿಲ್ಲ. ಆದುದರಿಂದಲೇ ಸಮ್ಯಗ್ದೃಷ್ಟಿಗೆ ಕರ್ಮಬಂಧನವಾಗುವುದಿಲ್ಲವೆಂದು ಹೇಳಿದ್ದಾರೆ. ಸಮ್ಯಗ್ದೃಷ್ಟಿಗಳು ಎಲ್ಲಾ ಕಾರ್ಯವನ್ನು ಮಾಡುತ್ತಿರುತ್ತಾರೆ. ಆದರೆ ಅವರು ಮಾಡುತ್ತಿರುವ ಕಾರ್ಯಗಳು ಆತ್ಮಕಲ್ಯಾಣಕ್ಕೆ ಸಹಾಯಕವಾಗಿರುತ್ತವೆ ಅವರು ಸತತ ಶಾಸ್ತ್ರ ಅಭ್ಯಾಸ ಮಾಡಿ ಶುಭ ಶುಭಗತಿಗೆ ಕಾರಣವಾದ ಬಂಧವನ್ನೇ ಕಟ್ಟಿಕೊಳ್ಳುತ್ತಾರೆ. ಈ ವಿಷಯದಲ್ಲಿ ಒಬ್ಬ ನೀತಿಕಾರನು ಈ ಕೆಳಗಿನ ಶ್ಲೋಕದಲ್ಲಿ ತನ್ನ ಅಭಿಪ್ರಾಯ ಪಟ್ಟಿದ್ದಾನೆ.

**ಕಾವ್ಯ ಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಂ ।**
**ವ್ಯಸನೇನ ಚ ಮೂರ್ಖಾಣಾಂ ನಿದ್ರಯಾ ಕಲಹೇನ ವಾ ॥**

ಸುಭಾಷಿತ ರತ್ನಾವಲಿ.

ಬುದ್ಧಿವಂತರು ಕಾವ್ಯಶಾಸ್ತ್ರಗಳನ್ನು ವಿಚಾರ ಮಾಡುತ್ತಾ ತನ್ನ ಸಮಯವನ್ನು ಕಳೆಯುತ್ತಾರೆ. ಆದರಿಂದ ಅವರಿಗೆ ಪುಣ್ಯಬಂಧವಾಗುತ್ತದೆ. ಮೂರ್ಖಜನರು ಕ್ರೋಧಾದಿ ಕಷಾಯಗಳ ವಶರಾಗಿ ಕಲಹದಲ್ಲಿ ದುಷ್ಟ ಚಿಂತನೆಯಲ್ಲಿ ಅಥವಾ ನಿದ್ರೆಯಲ್ಲಿ ಸಮಯ ತೆಗೆಯುತ್ತಾರೆ. ಅದರಿಂದ ಅಶುಭ ಕರ್ಮದ ಬಂಧವಾಗುತ್ತದೆ. ಆದುದರಿಂದ ಭವ್ಯರೇ! ನೀವು ಜ್ಞಾನಿಗಳಾಗಿ ಆತ್ಮಕಲ್ಯಾಣಕ್ಕೋಸ್ಕರವಾಗಿ ಉತ್ತಮ ಕ್ಷಮೆಯನ್ನು ಧಾರಣೆ ಮಾಡಿರಿ. ದುಷ್ಟರಿಂದ ಕೆಲವು ಪ್ರಸಂಗದಲ್ಲಿ ದುರ್ವಚನ ಮೊದಲಾದುವುಗಳ ಕಷ್ಟವಾದರೂ ಅದು ಜಡರೂಪವಾಗಿದೆ. ಆ ಜಡ ಶಬ್ದವು ಚೈತನ್ಯ ಸ್ವರೂಪನಾದ ಆತ್ಮನಿಗೆ ತಗಲುವುದಿಲ್ಲ. ನಾನು ಅವನಿಗೆ ಏನಾದರೂ ಅಪರಾಧ ಮಾಡಿದ್ದರೆ ಅದು ನನಗೆ ತಾಗ ಬಹುದು. ನಾನು

ಅವನಿಗೆ ಅನ್ಯಾಯ ಮಾಡಿದ್ದರೆ ಅವನು ಮಾಡುತ್ತಿರುವುದು ಸರಿ. ಆದರೆ ನಾನೇನೂ ಅಪರಾಧ ಮಾಡಲಿಲ್ಲ. ಹೀಗಿರುವಾಗ ನನಗೆ ಯಾರಾದರೂ ಅಪರಾಧೀ, ಪಾಪೀ, ಚಾಂಡಾಲ ಮೊದಲಾದ ಶಬ್ದಗಳಿಂದ ನನ್ನನ್ನು ಬೈದರೆ ಆದರಿಂದ ನನ್ನ ಹಾನಿ ಏನಾಗುವುದಿದೆ ? ಆದರಿಂದ ನನಗೆ ಕರ್ಮಬಂಧನಾಗಲು ಸಾಧ್ಯವಿಲ್ಲ. ಹೀಗೆ ತಿಳಿದು ಆ ಜ್ಞಾನಿಯು ನಿಶ್ಚಿಂತನಾಗಿರುತ್ತಾನೆ ಆದುದರಿಂದ ಈ ದೃಷ್ಟಿಯಿಂದ ಜ್ಞಾನಿಗೆ ಕರ್ಮಬಂಧವಾಗುವುದಿಲ್ಲವೆಂದು ಹೇಳಲಾಗಿದೆ. ಅವನು ಸಂಸಾರದಲ್ಲಿದ್ದರೂ ಕರ್ಮಬಂಧವಾಗುವುದಿಲ್ಲ. ಆದುದರಿಂದಲೇ ಜ್ಞಾನಿಯು ಸರ್ವ ಕ್ರಿಯೆಗಳು ಇಚ್ಛಾರಹಿತವಾಗಿರುತ್ತವೆಂದು ಹೇಳಲಾಗಿವೆ. ಅವನಲ್ಲಿ ಸಂಸಾರದ ಕಾರ್ಯದಲ್ಲಿ ಆಸಕ್ತಿ ಇರುವುದಿಲ್ಲ. ರಾಗದ್ವೇಷಗಳಿರುವುದಿಲ್ಲ. ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ಅವನು ಸಂಸಾರದಲ್ಲಿರುತ್ತಾನೆ. ಆದರೆ ಅದರಲ್ಲಿ ಆಸಕ್ತಿ ಇರುವುದಿಲ್ಲ. ಒಂದು ಕಡೆ ಹೀಗೆ ಹೇಳಿದ್ದಾರೆ.

**ವಿನಾಪ್ರೀತಿ ಮದಿರಾ ಪಿಯೆ ಮತ್ತ ಪುರುಷ ನ ಹಿ ಹೋಯ ।**
**ದ್ರವ್ಯಭೋಗ ತ್ಯೋಂ ರಾಗವಿನ, ಜ್ಞಾನೀ ಬಂಧ ನ ಕೋಯ ॥**

ಸಮಯಸಾರ.

ಜ್ಞಾನೀ ಪುರುಷರು ಇಚ್ಛೆ ಇಲ್ಲದೆ ಕಾರ್ಯಗಳನ್ನು ಮಾಡಿದರೆ ಕರ್ಮಬಂಧವಾಗಲಾರದು. ಹೇಗೆಂದರೆ ಒಬ್ಬ ಸಜ್ಜನ ಪುರುಷನಿಗೆ ಅವನ ಇಚ್ಛೆ ಇಲ್ಲದೆ ಬಲಾತ್ಕಾರದಿಂದ ಯಾರಾದರೂ ಹೆಂಡವನ್ನು ಕುಡಿಸಿದರೆ ಅವನು ಉನ್ಮತ್ತನೆಂದು ಹೇಳಲ್ಪಡಲಾರ. ಅದೇ ಪ್ರಕಾರವಾಗಿ ಜ್ಞಾನಿಗಳು ದ್ರವ್ಯಭೋಗಗಳನ್ನು ಭೋಗಿಸುತ್ತಿದ್ದರೂ ಕರ್ಮಬಂಧನದಿಂದ ಅಲಿಪ್ತರಾಗಿರುತ್ತಾರೆ. ಅವರು ಸಂಸಾರದಿಂದ ಸ್ವಯಂ ತನ್ನನ್ನು ಪಾರ ಮಾಡಿಕೊಳ್ಳುತ್ತಾರೆ. ಬೇರೆಯವರನ್ನು ಪಾರಗೊಳಿಸುತ್ತಾರೆ. ಇದು ನಿಜವಾಗಿದೆ. ಜ್ಞಾನಿಯು ಯಾವಾಗಲೂ ಹೊಸದಾಗಿ ಕರ್ಮಬಂಧನಗಳನ್ನು ಮಾಡಿಕೊಳ್ಳುವುದಿಲ್ಲ, ಕರ್ಮಬಂಧವಾದರೂ ಪುಣ್ಯಕರ್ಮಗಳನ್ನೇ ಕಟ್ಟೆ

ಕೊಳ್ಳುತ್ತಾನೆ. ಪಾಪಕರ್ಮಗಳ ಸಂಚಯವನ್ನು ಮಾಡಿಕೊಳ್ಳುವುದಿಲ್ಲ. ಅವನು ಪರೋಪಕಾರವನ್ನು ಮಾಡುತ್ತಾನೆ. ಎಲ್ಲಾ ಜೀವರುಗಳಲ್ಲಿ ಸಮಭಾವವನ್ನು ಇಡುತ್ತಾನೆ. ದುಷ್ಟರು ಅವನಿಗೆ ಕಷ್ಟವನ್ನು ಕೊಟ್ಟರೂ ಅವರ ಮೇಲೆ ದೋಷ ಕೊಡದೆ ತನ್ನ ಕರ್ಮದ ಉದಯವೆಂದು ತಿಳಿಯುತ್ತಾನೆ. ನಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಇದು ಫಲವೆಂದು ತಿಳಿಯುತ್ತಾನೆ. ಅದನ್ನು ಅನುಭವಿಸಲೇ ಬೇಕು ಎಂದು ತಿಳಿಯುತ್ತಾನೆ. ಜ್ಞಾನಿಯು ತನ್ನ ಗುಣಗಳ ಅಲಂಕಾರದಲ್ಲಿ ಇದ್ದು ಸಮಾಧಾನವನ್ನು ಪಡೆಯುತ್ತಾನೆ. ಅವನು ಮನ ವಚನ ಕಾಯ ಮತ್ತು ಧನದಿಂದ ಪರೋಪಕಾರವನ್ನು ಮಾಡುತ್ತಿರುತ್ತಾನೆ. ಪರೋಪಕಾರವನ್ನು ಮಾಡುವುದೇ ಮನುಷ್ಯನ ಶ್ರೇಷ್ಟ ಕರ್ತವ್ಯವಾಗಿದೆ. ಪರೋಪಕಾರವಿಲ್ಲದಿದ್ದರೆ ಮನುಷ್ಯನ ಜೀವನದಲ್ಲಿ ಶೋಭೆಯಿಲ್ಲ. ಪರೋಪಕಾರದಂತಹ ಪುಣ್ಯವಿಲ್ಲ. ಆದುದರಿಂದ ಜ್ಞಾನಿಗಳ ವೈಭವವು ಪರೋಪಕಾರದಲ್ಲಿ ವ್ಯಯವಾಗುತ್ತದೆ. ಶಾಸ್ತ್ರದಲ್ಲಿ ಈ ವಿಷಯವಾಗಿ ಹೀಗೆ ಹೇಳಿದ್ದಾರೆ.

> ಪಿಬಂತಿ ನದ್ಯಃ ಸ್ವಯಮೇವ ನಾಂಭಃ
> ಸ್ವಮೇವ ಖಾದಂತಿ ಫಲಂ ನ ವೃಕ್ಷಾಃ,
> ನಾದಂತಿ ಸಸ್ಯಂ ಖಲು ವಾರಿವಾಹಾ:
> ಪರೋಪಕಾರಾಯ ಸತಾಂ ವಿಭೂತಯಃ ॥

ಸುಭಾಷಿತ ರತ್ನಾವಲಿ.

ನದಿಗಳು ತಾವೇ ನೀರನ್ನು ಕುಡಿಯುವುದಿಲ್ಲ ಮರಗಳು ತಾವೇ ಫಲಗಳನ್ನು ತಿನ್ನುವುದಿಲ್ಲ, ಮಳೆಗಳು ತಮ್ಮಿಂದ ಉತ್ಪನ್ನವಾದ ಸಸ್ಯ, ಧಾನ್ಯಗಳನ್ನು ತಾವೇ ತಿನ್ನುವುದಿಲ್ಲ. ಅವೆಲ್ಲ ಬೇರೆಯವರ ಉಪಕಾರಕ್ಕೋಸ್ಕರವಾಗಿಯೇ ಇರುತ್ತವೆ. ಹಾಗೆಯೇ ಜ್ಞಾನೀ ಪುರುಷರ ವೈಭವವು ಪರೋಪಕಾರಕ್ಕೋಸ್ಕರವೇ ಆಗಿರುತ್ತದೆ. ಇದನ್ನು ತಿಳಿದು ನೀವು ಯಥಾಶಕ್ತಿ ಪರೋಪಕಾರವನ್ನು ಮಾಡಿರಿ. ಯಾರಾದರೂ ನಿಮ್ಮ ಮೇಲೆ ಉಪ

ಕಾರ ಮಾಡಿದರೆ ನೀವು ಅವರಿಗೆ ಪ್ರತಿ ಉಪಕಾರವನ್ನು ಮಾಡಲು ಸಾಧ್ಯವಾಗದಿದ್ದರೆ ಅವರಿಗೆ ಅಪಕಾರವನ್ನಾದರೂ ಮಾಡಬೇಡಿರಿ. ಅಪ ಕಾರವನ್ನು ಮಾಡಿದರೆ ದೊಡ್ಡ ಅನ್ಯಾಯವಾದೀತು.

ನೋಡಿ ಒಂದು ದಿವಸ ಒಬ್ಬ ಸಮ್ಯಗ್ದೃಷ್ಟಿಯು ಮಾರ್ಗದಿಂದ ಹೋಗುತ್ತಿದ್ದ. ಹೋಗುತ್ತಿರುವಾಗ ಮಾರ್ಗದಲ್ಲಿ ಒಬ್ಬ ದುಃಖದಿಂದ ಪೀಡಿತನಾದ ಮನುಷ್ಯನನ್ನು ನೋಡಿದನು. ಆ ಸಮಯದಲ್ಲಿ ಆ ಸಮ್ಯಗ್ ದೃಷ್ಟಿಗೆ ದಯೆಯುಂಟಾಗಿ ಆ ದು:ಖಿತನ ಬಳಿ ಹೋಗಿ ಅವನ ದುಃಖದ ಕಾರಣವನ್ನು ಕೇಳಿದನು. ಅವನನ್ನು ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡು ಅವನನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿದನು. ಆಗ ಅವನಿಗೆ ಕಣ್ಣಿನಲ್ಲಿ ಮುಳ್ಳು ತಾಗಿದ್ದನ್ನು ಕಂಡನು. ಯುಕ್ತಿಯಿಂದ ಆ ಮುಳ್ಳನ್ನು ಹೊರಗೆ ತೆಗೆದನು. ಮತ್ತು ಕಣ್ಣಿನಲ್ಲಿದ್ದ ಕಸಗಳನ್ನು ತನ್ನ ನಾಲಿಗೆಯಿಂದ ತೆಗೆದನು. ಹೀಗೆ ಮಾಡಿದಾಗ ಆ ಮನುಷ್ಯನಿಗೆ ಬಹಳ ಕೋಪ ಬಂತು. ಕೋಪದ ಭರದಿಂದ ಅವನಿಗೆ ಅನೇಕ ಕಟು ಶಬ್ದಗಳನ್ನು ಹೇಳತೊಡ ಗಿದನು. ಬೈಯತೊಡಗಿದನು. ಆದರೆ ಆ ಸಜ್ಜನನು ಇದೆಲ್ಲಾ ಕರ್ಮದ ಆಟವೆಂದು ತಿಳಿದು ಶಾಂತರೀತಿಯಿಂದಿದ್ದನು.

ನೋಡಿ ದುರ್ಜನರ ಚಿತ್ತವು ಹೇಗಿರುತ್ತದೆ ? ಉಪಕಾರ ಮಾಡಿ ದವರಿಗೆ ಅವರು ಉಪಕಾರ ಮಾಡುವುದೇ ಇಲ್ಲ. ಪ್ರತ್ಯುತ ಅಪಕಾರ ಮಾಡುತ್ತಾರೆ. ಆದುದರಿಂದ ಅವರ ಸ್ವಭಾವಕ್ಕೆ ಔಷಧವಿಲ್ಲವೆಂದು ಹೇಳು ತ್ತಾರೆ. ಅದು ನಿಜವಾಗಿದೆ. ಹೀಗಾದರೂ ಆ ಸಜ್ಜನ ಗೃಹಸ್ಥನು ತನ್ನ ಮನಸ್ಸಿನಲ್ಲಿ ಕಷಾಯವನ್ನು ಜಾಗೃತಿಗೊಳಿಸದೆ ಕ್ಷಮೆಯನ್ನು ಧಾರಣೆ ಮಾಡಿದನು. ಮತ್ತು ಆ ದುಷ್ಟನಿಗೆ "ಭದ್ರ, ಇದರಲ್ಲಿ ನನ್ನ ತಪ್ಪಿದ್ದರೆ ತಿಳಿಸು. ಮುಂದೆ ನಾನು ಸುಧಾರಿಸಿ ಕೊಳ್ಳುವೆನು, ಮುಂದೆಂದೂ ಇಂಥಹ ತಪ್ಪು ಮಾಡಲಾರೆ' ಎಂದನು.

## ಕ್ಷಮಾ ವೀರಸ್ಯ ಭೂಷಣಂ

ಕ್ಷಮೆಯನ್ನು ಧಾರಣೆ ಮಾಡುವುದು ಇದು ವೀರ ಪುರುಷನಿಗೆ ಭೂಷಣವಾಗಿದೆ. ಮತ್ತು ದುರ್ಜನರಿಗೆ ಎಷ್ಟು ಉಪಕಾರ ಮಾಡಿದರೂ ಅವರು ತನ್ನ ಅಪಕಾರ ಬುದ್ಧಿಯನ್ನು ಮತ್ತು ತನ್ನ ದುಷ್ಟ ಸ್ವಭಾವ ವನ್ನು ಬಿಡುವುದಿಲ್ಲ. ಈ ವಿಷಯದಲ್ಲಿ ಒಬ್ಬ ಸುಭಾಷಿತಕಾರರು ಹೀಗೆ ಹೇಳುತ್ತಾರೆ.

**ಸರ್ಪಃ ಕ್ರೂರಃ ಖಲಃ ಕ್ರೂರ: ಸರ್ಪಾತ್ ಕ್ರೂರತರಃ ಖಲ:**
**ಮಂತ್ರೇಣ ಶಾಮ್ಯತೆ ಸರ್ಪೋ, ನ ಖಲಃ ಶಾಮ್ಯತೇ ಕದಾ ||**

ಸುಭಾಷಿತ ರತ್ನಾವಲಿ.

ಅರ್ಥ—ಸರ್ಪವು ಕ್ರೂರವಾಗಿರುತ್ತದೆ. ದುರ್ಜನನೂ ಕ್ರೂರನಾ ಗಿರುತ್ತಾನೆ. ಆದರೆ ದುಷ್ಟನು ಸರ್ಪದಿಂದಲೂ ಅಧಿಕವಾಗಿ ಕ್ರೂರನಾಗಿರು ತ್ತಾನೆ. ಸರ್ಪವು ಮಂತ್ರದ ಪ್ರಭಾವದಿಂದ ಶಾಂತವಾಗುತ್ತದೆ. ಆದರೆ ದುಷ್ಟನು ಎಂದೂ ಶಾಂತನಾಗುವುದಿಲ್ಲ. ಆದುದರಿಂದ ಸಜ್ಜನರು ದುಷ್ಟರ ವಿಷಯದಲ್ಲಿ ಶಾಂತಭಾವವನ್ನಿಡುತ್ತಾರೆ.

ಆ ಸಮ್ಯಗ್‌ದೃಷ್ಟಿ ಸಜ್ಜನನು ಪುನಃ ಅವನಿಗೆ ಹೇಳಿದನು, 'ಭದ್ರ, ಈ ಪ್ರಕಾರ ಮನಸ್ಸಿನಲ್ಲಿ ವೈರ ವಿರೋಧವನ್ನು ಮಾಡಿ ಮುಂದಿನ ಭವಕ್ಕೂ ದುಷ್ಟ ಕರ್ಮಗಳನ್ನು ಕಟ್ಟಿಕೊಂಡು ದುಃಖಿ ಯಾಗಬೇಡ. ಈ ವೈರವು ಭವಭವಾಂತರಗಳಲ್ಲಿ ದುಃಖವನ್ನು ಕೊಡುವು ದಾಗಿದೆ. ಆದುದರಿಂದ ನನ್ನ ಮೇಲೆ ಕ್ಷಮೆಯನ್ನು ಮಾಡು. ಪರಮಾತ್ಮನ ವಿಚಾರ ಮಾಡು. ಕ್ರೋಧಭಾವವನ್ನು ಬಿಡು. ಈ ಕ್ರೋಧವೇ ಅನಂತ ಭವಗಳಲ್ಲಿ ಭ್ರಮಣೆಯನ್ನು ಮಾಡಿಸಲು ಕಾರಣವಾಗಿದೆ. ಆದುದರಿಂದ ನೀನು ನಿನ್ನ ಆತ್ಮಕಲ್ಯಾಣವನ್ನು ಮಾಡಿಕೊಳ್ಳು' ಎಂದು ಅವನಿಗೆ ಉಪದೇಶವನ್ನು ಮಾಡಿದನು. ಆದರೆ ಆ ದುಷ್ಟ ಜೀವನ ಮೇಲೆ ಆ ಉಪ ದೇಶದ ಏನೂ ಪರಿಣಾಮವಾಗಲಿಲ್ಲ. ಅಲ್ಲದೆ ಅವನ ಸಿಟ್ಟು ಇನ್ನೂ ಏರಿ

ಹೋಯ್ತು. ಆ ಕ್ರೋಧದಿಂದ ಅವನು ಇನ್ನೂ ಹೆಚ್ಚಿನ ಕರ್ಮ ಬಂಧ ವನ್ನು ಮಾಡಿಕೊಂಡನು. ಆ ಕರ್ಮಬಂಧದಿಂದ ಅನೇಕ ಭವಗಳ ವರೆಗೆ ದುಃಖವನ್ನು ಅನುಭವಿಸುವ ಭವ ರೋಗಿಯಾದನು. ಆ ಸಜ್ಜನನು ತನ್ನ ಸ್ವಭಾವವನ್ನು ಬಿಡದೆ ಕಡೆಯವರೆಗೆ ಪರೊಪಕಾರವನ್ನು ಮಾಡಿದ್ದರಿಂದ ಪುಣ್ಯಬಂಧವನ್ನು ಮಾಡಿಕೊಂಡನು. ತನ್ನ ಆತ್ಮಕಲ್ಯಾಣವನ್ನು ಮಾಡಿ ಕೊಂಡನು.

ಆದುದರಿಂದ ಭವ್ಯಾತ್ಮರೇ ಇದನ್ನು ತಿಳಿದು ಕ್ರೋಧ ಸ್ವಭಾವವನ್ನು ಬಿಡಿರಿ. ಮತ್ತು ತನ್ನ ನಿಜಾತ್ಮ ರಸದ ಅನುಭವವನ್ನು ಪಡೆಯಿರಿ. ಇದು ತ್ರಿಲೋಕ ಪೂಜ್ಯ ಪ್ರಭುವಿನ ವಚನವಿದೆ.

ಕ್ಷಮಾ ಧರ್ಮವು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಕೊಡುವುದಾಗಿದೆ. ಸಮ್ಯಗ್‌ದೃಷ್ಟಿ ಜೀವರು ಕ್ಷಮಾಧರ್ಮ ವನ್ನು ಉತ್ತಮ ರೀತಿಯಿಂದ ಪಾಲಿಸುತ್ತಾರೆ. ಸಾಧು ಸಂತರು, ಮುನಿ ಗಳು, ಇವರಿಗೆ ಕ್ಷಮಾಧರ್ಮವು ಅತ್ಯಂತ ಪ್ರಿಯವಾಗಿದೆ. ಅವರು ಪ್ರತಿ ಸಮಯ ಕ್ಷಮೆಯ ಮನನ, ಚಿಂತನ ಮತ್ತು ನಿದಿಧ್ಯಾಸನ ಮಾಡುತ್ತಾರೆ. ಕ್ಷಮೆಯು ತಾಯಿಯಂತೆ ಎಲ್ಲರನ್ನು ರಕ್ಷಣೆ ಮಾಡುತ್ತದೆ. ಜಿನಧರ್ಮದ ಮೂಲವು ಕ್ಷಮೆ ಯಾಗಿದೆ. ಯಾವ ಪರಿಸ್ಥಿತಿಯಲ್ಲಿಯೂ ಗುಣವಂತರು ಕ್ಷಮಾ ಧರ್ಮದಿಂದ ವಿಚಲಿತರಾಗುವುದಿಲ್ಲ. ಅವರು ರತ್ನತ್ರಯ ಧರ್ಮ ವನ್ನು ಧಾರಣೆ ಮಾಡಿರುತ್ತಾರೆ. ಅವರು ಯಾವಾಗಲೂ ಕರ್ಮ ನಿರ್ಜ ರೆಯು ಹೇಗಾಗುವುದೆಂಬ ವಿಚಾರದಲ್ಲಿರುತ್ತಾರೆ. ಅಂತಹ ಸಾಧುಗಳೇ ಜಗದ್ವಂದ್ಯರಾಗಿರುತ್ತಾರೆ. ಅಂತಹ ಸಾಧುಗಳು ನಮ್ಮನ್ನು ಸದಾ ರಕ್ಷಿಸಲಿ. ಇಂತಹ ಗುರುಗಳಿಗೆ ನಾನು ನನ್ನ ಆತ್ಮಕಲ್ಯಾಣಕ್ಕೋಸ್ಕರವಾಗಿ ನಮಸ್ಕ ರಿಸುತ್ತೇನೆ. ಮುನಿಗಳು ತನ್ನ ಆತ್ಮನೆಂಬ ಭೂಮಿಯನ್ನು ಹೀಗೆ ಸಿದ್ಧ ಮಾಡಿ ಅದರಲ್ಲಿ ಸಮ್ಯಕ್ತ್ವವೆಂಬ ಬೀಜವನ್ನು ಹಾಕುತ್ತಾರೆ. ಆಗ ಸಮ್ಯ ಕ್ತ್ವವೆಂಬ ವೃಕ್ಷವು ಬೆಳೆಯುತ್ತದೆ. ಆ ಸಮ್ಯಕ್ತ್ವ ವೃಕ್ಷವನ್ನು ನಾಶ

ಮಾಡಲು ಕರ್ಮವೆಂಬ ಅನೇಕ ಇತರ ಮರಗಳು ಬೆಳೆದರೂ ಅವುಗಳಿಗೆ ಹೆದರದೆ ಅತ್ಯಂತ ಕುಶಾಗ್ರ ಬುದ್ಧಿಯಿಂದ ಮತ್ತು ಧೈರ್ಯದಿಂದ ರತ್ನ ತ್ರಯ ಮತ್ತು ದಶಧರ್ಮವೆಂಬ ಶಸ್ತ್ರವನ್ನು ಕೈಯಲ್ಲಿ ತೆಗೆದುಕೊಂಡು ಕರ್ಮವೆಂಬ ಆ ವಿಘ್ನ ವೃಕ್ಷಗಳನ್ನು ಕಡಿದು ಹಾಕುತ್ತಾರೆ. ಹೀಗೆ ಆ ಸಮ್ಯಕ್ತ್ವವೆಂಬ ಆ ಮರದ ರಕ್ಷಣೆಯನ್ನು ಮಾಡುತ್ತಾರೆ. ನಂತರ ಆ ಸಮ್ಯಕ್ತ್ವ ವೃಕ್ಷವು ಬೆಳೆಯುತ್ತದೆ. ಆ ಮರಕ್ಕೆ ಚಾರಿತ್ರವೆಂಬ ಪಲ್ಲವಿಗಳು ಚಿಗುರಿ ನಂತರ ಕ್ಷಮೆಯೆಂಬ ಸುಂದರ ಪುಷ್ಪಗಳು ಬರುತ್ತವೆ. ನಂತರ ಆ ವೃಕ್ಷಕ್ಕೆ ಮೋಕ್ಷವೆಂಬ ಮಧುರ ಪುಷ್ಪ ಫಲವು ಬರುತ್ತವೆ. ಆ ಫಲ ವನ್ನು ಭೇದ ವಿಜ್ಞಾನೀ ಸಾಧುಗಳು ಅನಾದಿಕಾಲದಿಂದ ಭಕ್ಷಣೆ ಮಾತ್ತ ಬಂದಿದ್ದಾರೆ, ಮತ್ತು ಆ ಸಮ್ಯಗ್‌ದೃಷ್ಟಿ ಜೀವನು ಅನಂತಕಾಲದ ವರೆಗೆ ಅದರ ರಸಸ್ವಾದನೆಯನ್ನು ಮಾಡುವನು.

ಈ ಜೀವನಿಗೆ ಕ್ಷುಧೆಯೆಂಬ ರೋಗವು ಅನಾದಿಕಾಲದಿಂದ ಪೀಡಿ ಸುತ್ತಿದೆ. ಅದು ಬೆಂಕಿಯ ಹಾಗಿದೆ. ಆ ಕ್ಷುಧಾರೋಗರೂಪವಾದ ಬೆಂಕಿ ಯನ್ನು ನಾಶ ಮಾಡಬೇಕಾದರೆ ಈ ಮೋಕ್ಷವೆಂಬ ಫಲವೇ ಸಮರ್ಥವಾ ದುದು. ಆ ಫಲವನ್ನು ಅತ್ಯಂತ ಪ್ರೇಮದಿಂದ ಮುನಿಗಳು ತಮ್ಮ ಭವರೋಗದ ನಾಶವನ್ನು ಮಾಡಿಕೊಂಡರು.

ಆದುದರಿಂದ ಭವ್ಯಾತ್ಮರೇ ! ಈ ಉತ್ತಮ ಕ್ಷಮಾ ಧರ್ಮವು ಪರಂಪರೆಯಿಂದ ಈ ಜೀವನಿಗೆ ಮುಕ್ತಿಗೆ ಕಾರಣವಾಗಿದೆ. ಆದುದರಿಂದ ನೀವೂ ಆ ಮೋಕ್ಷವೆಂಬ ಫಲವನ್ನು ಭೋಗಿಸಿ ಈ ಸಂಸಾರದ ಜಾಲದಿಂದ ಬಿಡಿಸಿ ಕೊಳ್ಳಿರಿ, ಎಂದು ಆಚಾರ್ಯರ ಉಪದೇಶವಾಗಿದೆ, ಹೀಗೆ ಉತ್ತಮ ಕ್ಷಮೆಯ ಇದು ಸಂಕ್ಷೇಪ ವಿವೇಚನೆ.

ಉತ್ತಮ ಕ್ಷಮಾ ಧರ್ಮಾಯ ನಮಃ

# ಉತ್ತಮ ಮಾರ್ದವಾಯ ನಮಃ

ಮಂಗಲಾಚರಣೆ.

ರತ್ನತ್ರಯಾತ್ಮಾ ಸುಚಿರಾಯ ಧರ್ಮಃ
ಸಾರ್ಥೇನ ನಾಮ್ನಾ ಮಹಿತಃ ಸ ಜೀಯಾತ್
ಯೋಧಾರಯತ್ಯಚ್ಯುತ ಧಾಮ್ನಿ ಮಗ್ನಾ-
ನುಧೃತ್ಯ ಸತ್ತ್ವಾನ್ ಭವ ವಾರಿರಾಶೇಃ ||

ಮುನಿಸುವ್ರತ ಕಾವ್ಯ.

ಅರ್ಥ:—ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ಪ್ರಾಣಿಗಳನ್ನು ಉದ್ಧರಿಸಿ ಅವರನ್ನು ಮೋಕ್ಷದಲ್ಲಿ ಸ್ಥಾಪನೆ ಮಾಡುವ ಸಾರ್ಥಕ ಮತ್ತು ಪೂಜನೀಯ ರತ್ನತ್ರಯಾತ್ಮಕ ಧರ್ಮವು ಸದಾ ಜಯಶೀಲವಾಗಿರಲಿ. ||

ಜಾತ್ಯಾದಿ ಮದಾವೇಶಾದಭಿಮಾನಾಭಾವೋ ಮಾನ ನಿರ್ಹರಣಂ ಮಾರ್ದವಂ ||

ಮಾರ್ದವ ಧರ್ಮದ ಸ್ವರೂಪವು ಹೀಗಿದೆ.

ಯಾವ ಮಾನಕಷಾಯದಿಂದ ಆತ್ಮನಲ್ಲಿ ಕಠೋರತೆಯು ಬರುತ್ತದೆಯೋ ಆ ಕಠೋರತೆಯನ್ನು ನಾಶ ಮಾಡಿ ಕೋಮಲತೆಯನ್ನು ತರುವುದು ಅದು ಮಾರ್ದವ. ಅದು ಆತ್ಮನ ಗುಣವಾಗಿದೆ. ಮಾನ ಕಷಾಯದ ಉಪಶಮವಾದರೆ ಮಾರ್ದವ ಗುಣದ ಪ್ರಾಪ್ತಿಯಾಗುತ್ತದೆ. ಮಾನಕಷಾಯವು ಸಂಸಾರವನ್ನು ವೃದ್ಧಿಗೊಳಿಸುತ್ತದೆ. ಮತ್ತು ಮಾರ್ದವ ಗುಣವು ಸಂಸಾರ ಪರಿಭ್ರಮಣೆಯನ್ನು ದೂರ ಮಾಡುತ್ತದೆ. ಅಭಿಮಾನಿಯ ಹೃದಯದಲ್ಲಿ ದಯಾಧರ್ಮವು ಮೂಲತಃ ಇರುವುದೇ ಇಲ್ಲವೆಂದು ತಿಳಿಯಬೇಕು. ಕಠೋರ ಪರಿಣಾಮಿಗಳು ನಿರ್ದಯಿಗಳಾಗಿರುತ್ತಾರೆ. ಮಾರ್ದವದ ಗುಣವು ಎಲ್ಲರ ಹಿತವನ್ನು ಮಾಡುವ ಧರ್ಮವಾಗಿದೆ.

ಆದುದರಿಂದ ಭವ್ಯಾತ್ಮರೇ ! ನೀವು ವಿನಯಶೀಲರಾಗಿರಿ. ವಿನಯ ಶೀಲರಾಗಿ ಮತ್ತು ಗರ್ವರಹಿತರಾಗಿ ಎಲ್ಲಾ ಕಾರ್ಯಗಳನ್ನು ಮಾಡಿರಿ, ವಿನಯವಿಲ್ಲದಿದ್ದರೆ ಯಾವ ಕಾರ್ಯದಲ್ಲಿಯೂ ಜಯ ಸಿಗಲಾರದು.

" ವಿನಯ ಅನುಭವ ವಿಣಾ ನಿಷ್ಫಲ ಸಕಲಕ್ರಿಯಾ "

ವಿನಯ ಮತ್ತು ಅನುಭವವಿಲ್ಲದಿದ್ದರೆ ಎಲ್ಲಾ ಕ್ರಿಯೆಗಳು ವ್ಯರ್ಥ ಎಂದು ಹೇಳಲಾಗಿದೆ. ಆದುದರಿಂದ ನೀವು ಗರ್ವರಹಿತರಾಗಿ ಎಲ್ಲಾ ವಿದ್ಯೆ ಮತ್ತು ಜ್ಞಾನವನ್ನು ಸಂಪಾದಿಸಿರಿ. ಆ ವಿದ್ಯೆಗೆ ಮತ್ತು ಜ್ಞಾನಕ್ಕೆ ಶೋಭೆ ಬರುವುದು. ಗರ್ವ ಮತ್ತು ಹಠ ಮಾಡುವುದು ಮೂರ್ಖರ ಲಕ್ಷಣ. ಮೂರ್ಖರ ಲಕ್ಷಣವನ್ನು ಇಲ್ಲಿ ಹೇಳಿದ್ದಾರೆ.

ಮೂರ್ಖಸ್ಯ ಪಂಚ ಚಿನ್ಹಾನಿ ಗರ್ವೀ ದುರ್ವಚನೀ ತಥಾ ।
ಹಠೀ ಚಾಪ್ರಿಯವಾದೀ ಚ ಪರೋಕ್ತಂ ನೈವ ಮನ್ಯತೇ ॥

ಸುಭಾಷಿತಾವಲಿ.

ಮೂರ್ಖರು ತಮ್ಮ ಮಿಥ್ಯಾತ್ವ ಕರ್ಮದ ಉದಯದಿಂದ ಸ್ವಲ್ಪ ಏನಾದರೂ ಜ್ಞಾನವಿದ್ದರೂ ಗರ್ವಿಷ್ಟರಾಗಿ, ನಾವು ದೊಡ್ಡ ಜ್ಞಾನಿಗಳು, ನಮ್ಮ ಸಮಾನರಾದವರು ಯಾರೂ ಇಲ್ಲವೆಂದು, ತಮ್ಮ ಮಾತನ್ನೇ ಸತ್ಯ ವೆಂದು ಸಿದ್ಧ ಮಾಡಲು ಹಟ ಹಿಡಿಯುತ್ತಾರೆ. ಅದಕ್ಕೋಸ್ಕರ ಅಪ್ರಿಯ ವಚನದಿಂದ ಸಜ್ಜನರ ಮನಸ್ಸನ್ನು ನೋಯಿಸುತ್ತಾರೆ. ವಿದ್ವಾಂಸರು ಇವರಿಗೆ ತಿಳಿಸಿ ಹೇಳಿದರೂ ಅದನ್ನು ಒಪ್ಪುವುದಿಲ್ಲ. ಸಮ್ಯಕ್ತ್ವದ ಎಂಟು ಅಂಗಗ ಳಲ್ಲಿ ಮಾರ್ದವವು ಒಂದು ಧರ್ಮವಾಗಿದೆ. ಆ ಮಾರ್ದವ ಧರ್ಮವು ಮಹಾ ಪುರುಷರ ಹೃದಯದಲ್ಲಿಯೇ ವಾಸ ಮಾಡುತ್ತದೆ.

ಅನಾದಿಕಾಲದಿಂದ ಈ ಜೀವನು ಅನೇಕ ಭವಗಳಲ್ಲಿ ಭ್ರಮಣೆ ಮಾಡುತ್ತ ಅನೇಕ ಜನ್ಮಗಳನ್ನು ಧಾರಣೆ ಮಾಡುತ್ತಿದ್ದಾನೆ. ಕೆಲವು ಸಾರಿ ಅಜ್ಞಾನಿ ಮೂರ್ಖನಾಗಿಯೂ ಜನ್ಮವೆತ್ತಿದ್ದಾನೆ. ಕೆಲವು ಸಾರಿ ಉಚ್ಚ

ಕುಲ, ಕೆಲವು ಸಾರಿ ನೀಚ ಕುಲ, ಕೆಲವು ಜನ್ಮಗಳಲ್ಲಿ ದರಿದ್ರ, ಕೆಲವು ಜನ್ಮಗಳಲ್ಲಿ ಧನಿಕ, ಹೀಗೆ ಅನಂತ ಭವಗಳನ್ನು ಕಳೆದಿದ್ದಾನೆ. ಆದುದರಿಂದ ಜ್ಞಾನಿಗಳು ಹೀಗೆ ವಿಚಾರ ಮಾಡುತ್ತಾರೆ.

' ನಾನು ಯಾವ ವಿಷಯದಲ್ಲಿ ಗರ್ವ ಮಾಡಲಿ ? ಯಾವ ವಿಷಯದಲ್ಲಿ ದ್ವೇಷ ಮಾಡಲಿ ? ಸಮ್ಯಕ್ತ್ವವಿಲ್ಲದೆ ಮಿಥ್ಯಾತ್ವ ಕರ್ಮದ ಉದಯದಿಂದ ಈ ಅಜ್ಞಾನೀ ಜೀವನಲ್ಲಿ ಸಂಕಲ್ಪ ವಿಕಲ್ಪದ ತರಂಗಗಳು ಬರುತ್ತವೆ. ನಿಜವಾದ ಜ್ಞಾನಿಯು ಹೀಗೆ ವಿಚಾರ ಮಾಡುತ್ತಾನೆ. ' ಲೋಕದಲ್ಲಿ ನನ್ನಿಂದ ಹೆಚ್ಚಿನ ಜ್ಞಾನಿಗಳು, ಗುಣವಂತರು, ರೂಪವಂತರು ಸತತ ಆಗಿಕೊಂಡು ಬಂದಿದ್ದಾರೆ, ಈಗಲೂ ಇದ್ದಾರೆ, ಮುಂದೆಯೂ ಆಗುವರು. ಆದುದರಿಂದ ನಾನು ಗರ್ವ ಏಕೆ ಮಾಡಲಿ ? ಎಂದು ವಿಚಾರ ಮಾಡಿ ಮಿಥ್ಯಾ ಅಭಿಮಾನವನ್ನು ಮಾಡುವುದಿಲ್ಲ.

ನೋಡಿ, ಶಾಸ್ತ್ರದಲ್ಲಿ ಹೀಗೆ ಘಟನೆ ಇದೆ.

ಭರತೇಶ್ವರ ಚಕ್ರವರ್ತಿಯು ಆರು ಖಂಡಗಳನ್ನು ಜಯಿಸಿ ವೃಷಭಾಚಲವೆಂಬ ಪರ್ವತದ ಮೇಲೆ ತನ್ನ ಹೆಸರು ಬರೆಯಲಿಕ್ಕೆ ಬಂದನು. ಆಗ ಅಲ್ಲಿ ಅವನ ಹೆಸರು ಬರೆಯಲಿಕ್ಕೆ ಸ್ಥಾನ ಖಾಲಿ ಇರಲಿಲ್ಲ. ಅನಂತಾನಂತ ಚಕ್ರವರ್ತಿಗಳು ಅನಂತಕಾಲದಿಂದ ಈ ಪೃಥ್ವಿಯನ್ನು ಜಯಿಸುತ್ತಲೇ ಬಂದಿದ್ದಾರೆ, ಅವರ ಹೆಸರಿನಿಂದ ಪರ್ವತವು ತುಂಬಿತ್ತು. ಅದನ್ನು ಭರತೇಶ್ವರನು ನೋಡಿದನು. ಆ ಸಮಯದಲ್ಲಿ ನಾನೇ ಆರು ಖಂಡಗಳನ್ನು ಜಯಿಸುವ ಮೊದಲನೇ ಚಕ್ರವರ್ತಿ ಎಂಬ ಗರ್ವವು ಭರತ ಚಕ್ರವರ್ತಿಯ ಹೃದಯದಿಂದ ನಾಶವಾಯಿತು ಒಂದು ಹೆಸರನ್ನು ಅಳಿಸಿ ತನ್ನ ಹೆಸರನ್ನು ಬರೆಯಿಸಿದನು. ಹೀಗೆ ದೊಡ್ಡ ಮಹಾ ಪುರುಷರು ಅನಂತಕಾಲದಿಂದ ಆಗುತ್ತ ಬಂದಿದ್ದಾರೆ. ಒಬ್ಬರಿಂದೊಬ್ಬರು ಹೆಚ್ಚಿನ ಜ್ಞಾನಿಗಳಾಗಿ ಹೋಗಿದ್ದಾರೆ. ಇದನ್ನು ತಿಳಿದು ಆ ಅಭಿಮಾನವು ದೂರವಾಯಿತು.

ಈ ಕಲಿಕಾಲವಾದ ಪಂಚಮ ಕಾಲದಲ್ಲಿ ಲೋಕದಲ್ಲಿಲ್ಲದ ಯಾವ ಗುಣವು ನಮ್ಮಲ್ಲಿದೆ ? ಯಾವುದಕ್ಕೋಸ್ಕರ ಗರ್ವವನ್ನು ಮಾಡಬೇಕು. ಆದುದರಿಂದ ಗರ್ವವನ್ನು ಬಿಟ್ಟು ಎಲ್ಲ ಕಾರ್ಯವನ್ನು ಮಾಡಿರಿ. ಗರ್ವಿಷ್ಠರ ವ್ರತ, ತಪ, ಮತ್ತು ಸಮ್ಯಕ್ತ್ವಾದಿ ಅನೇಕ ಗುಣಗಳು ನಾಶವಾಗುತ್ತವೆ. ಆದುದರಿಂದ ಎಂಟು ಪ್ರಕಾರದ ಗರ್ವಗಳನ್ನು ಬಿಡಿರಿ.

## ಗರ್ವದ ಎಂಟು ಪ್ರಕಾರ.

**ಕುಲ ಶಕ್ತಿ ಜಾತಿ ಪೂಜಾ ತಪವಪು ಐಶ್ವರ್ಯ ತ್ಯಾ ಪರಿಜ್ಞಾನ**
**ಯೊಂಚಾ ವಿಷಯಿ ಧರಣೆ ಮನುಜಾನೀ ನಿಜ ಮನಾಂತ ಅಭಿಮಾನ**

ರತ್ನಕರಂಡ.

ಕುಲ, ಶಕ್ತಿ, ಪೂಜೆ, ಜಾತಿ, ತಪ, ಶರೀರ, ಐಶ್ವರ್ಯ ಮತ್ತು ಜ್ಞಾನ ಇವುಗಳ ವಿಷಯದಲ್ಲಿ ಅಭಿಮಾನ-ಮದವನ್ನು ಮಾಡುವುದು ಎಂಟು ಪ್ರಕಾರದ ಗರ್ವಗಳು.

ವಿಚಾರ ಮಾಡಿ ನೋಡಿದರೆ ನಮಗೆ ಅಂದರೆ ಆತ್ಮನಿಗೆ ಕುಲವಿಲ್ಲ. ಕುಲ ಜಾತಿ ಮೊದಲಾದವುಗಳು ಕರ್ಮದ ಉದಯದಿಂದಾಗುವ ಶರೀರದ ಪುದ್ಗಲ ವಿಕಾರಗಳು, ನನ್ನ ಆತ್ಮನು ಅಮೂರ್ತಿಕನಾಗಿದ್ದಾನೆ. ಇದನ್ನು ವಿಚಾರ ಮಾಡದೆ ಗರ್ವ ಮಾಡುದರಿಂದ ದೊಡ್ಡ ಮನುಷ್ಯರು ಈ ಸಂಸಾರದಲ್ಲಿ ದೀರ್ಘ ಕಾಲದ ವರೆಗೆ ಭ್ರಮಣೆ ಮಾಡಿದ್ದಾರೆ.

ಒಂದು ದಿವಸ ಭರತ ಚಕ್ರವರ್ತಿಯು ಆದಿ ಭಗವಂತನಿಗೆ ಕೇಳಿದನು. ' ಭಗವನ್, ನಮ್ಮ ಕುಲದಲ್ಲಿ ಇನ್ನು ಯಾರು ತೀರ್ಥಂಕರರಾಗುತ್ತಾರೆ ? ಭಗವಂತರು ಹೇಳಿದನು. ಎಲೇ ಭವ್ಯನೇ ! ನಿನ್ನ ಮಗನಾದ ಮಾರೀಚನು ಅಂತಿಮ ತೀರ್ಥಂಕರನಾಗುತ್ತಾನೆ, ಇದನ್ನು ಕೇಳಿ ಮಾರೀಚನಿಗೆ ತನ್ನ ಕುಲದ ಗರ್ವ [illegible] ಅವನು ಹೇಳಿದನು. ನಮ್ಮಂಥಹ ಉಚ್ಚ

ಕುಲದವರು ಯಾರೂ ಇಲ್ಲ. ನಮ್ಮ ಕುಲವು ಅತ್ಯುನ್ನತವಾಗಿದೆ. ನಮ್ಮ ಅಜ್ಜ ಪ್ರಥಮ ತೀರ್ಥಂಕರ, ನಮ್ಮ ತಂದೆ ಪ್ರಥಮ ಚಕ್ರವರ್ತಿ, ನನ್ನ ಚಿಕ್ಕಪ್ಪ ಕಾಮದೇವ, ಮತ್ತು ನಾನು ಅಂತಿಮ ತೀರ್ಥಂಕರ. ಈ ಕುಲದ ಅಭಿಮಾನದಿಂದ ಉತ್ತಮ ಕುಲದಲ್ಲಿ ಹುಟ್ಟಿದಾಗ್ಯೂ ಎಂಬತ್ತನಾಲ್ಕು ಲಕ್ಷ ಯೋನಿಯಲ್ಲಿ ಭ್ರಮಣೆ ಮಾಡಬೇಕಾಯ್ತು. ದೊಡ್ಡವರಿಗೂ ಗರ್ವದಿಂದ ಕರ್ಮದ ಉದಯವು ಬಿಡಲಿಲ್ಲ. ಹೀಗಿರುವಾಗ ಸಾಮಾನ್ಯ ಪುಣ್ಯಹೀನರ ಮಾತೇನು ? ಇದರ ವಿಚಾರ ಮಾಡಿರಿ. ಈ ಪ್ರಕಾರ ವಿಚಾರ ಮಾಡಿ ಸುಜ್ಞಾನಿಗಳಾಗಿರಿ. ಸಮ್ಯಗ್ ಜ್ಞಾನವಿಲ್ಲದೆ ಶಾಸ್ತ್ರಗಳನ್ನು ಓದಿ ಎಷ್ಟು ದೊಡ್ಡ ಪಂಡಿತನಾದರೂ ಜ್ಞಾನದಿಂದ ಆತ್ಮಸಿದ್ಧಿಯಾಗಲಿಲ್ಲ. ನಿಜವಾದ ಜ್ಞಾನಿಗಳು ಹೇಗಿರುತ್ತಾರೆಂಬುದನ್ನು ಈ ಕೆಳಗಿನ ಶ್ಲೋಕದಲ್ಲಿ ರತ್ನಾಕರನು ಹೇಳಿದ್ದಾನೆ.

**ಶಾಸ್ತ್ರಂ ಬಂದೊಡೆ ಶಾಂತಿ ಸೈರಣೆ ನಿಗರ್ವಂ ನೀತಿಮೇಲ್ವಾತುಮು-**
**ಕ್ತಿ ಸ್ತ್ರೀಚಿಂತೆ ನಿಜಾತ್ಮಚಿಂತೆ ನಿಲವೇಳ್ಕಂತಲ್ಲದಾ ಶಾಸ್ತ್ರದಿಂ**
**ದುಸ್ತ್ರೀಚಿಂತನೆ ದುರ್ಮುಖಂ ಕಲಹಮುದ್ಗರ್ವಂ ಮನಂಗೊಂ**
**ಡೊಡಾ, ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿ ಕನಲಾ ರತ್ನಾಕರಾಧೀಶ್ವರಾ**

**ಶತಕತ್ರಯ ೭೪**

ಶಾಸ್ತ್ರವನ್ನು ಅಭ್ಯಾಸ ಮಾಡಿದ ಜ್ಞಾನಿಗಳಿಗೆ ಆ ಜ್ಞಾನದೊಡನೆ ಸಹನಶೀಲತೆ, ನಿಗರ್ವತೆ, ಸದಾಚರಣ, ನೀತಿ, ಆತ್ಮಕಲ್ಯಾಣ ಪ್ರಿಯತೆ, ನಮ್ರ ಭಾಷಣ, ಕೋಮಲ ಪರಿಣಾಮ, ಮಂದ ಕಷಾಯ, ಮುಕ್ತಿಶ್ರೀಯ ಚಿಂತೆ ಮೊದಲಾದ ಗುಣಗಳನ್ನು ಧಾರಣೆ ಮಾಡುವುದು ಅಗತ್ಯವಿದೆ. ಇಷ್ಟೆಲ್ಲಾ ಗುಣಗಳಿದ್ದರೂ ವಿನಯಗುಣವಿರುವುದು ಅಗತ್ಯ. 'ವಿದ್ಯಾ ದದಾತಿ ವಿನಯಂ' ವಿದ್ಯೆಯು ಜನರಿಗೆ ವಿನಯವನ್ನು ಕೊಡುತ್ತದೆ. ವಿನಯವಿಲ್ಲದಿದ್ದರೆ ಜ್ಞಾನಿಗೆ ಶೋಭೆಯಿಲ್ಲ. ಈ ವಿನಯ ಗುಣವಿಲ್ಲದಿದ್ದರೆ

ಅವನು ಪಂಡಿತನಿರಲಿ ಅಥವಾ ಶಾಸ್ತ್ರಿ ಇರಲಿ ಅವನಿಗೆ ಶೋಭೆ ಇಲ್ಲ. ಅಜ್ಞಾನಿಗಳಿಗೆ ಆತ್ಮೋಪದೇಶವು ರುಚಿಸುವುದಿಲ್ಲ. ಅವರಿಗೆ ಇಂದ್ರಿಯ ಪೋಷಕ ಉಪದೇಶವು ರುಚಿಸುತ್ತವೆ. ಆದುದರಿಂದ ವಿನಯವನ್ನು ಧಾರಣೆ ಮಾಡಿ ಗರ್ವವನ್ನು ಬಿಡಿರಿ ಈ ಸಂಸಾರವು ನಾಲ್ಕು ದಿನ್ಸಗಳ ಆಟವಾಗಿದೆ ಸಂಸಾರದ ವಿಷಯದಲ್ಲಿ ವೈರಾಗ್ಯ ಭಾವವನ್ನಿಡಿರಿ. ಸಮಸ್ತ ಧನ, ಯೌವನ ಇಂದ್ರಿಯ ಸುಖ, ಇವೆಲ್ಲವೂ ಕ್ಷಣಿಕವಾಗಿವೆ. ಸಂಸಾರ ಪರಿಭ್ರಮಣೆಗೆ ಕಾರಣವಾಗಿವೆ. ಚಕ್ರವರ್ತಿ ಭರತನಿಗೆ ಆರು ಖಂಡ ರಾಜ್ಯದ ಭೋಗಗಳನ್ನು ಭೋಗಿಸುತ್ತಿದ್ದರೂ ನಾನು ಆರು ಖಂಡದ ರಾಜನಾಗಿದ್ದೇನೆಂಬ ಅಭಿಮಾನವಿರಲಿಲ್ಲ. ಇಷ್ಟೇ ಅಲ್ಲ ಈ ರಾಜ್ಯ ವೈಭವವು ಪಾಪಬಂಧಕ್ಕೆ ಕಾರಣವಾಗಿದೆ. ಇದನ್ನು ನನಗೆ ಪುಣ್ಯಾನುಬಂಧೀ ಪುಣ್ಯದ ಉದಯದಿಂದ ಭೋಗಿಸಬೇಕಾಗಿದೆ. ಇದನ್ನು ಬಿಡದೆ ನನಗೆ ಆತ್ಮಜ್ಞಾನವಾಗಲಾರದು. ಈ ಪ್ರಕಾರವಾದ ಉದಾತ್ತ ರೀತಿಯ ವಿರಕ್ತ ಪರಿಣಾಮದಿಂದ ತನ್ನ ಶರೀರದಲ್ಲಿರುವ ಕೇವಲಜ್ಞಾನಿ, ಜ್ಯೋತಿರೂಪನಾದ ಪರಮಾತ್ಮನನ್ನು ಅವನು ಸದಾ ಚಿಂತಿಸುತ್ತಿದ್ದನು.

**ಜ್ಯೋತಿರೂಪನು ಜ್ಞಾನರೂಪನು ವೀತರಾಗನು ನಿರಾಮಯನು**
**ಮಾತಿಗೆ ಮನಕೆ ಗೋಚರ ಬಲ್ಲದನು ತನ ಸೋಕದೊಳಗಿದ್ದ**
**ನಿರ್ಮಲನು ||** ಭರತೇಶವೈಭವ

ಅವನು ಈ ಪ್ರಕಾರ ಏಳುವಾಗ ಮಲಗುವಾಗ, ಪ್ರತಿ ಸಮಯದಲ್ಲಿ ತನ್ನ ಆತ್ಮ ಸ್ವರೂಪದ ವಿಚಾರ ಮಾಡುತ್ತಿದ್ದರು. ತನ್ನ ಸ್ವಭಾವವು ಜ್ಯೋತಿಸ್ವರೂಪವಾಗಿದೆ. ಜ್ಞಾನಸ್ವರೂಪವಾಗಿದೆ ನನ್ನ ಆತ್ಮನು ವೀತರಾಗ ಸ್ವರೂಪನಾಗಿದ್ದಾನೆ. ಲೋಕದಲ್ಲಿ ದುರ್ಲಭವಾದ ನಿರಾಕುಲತೆಯೇ ನನ್ನ ಆತ್ಮನ ಜ್ಞಾನರೂಪವಾದ ಭಂಡಾರವಾಗಿದೆ. ನಾನು ಅದರ ಯಜಮಾನನಾಗಿದ್ದೇನೆ.

ನಿಜವಾದ ನಿರಾಕುಲತೆ ಅನಂದಮಯವಾದ ಸುಖವನ್ನು ಚಕ್ರವರ್ತಿಯು ಪ್ರತಿನಿತ್ಯ ಮನೆಯಲ್ಲಿಯೇ ಭೋಗಿಸುತ್ತಿದ್ದನು. ಸಂಸಾರದ ವಿಷಯದಲ್ಲಿ ಅವನ ಮನಸ್ಸಿನಲ್ಲಿ ಸದಾ ವಿರಕ್ತಿ ಇತ್ತು. ನೋಡಿ, ಮನುಷ್ಯ ಜನ್ಮದಲ್ಲಿ ಚಕ್ರವರ್ತಿಯಿಂದ ಹೆಚ್ಚಾದ ವೈಭವವು ಬೇರೆ ಎಲ್ಲಿಯೂ ಇಲ್ಲ. ಹೀಗಿದ್ದರೂ ಆ ಭೋಗಗಳ ವಿಷಯದಲ್ಲಿ ಸ್ವಲ್ಪವೂ ದೊಡ್ಡಸ್ತಿಕೆಯ ಭಾವವನ್ನಿಡದೆ ಸ್ವಲ್ಪವೂ ಗರ್ವವನ್ನು ಮಾಡದೆ ಒಬ್ಬ ಸಾಧುವಿನಂತೆ ಇರುತ್ತಿದ್ದನು. ಇಂಥಹ ಮಹಾಪುರುಷರ ಹೃದಯದಲ್ಲಿಯೇ ಈ ಉತ್ತಮ ಮಾರ್ದವ ಧರ್ಮವು ಇರುತ್ತದೆ ಆದುದರಿಂದ ಭವ್ಯರೇ ! ನೀವೂ ಗರ್ವವನ್ನು ಬಿಡಿರಿ. ಯಾವ ಕಾರ್ಯದಲ್ಲಿಯೂ ಗರ್ವವನ್ನು ಮಾಡಿದರೆ ಅದರಿಂದ ಹಿತವಾಗದೆ ಅಹಿತವೇ ಆಗುವುದು. ಜನರು ನಿಮ್ಮ ಅಹಿತವನ್ನು ಮಾಡುವ ವಿಚಾರದಲ್ಲಿಯೇ ಇರುತ್ತಾರೆ. ಮತ್ತು ಕಾರಣವಿಲ್ಲದೆ ವೈರಿಗಳಾಗುತ್ತಾರೆ. ಆದುದರಿಂದ ನೀವು ಬಹಿರಾತ್ಮ ಬುದ್ಧಿಯನ್ನು ಬಿಡಿರಿ. ಮಿಥ್ಯಾತ್ವ ಭಾವವನ್ನು ಬಿಡಿರಿ. ಮಿಥ್ಯಾತ್ವ ಭಾವದಿಂದಲೇ ಈ ಅಹಂಕಾರವು ಹುಟ್ಟುತ್ತದೆ.

**ಮಿಥ್ಯಾದರ್ಶನ–ವಶ ಫಸೇ, ಅಹಂಕಾರ ಮಮಕಾರ ।**
**ಜಿನವರ ಬಹಿರಾತಮ ಕಹೇ ಸೋ ಭ್ರಮ ಹೈ ಸಂಸಾರ ॥**

ಸ್ವಾನುಭವದರ್ಪಣ

ಮಿಥ್ಯಾತ್ವ ಪರಿಣಾಮದಿಂದ ಗರ್ವವಶನಾಗಿ ಈ ಜೀವನು ಎಂಟು ವಿಧದ ಅಹಂಕಾರಗಳನ್ನು ಮಾಡುತ್ತಾನೆ. ಮಮತ್ವದ ವೃದ್ಧಿಯನ್ನು ಮಾಡುತ್ತಾನೆ. ಆ ಮಿಥ್ಯಾತ್ವವನ್ನು ನಾಶ ಮಾಡಿರಿ. ಗರ್ವವು ಬಹಳ ಕೆಟ್ಟ ವಸ್ತುವಾಗಿದೆ. ಲೋಕದಲ್ಲಿ ಅದು ಅಪಕೀರ್ತಿಯನ್ನು ಹಬ್ಬುತ್ತದೆ. ಬಿಂದು ಮಾತ್ರ ಕುಲದ ಗರ್ವದಿಂದ ಮಾರೀಚನಿಗೆ ಎಷ್ಟು ದುಃಖದ ಅನುಭವ ಮಾಡಬೇಕಾಯ್ತು, ಇದನ್ನು ನೀವು ಮೇಲೆ ಓದಿದ್ದೀರಿ.

ನಾನು ಬಹಳ ದೊಡ್ಡವನಾಗಿದ್ದೇನೆಂಬ ದುರಭಿಮಾನದಿಂದ ಏನಾಯ್ತೆಂಬ ವಿಷಯವನ್ನು ಹಿಂದೂ ಪುರಾಣದ ಒಂದು ನಿದರ್ಶನದಿಂದ ನೀವು ತಿಳಿಯಿರಿ.

ರಾವಣನು ಸೀತೆಯ ಸ್ವಯಂವರ ಮಂಟಪದಲ್ಲಿ ಬಂದನು. ನನ್ನಷ್ಟು ಬಲವಂತರು ಯಾರೂ ಇಲ್ಲ. ಆದುದರಿಂದ ಈ ಧನುಷನ್ನು ಯಾರೂ ಎತ್ತಲು ಸಾಧ್ಯವಿಲ್ಲ. ನಾನು ಕ್ಷಣಮಾತ್ರದಲ್ಲಿ ಎತ್ತಿ ಬಿಡುತ್ತೇನೆಂದು ಹೇಳಿ ಅಲ್ಲಿದ್ದ ರಾಜರನ್ನೆಲ್ಲಾ ಅವನು ತಿರಸ್ಕರಿಸಿದನು ಮತ್ತು ಅಭಿಮಾನದಿಂದ ಆ ಧನುಷನ್ನು ಎತ್ತಲು ಪ್ರಯತ್ನಿಸಿದನು. ಎತ್ತಿದ ಕೂಡಲೇ ಅದು ಬಂದು ಅವನ ಎದೆಯ ಮೇಲೆ ಕೂತಿತು. ಅವನು ಅಲ್ಲಿಯೇ ಬಿದ್ದು ನರಳ ಹತ್ತಿದನು ಎಲ್ಲರ ಎದುರಿನಲ್ಲಿ ಅವನ ಅಪಮಾನವಾಯ್ತು. ಇದೇ ದ್ವೇಷದಿಂದ ಮುಂದೆ ಅನನು ಸೀತೆಯನ್ನು ಅಪಹರಿಸಿದನು. ಮತ್ತು ಪರಸ್ತ್ರೀಯನ್ನು ಭೋಗಿಸುವ ಸಂಕಲ್ಪದಿಂದ ನರಕಕ್ಕೆ ಹೋದನು.

ಆದುದರಿಂದ ಭವ್ಯಾತ್ಮರೇ ! ಧಾರ್ಮಿಕ ಸಜ್ಜನರನ್ನು ತಿರಸ್ಕರಿಸಬೇಡಿರಿ, ಧಾರ್ಮಿಕರ ಹೃದಯದಲ್ಲಿಯೇ ಧರ್ಮದ ಆವಾಸವಿರುತ್ತದೆ. ಧಾರ್ಮಿಕರ ಅವಿನಯವನ್ನು ಮಾಡಿದರೆ ಧರ್ಮದ ಅವಿನಯವಾಗುತ್ತದೆ. ಈ ವಿಷಯದಲ್ಲಿ ಗ್ರಂಥಕಾರರು ಹೀಗೆ ಹೇಳಿದ್ದಾರೆ.

ಜೋ ಪ್ರಾಣೀ ಗರ್ವಾನೇ
ಧಾರ್ಮಿಕ ಪುರುಷಾಸ ಲೇಖಿತೋ ಹೀನ,
ತೋ ಧರ್ಮಾಚಿ ಹೇಟಾಳೀ
ಕಾಂ ಕೀಂ ನ ಚ ಧರ್ಮ ಧಾರ್ಮಿಕಾ ವೀಣ ॥

ರತ್ನಕರಂಡ.

ಯಾವ ಮನುಷ್ಯನು ಗರ್ವದ ವಶದಿಂದ ಧಾರ್ಮಿಕರನ್ನು ತಿರಸ್ಕರಿಸುತ್ತಾನೆಯೋ, ಅವನು ಧರ್ಮವನ್ನೇ ತಿರಸ್ಕರಿಸುತ್ತಾನೆ. ಯಾಕಂದರೆ

ಧಾರ್ಮಿಕರನ್ನು ಬಿಟ್ಟು ಧರ್ಮವಿರಲಾರದು ಧಾರ್ಮಿಕರಲ್ಲಿಯೇ ಧರ್ಮ ವಿರುವುದು. ಆದುದರಿಂದ ಧಾರ್ಮಿಕ ಜನರ ಅನಾದರವನ್ನು ಮಾಡಿದರೆ ಧರ್ಮದ ಅನಾದರವಾಗುವುದರಲ್ಲಿ ಸಂದೇಹವಿಲ್ಲ.

ಆದುದರಿಂದ ಭವ್ಯಾತ್ಮರೇ ! ನೀವು ಯಾರ ಅನಾದರವನ್ನೂ ಮಾಡ ಬೇಡಿರಿ, ರಾವಣನು ಎಲ್ಲರ ಅನಾದರವನ್ನು ಮಾಡಿದನು ಆದರೆ ರಾಮ ಚಂದ್ರನು ಣಮೋಂಕಾರ ಮಂತ್ರದ ಉಚ್ಚಾರಣೆ ಮಾಡಿ ಆ ಧನುಷನ್ನು ಅನಾಯಾಸವಾಗಿ ಎತ್ತಿದನು. ಆ ಸಮಯದಲ್ಲಿ ಎಲ್ಲರಿಗೂ ಆನಂದ ವಾಯ್ತು. ಆಕಾಶದಿಂದ ರಾಮಚಂದ್ರನ ಮೇಲೆ ಪುಷ್ಪವೃಷ್ಟಿಯಾಯಿತು. ಆ ಧರ್ಮಾತ್ಮನ ಧನ್ಯವಾದದೊಡನೆ ಕೀರ್ತಿಯಾಯಿತು. ಆದುದ ದರಿಂದ ಜ್ಞಾನಿಗಳು ಅಭಿಮಾನವನ್ನು ಬಿಟ್ಟು ಇಹ ಪರಲೋಕದಲ್ಲಿ ಕೀರ್ತಿಶಾಲಿಗಳಾತ್ತಾರೆ. ಅವರ ವಿದ್ಯೆಯು ಸಮಸ್ತ ಜಗತ್ತಿಗೆ ವಂದನೀಯ ವಾಗಿರುತ್ತದೆ. ಆದುದರಿಂದ ಜ್ಞಾನಿಗಳು ಆತ್ಮಹಿತದ ವಿದ್ಯೆಯನ್ನೇ ಕಲಿ ಯುತ್ತಾರೆ. ಆ ವಿದ್ಯೆಯ ಸಹಾಯದಿಂದ ಸ್ವೋಪಕಾರ ಮತ್ತು ಪರೋಪ ಕಾರವನ್ನು ಮಾಡುತ್ತಾರೆ.

**ಅಧನಾ ಧನಮಿಚ್ಛಂತಿ ವಾದಮಿಚ್ಛಂತಿ ಗರ್ವಿತಾಃ ।**
**ಮಾನವಾಃ ಸ್ವರ್ಗಮಿಚ್ಛಂತಿ ಮೋಕ್ಷಮಿಚ್ಛಂತಿ ಸಜ್ಜನಾಃ ॥**

ಸುಭಾಷಿತಾವಲಿ.

ಧನವಿಲ್ಲದವರು ಧನಕ್ಕೋಸ್ಕರವಾಗಿ ನಾನಾ ವಿಧದಿಂದ ಪ್ರಯತ್ನ ಮಾಡುತ್ತಾರೆ. ಗರ್ವಿಷ್ಟರು ವಿನಾಕಾರಣ ಮತ್ತೊಬ್ಬರೊಡನೆ ವಿತಂಡ ವಾದವನ್ನು ಮಾಡಲು ಬಯಸುತ್ತಾರೆ. ಸಾಮಾನ್ಯ ಮನುಷ್ಯರು ಸ್ವರ್ಗ ಸುಖದ ಇಚ್ಛೆಯನ್ನು ಮಾಡುತ್ತಾರೆ. ಆದರೆ ಆತ್ಮಹಿತೈಷಿಗಳಾದ ಸಜ್ಜ ನರು ಮೋಕ್ಷವನ್ನು ಅಪೇಕ್ಷಿಸುತ್ತಾರೆ. ಆದುದರಿಂದ ಜ್ಞಾನಿಗಳು ಆತ್ಮ ಗುಣವನ್ನು ನಾಶ ಮಾಡುವ ಬೆಂಕಿಯಂತೆ ಆತ್ಮಗುಣಗಳನ್ನು ಸುಡುವ ಈ ಗರ್ವವನ್ನು ಬಿಡಬೇಕು. ಅದನ್ನು ಬಿಡದೆ ಆತ್ಮಹಿತವಾಗಲಾರದು.

ಆ ಗರ್ವದಿಂದ ಅವರು ಈ ಜನ್ಮದಲ್ಲಿ ಎಲ್ಲರಿಗೂ ಅಪ್ರಿಯರಾಗುತ್ತಾರೆ. ಪರಲೋಕದಲ್ಲಿಯೂ ಅಧಮ ಗತಿಗೆ ಹೋಗುತ್ತಾರೆ.

ಅಭಿಮಾನಿಗಳನ್ನು ಲೋಕದಲ್ಲಿ ಎಲ್ಲರೂ ನಿಂದಿಸುತ್ತಾರೆ. ಅಭಿಮಾನೀ ಶಿಷ್ಯರನ್ನು ನೋಡಿ ಗುರು ಜನರೂ ವಿದ್ಯೆಯನ್ನು ಕಲಿಸಲು ನಿರುತ್ಸಾಹಿಗಳಾಗುತ್ತಾರೆ. ಬಂಧುಗಳು, ಹಿತೈಷಿಗಳು, ನೆರೆಮನೆಯವರು, ಎಲ್ಲರೂ ಅವರ ಪತನವನ್ನೇ ಬಯಸುತ್ತಾರೆ. ತಾಯಿತಂದೆಗಳು, ಗುರುಗಳು, ಉಪಾಧ್ಯಾಯರು, ಎಲ್ಲರೂ ತನ್ನ ಶಿಷ್ಯರನ್ನು ವಿನಯವಂತರನ್ನಾಗಿ ನೋಡಿ ಸಮಾಧಾನ ಪಡುತ್ತಾರೆ. ವಿನಯವಿಲ್ಲದ ಪೂಜೆ, ಅರ್ಚನೆ, ವ್ರತ, ಎಲ್ಲವೂ ವ್ಯರ್ಥ ಗರ್ವ ಬಿಟ್ಟು ವಿನಯಪೂರ್ವಕ, ಭಕ್ತಿಪೂರ್ವಕ ಅವುಗಳನ್ನು ಮಾಡಿದರೆ ಅದರ ಯಥಾರ್ಥ ಫಲ ಸಿಗುತ್ತದೆ. ಲೋಕದಲ್ಲಿ ದೊಡ್ಡಸ್ತಿಕೆಯನ್ನು ತೋರಿಸಲು ಮತ್ತು ಕೀರ್ತಿಯಾಗಬೇಕೆಂಬ ಅಭಿಲಾಷೆಯಿಂದ ದಾನ ಪೂಜಾದಿಗಳನ್ನು ಮಾಡಿದರೆ ಅದರ ಫಲವು ದೊರೆಯಲಾರದು.

ಒಬ್ಬ ರಾಜನು ಭಗವಾನ್ ಬಾಹುಬಲಿಯ ವಿಶಾಲಕಾಯ ಮೂರ್ತಿಗೆ ಸಾವಿರಾರು ಗಡಿಗೆಗಳಿಂದ ಅಭಿಷೇಕವನ್ನು ಮಾಡಿದನು. ಅಭಿಷೇಕವನ್ನು ಮಾಡುವಾಗ ಅವನ ಮನಸ್ಸಿನಲ್ಲಿ ನನ್ನಷ್ಟು ದೊಡ್ಡ ಪೂಜೆ ಮಾಡುವವರು ಲೋಕದಲ್ಲಿ ಯಾರೂ ಇಲ್ಲವೆಂಬ ಅಭಿಮಾನವು ಬಂದಿತ್ತು. ಆದುದರಿಂದ ಅಭಿಷೇಕದ ನೀರ ಕ್ಷೀರಗಳು ಕೆಳಗಿನವರೆಗೆ ಇಳಿಯಲಿಲ್ಲ ಮಧ್ಯದಲ್ಲಿಯೇ ಉಳಿಯಿತು. ರಾಜನ ಈ ಗರ್ವವನ್ನು ನಾಶ ಮಾಡಲು ಶಾಸನ ದೇವಿಯು ಒಬ್ಬ ವೃದ್ಧಮಾತೆಯ ವೇಷವನ್ನು ಧರಿಸಿ ಒಂದು ಸಣ್ಣ ಮಿಳ್ಳಿಯಲ್ಲಿ ಹಾಲು ತೆಗೆದುಕೊಂಡು ಬಂದಳು. ನನ್ನ ಇಷ್ಟು ಅಭಿಷೇಕವನ್ನು ಮಾಡಿರಿ ಎಂದು ಹೇಳಿದಳು. ಆಗ ಎಲ್ಲರೂ ಹೇಳಿದರು. ನಾವು ಲಕ್ಷಾವಧಿ ಕುಂಭಗಳಿಂದ ಅಭಿಷೇಕ ಮಾಡಿದರೂ ಕೆಳಗೆ ಇಳಿಯುವುದಿಲ್ಲ ನಿನ್ನ ಈ ಮಿಳ್ಳಿಯಿಂದ ಏನಾಗುವುದಿದೆ ? ಆಗ ಆ ಮುದುಕಿಯು ಪುನಃ ಹೇಳತೊಡಗಿದಳು. ಬಂಧುಗಳೇ ! ಇದರಲ್ಲೇನಿದೆ. ನನ್ನ ಭಕ್ತಿಯು

ಇಷ್ಟೇ ಇದೆ. ಶಕ್ತಿಯೂ ಇಷ್ಟೇ ಇದೆ. ಆದುದರಿಂದ ನನ್ನ ಭಕ್ತಿಯನ್ನು ಪೂರ್ಣಗೊಳಿಸಿರಿ ಎಂದು ವಿನವಿಸಿದಳು. ನಂತರ ಆ ಜನರು ಆ ಹಾಲಿನಿಂದ ಅಭಿಷೇಕ ಮಾಡಲು ಹಾಲಿನ ಹೊಳೆಯೇ ಹರಿಯತೊಡಗಿತು. ಭವ್ಯರೇ ! ನೋಡಿರಿ. ಕೊಟ್ಯವಧಿ ಹಣವನು ಖರ್ಚು ಮಾಡಿದರೂ ಅದು ವ್ಯರ್ಥವಾಯ್ತು. ಅದರಲ್ಲಿ ಅಭಿಮಾನದ ಅಭಿನಿವೇಶವಿತ್ತು ಆದರೆ ಭಕ್ತಿಯ ಸಣ್ಣ ಕಾಣಿಕೆಯು ಹೆಚ್ಚಿನ ಫಲವನ್ನು ತೋರಿಸಿತು. ಆದುದರಿಂದ ಇದನ್ನು ತಿಳಿದು ಭವ್ಯಾತ್ಮರೇ ! ಅನಂತಕಾಲದಿಂದ ಜಿನಧರ್ಮದ ಆರಾಧನೆಯನ್ನು ಮಾಡದೆ, ಮಿಥ್ಯಾ ಗರ್ವದಿಂದ ಅನಂತಕಾಲವನರೆಗೆ ಈ ಸಂಸಾರದಲ್ಲಿ ಭ್ರಮಣೆ ಮಾಡುತ್ತಿದ್ದೀರಿ. ಆದುದರಿಂದ ಆ ವೃಥಾ ಅಭಿಮಾನವನ್ನು ಬಿಡಿರಿ. ರತ್ನತ್ರಯದ ಲಾಭವನ್ನು ಮಾಡಿಕೊಳ್ಳಿರಿ.

ರೇ ಜೀವ ಅನಂತ ಭವೇ
ಸಂಸಾರೇ ಸಂಸೃತೋ ಬಹುವಾರಂ
ಪ್ರಾಪ್ತೋ ನ ಬೋಧಿಲಾಭಃ
ಮಿಥ್ಯಾತ್ವ ವಿಜೃಂಭಿತ ಪ್ರಕೃತಿಭಿಃ ||

ಕಲ್ಯಾಣಾಲೋಚನಾ.

ಇನ್ನಾದರೂ ನೀನು ಜಿನಧರ್ಮದ ಆರಾಧನೆಯನ್ನು ಮಾಡು. ಎಲೇ ಜೀವನೇ ! ನೀನು ಅನಂತಭವಗಳಲ್ಲಿ ಸಂಸಾರದಲ್ಲಿ ಮಿಥ್ಯಾತ್ವದಿಂದ ಗರ್ವಿತನಾಗಿ ಪರಿಭ್ರಮಣೆಯನ್ನು ಮಾಡುತ್ತಿದ್ದಿಯೇ. ಅದರಿಂದ ರತ್ನತ್ರಯವನ್ನು ಪ್ರಾಪ್ತ ಮಾಡಿಕೊಳ್ಳಲಿಲ್ಲ. ಆ ಮಿಥ್ಯಾ ಅಭಿಮಾನವನ್ನು ಬಿಟ್ಟು ರತ್ನತ್ರಯವನ್ನು ಧಾರಣೆ ಮಾಡು. ಮಾರ್ದವ ಧರ್ಮವನ್ನು ಧಾರಣೆ ಮಾಡಿ ಮೃದು ಅಂದರೆ ಸರಳ ವ್ಯವಹಾರ ಮಾಡಿ ಈ ಧರ್ಮವನ್ನು ತನ್ನ ಹೃದಯದಲ್ಲಿಡು. ಅದರಿಂದ ನಿನ್ನ ಇಹಪರ ಲೋಕದಲ್ಲಿ ಕಲ್ಯಾಣವಾಗಬಹುದು.

ಲೋಕದಲ್ಲಿ ಕರ್ಮವು ಬಲವತ್ತರವಾಗಿದೆ, ಅಶುಭ ಕರ್ಮದ ಉದಯದಿಂದ ಈ ಆತ್ಮನು ಕೆಲವು ಸಾರಿ ನೀಚ ಗೋತ್ರದಲ್ಲಿ ಜನ್ಮವೆತ್ತುತ್ತಾನೆ, ಕೆಲವು ಸಾರಿ ಉಚ್ಚಪರಿಣತಿಯಿಂದ ಉಚ್ಚಗೋತ್ರದಲ್ಲಿ ಜನ್ಮವೆತ್ತುತ್ತಾನೆ. ವಿಚಾರ ಮಾಡಿ ನೋಡಿದರೆ ಈ ಆತ್ಮನು ಉಚ್ಚತೆ, ನೀಚತೆಯಿಂದ ರಹಿತನಾಗಿದ್ದು, ಶುದ್ಧ ಪರಮ ಪವಿತ್ರನಾಗಿದ್ದಾನೆ. ಇದೇ ಅವನ ಸ್ವರೂಪವಾಗಿದೆ. ಇದನ್ನು ಜ್ಞಾನದೃಷ್ಟಿಯಿಂದ ನೋಡಬೇಕಾಗಿದೆ, ತಿಳಿಯಬೇಕಾಗಿದೆ.

**ಜ್ಞಾನವಿನಾ ಬಹು ಕಷ್ಟಕರ ಮಿಲೆ ನ ನಿರ್ಮಲ ಜ್ಞಾನ**
**ಸರ್ವ ಕರ್ಮ ಮುಕ್ತಿ ಚಹೋ, ಧರೋ ಜ್ಞಾನಕಾ ಧ್ಯಾನ**

ಸಮಯಸಾರ.

ಆದುದರಿಂದ ಭವ್ಯರೇ ! ನಿಮಗೆ ಸುಖಿಯಾಗಬೇಕೆಂಬ ಇಚ್ಛೆ ಇದ್ದರೆ ಸಮ್ಯಗ್ಜ್ಞಾನವನ್ನು ಧಾರಣೆ ಮಾಡಿರಿ. ಸಮ್ಯಕ್ತ್ವವಿಲ್ಲದೆ ಎಷ್ಟು ಕಾಯಕ್ಲೇಶ ಮಾಡಿದರೂ, ಎಷ್ಟು ಜ್ಞಾನ ಸಂಪಾದಿಸಿದರೂ ಆ ಜ್ಞಾನದಿಂದ ತಮ್ಮ ಆತ್ಮಕಲ್ಯಾಣವಾಗಲಾರದು. ಆತ್ಮಕಲ್ಯಾಣವನ್ನು ಬಯಸುವ ಭವ್ಯರು ತಮ್ಮ ನಿಜಸ್ವರೂಪದಲ್ಲಿ ಸ್ಥಿರವಿದ್ದು ನಿಜಾನಂದ ಸುಖವನ್ನು ಹುಡುಕುತ್ತಿರುತ್ತಾರೆ. ಆ ಸುಖವು ನಿಜಾನಂದ ಸುಖವಾದ ಆತ್ಮ ಸುಖವನ್ನು ಬಿಟ್ಟು ಹೊರಗಿನ ಇಂದ್ರಿಯಗಳ ಭೋಗದಲ್ಲಿ ಸಿಗಲಾರದು. ಇಂದ್ರಿಯ ಸುಖವು ಜಡ–ಪುದ್ಗಲ ಪರಿಣತಿ ರೂಪವಾಗಿದೆ. ಜಡರೂಪವಾಗಿದೆ. ಪ್ರತಿಸಮಯದಲ್ಲಿ ಆಧಿ–ವ್ಯಾಧಿ ರೂಪವಾದ ದುಃಖಗಳನ್ನು ಕೊಡುವುದಾಗಿದೆ. ಮತ್ತು ಅವುಗಳು ಸರ್ವವ್ರತ ಮತ್ತು ಆತ್ಮಸ್ವರೂಪದಲ್ಲಿ ವಿಕಾರವನ್ನು ಉಂಟು ಮಾಡುತ್ತವೆ.

ಇದನ್ನು ತಿಳಿದು ನೀವು ಅಜ್ಞಾನಮಯವಾದ ಇಂದ್ರಿಯ ಸುಖವನ್ನು ತ್ಯಾಗ ಮಾಡಿ ಸುಜ್ಞಾನವೆಂಬ ಜಾಜ್ವಲ್ಯಮಾನವಾದ ದೀಪವನ್ನು

ಕೈಯಲ್ಲಿ ಹಿಡಿದುಕೊಳ್ಳಿರಿ. ಆ ದೀಪದ ಪ್ರಕಾಶದಿಂದ ತಮಗೆ ನಿಜವಾದ ವಸ್ತುವಿನ ಜ್ಞಾನವಾಗಬಹುದು. ವಸ್ತು ಏವ ನಿಜವಾದ ಜ್ಞಾನವಿಲ್ಲದೆ ಬೇಕಾದಷ್ಟು ಕಷ್ಟ ಸಹಿಸಿ ಕಾಯಕ್ಲೇಶವನ್ನು ಮಾಡಿ ತಪಶ್ಚರ್ಯೆಯನ್ನು ಮಾಡುವ ವತ್ತು ಅದರಿಂದ ನಿಜವಾದ ಸಿದ್ಧಿಯನ್ನು ಹೊಂದದೆ ಸಂಸಾರ, ಪರಿಭ್ರಮಣೆಯನ್ನು ಮಾಡುತ್ತಿರುವ ಅಜ್ಞಾನೀ ಪ್ರಾಣಿಗಳ ಎಷ್ಟೋ ಉದಾಹರಣೆಗಳಿವೆ. ಈ ಅಜ್ಞಾನದ ಮದವು ನಷ್ಟವಾಗದೆ ಯಾವವ್ರತವೂ ಯಾವ ತಪವೂ ಫಲಕಾರಿಯಾಗಲಾರದು.

ನೋಡಿ, ಒಂದು ಕಡೆಯಲ್ಲಿ ತಪದ ಮದದಿಂದ ಏನಾಯ್ತು ? ಬಾಹುಬಲಿ ಮುನಿಯು ಒಂದು ವರ್ಷದ ವರೆಗೆ ಘೋರ ತಪವನ್ನು ಆಚರಿಸಿದರೂ ಕೇವಲಜ್ಞಾನದ ಪ್ರಾಪ್ತಿಯಾಗಲಿಲ್ಲ. ಇದನ್ನು ತಿಳಿದು ಭರತೇಶ್ವರನು ಆದಿನಾಥ ಭಗವಂತನ ಸಮವಸರಣದಲ್ಲಿ ಹೋಗಿ ' ನನ್ನ ತಮ್ಮನು ಇಷ್ಟು ಘೋರ ತಪಶ್ಚರ್ಯೆಯನ್ನು ಮಾಡಿದರೂ ಕೇವಲಜ್ಞಾನ ಯಾಕೆ ಆಗುವುದಿಲ್ಲವೆಂದು ಕೇಳಿದನು. ಆಗ ಆದಿ ಭಗವಂತರು ಹೇಳಿದರು. ಭವ್ಯನೇ, ಅವನ ಮನಸ್ಸಿನಲ್ಲಿ ಅತ್ಯಂತ ಸೂಕ್ಷ್ಮವಾದ ಮಾನ ಕಷಾಯವು ಉಳಿದಿದೆ. ಸ್ವಲ್ಪ ಪ್ರಮಾಣದಲ್ಲಿಯೂ ಪರಭಾವವು ಇರುವುದು ಅಜ್ಞಾನದ ಲಕ್ಷಣವಾಗಿದೆ. ಅಜ್ಞಾನವು ಎಷ್ಟರವರೆಗೆ ಇದೆಯೋ ಅಷ್ಟರವರೆಗೆ ಎಷ್ಟು ಶಾಸ್ತ್ರ ಪಠಣ ಮಾಡಿದರೂ ಅಥವಾ ತಪಶ್ಚರ್ಯೆಯನ್ನು ಮಾಡಿದರೂ ಆತ್ಮ ಸಿದ್ಧಿಯಾಗಲಾರದು.

ಅಂಶ ಮಾತ್ರ ನಿಶ್ಚಯ ಸಮುಝು  
ರಾಗಾದಿಕ ಜಹೆ ತಾಪ,  
ಸರ್ವಶಾಸ್ತ್ರ ಪಾಠೀ ಯದಪಿ  
ತದಪಿ ನ ಜಾನೇ ಆಪ ॥

ಬಾಹುಬಲಿ ಮುನಿಯು ವಿಚಾರ ಮಾಡುತ್ತಿದ್ದನು. ನಾನು ಬೇಗನೇ ತಪದ ಪ್ರಭಾವದಿಂದ ಆತ್ಮಸಿದ್ಧಿಯನ್ನು ಮಾಡಿಕೊಳ್ಳುವೆನು. ಭರತೇಶ್ವ

ರನ ರಾಜ್ಯದಲ್ಲಿ ಆಹಾರ ಮಾಡಲಾರೆ. ಆಕಾಶವೂ ಭರತೇಶ್ವರನದ್ದಾಗಿದೆ. ಆದುದರಿಂದ ನಾನು ಮುಕ್ತನಾಗುವವರೆಗೆ ಭರತೇಶ್ವರನ ರಾಜ್ಯದ ಉಪಯೋಗವನ್ನು ಮಾಡಲಾರೆನೆಂಬ ಶಲ್ಯದಿಂದ, ಒಂದು ವರ್ಷದವರೆಗೆ ಉಗ್ರತಪವನ್ನು ಮಾಡಿದರೂ ಕೇವಲಜ್ಞಾನವಾಗಲಿಲ್ಲ. ಆದುದರಿಂದ ಈ ಶಲ್ಯವೆಂಬ ಮುಳ್ಳನ್ನು ತೆಗೆಯದೆ ಅವನಿಗೆ ಕೇವಲಜ್ಞಾನವು ಆಗಲು ಸಾಧ್ಯವಿಲ್ಲ. ಇದನ್ನು ತಿಳಿದ ಭರತೇಶ್ವರನು ಬಾಹುಬಲಿಯ ಕಡೆ ಹೋಗಿ ನಮಸ್ಕಾರ ಮಾಡಿ ' ಭವ್ಯಾತ್ಮನ್, ಗುರುದೇವ, ಈ ರಾಜ್ಯ ಮತ್ತು ಭೂಮಿಯು ಭರತೇಶ್ವರನಿದ್ದೆಂಬ ಶಲ್ಯವು ತಮ್ಮ ಹೃದಯದಲ್ಲಿ ಉಳಿದಿದೆ. ಅದನ್ನು ಬಿಡೋಣಾಗಲಿ- ಭೂಮಿಯು ಸ್ವಯಂಸಿದ್ಧವಾಗಿದೆ. ಅದರ ಕರ್ತಾ ಅಥವಾ ಸ್ವಾಮಿಯು ಯಾರೂ ಇಲ್ಲ. ನನ್ನಂಥಹ ಚಕ್ರವರ್ತಿಗಳು ಅನಂತಾನಂತ ಆಗಿ ಹೋಗಿದ್ದಾರೆ. ಇದು ತಮಗೆ ತಮ್ಮ ಜ್ಞಾನದಿಂದ ತಿಳಿಯಬಹುದು. ಈ ಅಜ್ಞಾನವೆಂಬ ಅಂಧಕಾರವನ್ನು ನಾಶ ಮಾಡದೆ ಕೇವಲ ಜ್ಞಾನ ಜ್ಯೋತಿಯು ಸಾಧ್ಯವಾಗಲಾರದು. ' ಎಂದು ಬಹಳ ವಿನಯದಿಂದ ಹೇಳಿದನು. ಚಕ್ರವರ್ತಿಯ ಈ ವಚನಗಳನ್ನು ಕೇಳಿ ಆ ಮುನಿಯು ಅದೇ ಸಮಯದಲ್ಲಿ ತನ್ನ ಮಿಥ್ಯಾ ಮದವನ್ನು ಬಿಟ್ಟನು. ಆಗ ಕೇವಲ ಜ್ಞಾನದ ಉದಯವಾಯ್ತು. ಸಂಕಲ್ಪವಿಕಲ್ಪ ರಹಿತ ಜ್ಞಾನಾಮೃತವೇ ನನ್ನ ಆತ್ಮನ ಸ್ವಭಾವವಾಗಿದೆ. ಸಂಕಲ್ಪ ವಿಕಲ್ಪಗಳು ಪರಜನ್ಯ ಉಪಾಧಿಯಾಗಿವೆ. ಈ ಉಪಾಧಿಯಿಂದ ನನ್ನ ಆತ್ಮನು ರಹಿತನಾಗಿದ್ದಾನೆ. ಆತ್ಮನ ಸ್ವರೂಪವು ಹೀಗಿದೆ,

> ನಿರ್ವಿಕಲ್ಪಂ ಸಮುತ್ಪನ್ನಂ ಜ್ಞಾನಮೇವ ಸುಧಾರಸಂ ।
> ವಿವೇಕಮಂಜಲಿಂ ಕೃತ್ವಾ, ತಂ ಪಿಬಂತಿ ತಪಸ್ವಿನಃ ॥
>
> ಪರಮಾನಂದ ಸ್ತೋತ್ರ.

ನಿರ್ವಿಕಲ್ಪ ಧ್ಯಾನದಿಂದ ಉತ್ಪನ್ನವಾದ ಜ್ಞಾನಾಮೃತವನ್ನು ತಪಸ್ವಿಗಳು ವಿವೇಕವೆಂಬ ಅಂಜಲಿಯಿಂದ ಕುಡಿಯುತ್ತಾರೆ.

ಈ ಪ್ರಕಾರ ಬಾಹುಬಲಿಯು ತನ್ನ ಆತ್ಮನ ಸ್ವಭಾವವನ್ನು ರತ್ನ ತ್ರಯ ಸ್ವರೂಪವೆಂದು ಭಾವಿಸಿ ಅಖಂಡ ಅವಿನಾಭಾವಿಯಾದ ಆತ್ಮನಲ್ಲಿ ಮಗ್ನನಾಗಿ ಧ್ಯಾನರೂಪ ಅಗ್ನಿಯಿಂದ ಅನಂತ ಜನ್ಮಗಳಲ್ಲಿ ಅರ್ಜಿಸಿದ ಕರ್ಮವೆಂಬ ಕಟ್ಟಿಗೆಯನ್ನು ಸುಟ್ಟು ಬಿಟ್ಟನು.

ಶುಕ್ಲಧ್ಯಾನವಹ್ನಿನಾ ದಹಂತಿ ಕರ್ಮೇಂಧನಾಃ

ಶುಕ್ಲ ಧ್ಯಾನವೆಂಬ ಬೆಂಕಿಯಿಂದ ಮುನಿಯು ಘಾತಿಕರ್ಮ ವೆಂಬ ಕಟ್ಟಿಗೆಗಳನ್ನು ಸುಟ್ಟು ಕೂಡಲೇ ಕೇವಲಿಯಾದನು. ಭವ್ಯರೇ ! ವಿಚಾರ ಮಾಡಿರಿ. ಪುಣ್ಯಶಾಲಿಗಳೂ ಮತ್ತು ತದ್ಭವ ಮೋಕ್ಷಗಾಮಿಗಳೂ ಆದ ಮಹಾಪುರುಷರೂ ಸ್ವಲ್ಪ ಗರ್ವವಶರಾದರೆ, ಅವರಿಗೂ ದೊಡ್ಡ ಕಷ್ಟವನ್ನು ಸಹನೆ ಮಾಡಬೇಕಾಗುತ್ತದೆ. ಹೀಗಿರುವಾಗ ನಮ್ಮಂಥಹ ಪುಣ್ಯಹೀನರ ಪಾಡೇನು. ನಮ್ಮ ಹೃದಯದಲ್ಲಿ ಸಂಕಲ್ಪ ವಿಕಲ್ಪಗಳೆಂಬ ಅನೇಕ ತರಂಗ ಗಳು ಸತತ ಬರುತ್ತಿರುತ್ತವೆ. ಅವುಗಳನ್ನು ಭೇದ ವಿಜ್ಞಾನದ ಬಲದಿಂದ ದೂರ ಮಾಡಿರಿ, ಮತ್ತು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಭಗ ವಂತನ ವಚನವಿದೆ.

ಲೋಕದಲ್ಲಿರುವ ಎಲ್ಲಾ ಶತ್ರುಗಳಿಂದಲೂ ಕರ್ಮ ಶತ್ರುವು ಅತಿ ಪ್ರಬಲವಾದ ವೈರಿ. ಆ ಕರ್ಮವೆಂಬ ಶತ್ರುವಿನ ಆಧೀನನಾಗಿ ಈ ಜೀವನು ನಾನಾ ಯೋನಿಗಳಲ್ಲಿ ಅನೇಕ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಮತ್ತು ಅವನು ತನ್ನ ಅಜ್ಞಾನ ಭಾವದಿಂದಲೇ ಈ ದುಃಖಗಳನ್ನು ಅನುಭವಿಸುತ್ತಾನೆ.

ಆ ಸಮಯದಲ್ಲಿ ವಿವೇಕೀ ಜೀವನು ತನ್ನ ವಿಚಾರಶಕ್ತಿಯಿಂದ ಈ ಪ್ರಕಾರ ಅನುಭವವನ್ನು ಮಾಡುತ್ತಾನೆ. "ನಾನು ಅಮೂರ್ತಿಕನಾಗಿ ದ್ದೇನೆ. ನನಗೆ ರೂಪವಿಲ್ಲ, ರಸವಿಲ್ಲ, ಗಂಧವಿಲ್ಲ ಮತ್ತು ನನಗೆ ಗರ್ವವೂ ಇಲ್ಲ. ರಾಗಭಾವ ಮತ್ತು ಅಶುಭ ಕರ್ಮ ಇವೆರಡೂ ಸಂಸಾರದಲ್ಲಿ ದುಃಖಕ್ಕೆ ಕಾರಣವಾಗಿವೆ. ಈ ಎರಡು ಪರಿಣಾಮಗಳನ್ನು ಬಿಟ್ಟು ಯಾವನು

ತನ್ನ ಚಿದಾನಂದ ರೂಪನಾದ ಪರಿಣಾಮದಲ್ಲಿರುತ್ತಾನೆಯೋ ಮತ್ತು ಇತರ ಸರ್ವ ವಸ್ತುಗಳನ್ನು ಅನಿತ್ಯ, ನಾಶಶೀಲವಾಗಿವೆಯೆಂದು ತಿಳಿದು ಶರೀರ, ಯೌವನ, ಇಂದ್ರಿಯ ಸುಖಗಳನ್ನು ಕ್ಷಣಭಂಗುರವೆಂದು ಭಾವಿಸುತ್ತಾನೆಯೋ ಅವನೇ ನಿಜವಾದ ಬುದ್ಧಿವಂತನು, ನಿಜವಾದ ಪಂಡಿತನು.

ಅಚಿಂತ್ಯ ಸೌಖ್ಯಸ್ಯ ವರಂ ನಿಧಾನಂ
ಪೋತಂ ನರಂ ತಾರಯಿತುಂ ಭವಾಬ್ಧೇಃ
ಸಾಮ್ರಾಜ್ಯಬೀಜಂ ಸ್ವಸುಖಸ್ಯ ಸಾರಂ
ಭೇತ್ತುಂ ಸಮರ್ಥಂ ಚ ಚತುರ್ಗತಿಂ ಚ ||
ಮಿಥ್ಯಾತ್ವತಾಪಂ ಶಮಿತುಂ ಜಲಂ ಹಿ,
ದಾತುಂ ಸಮರ್ಥಂ ಸುಖಶಾಂತಿರಾಜ್ಯಂ,
ಸಮ್ಯಕ್ತ್ವರತ್ನಂ ಸಕಲಾಶ್ಚ ಜೀವಾ-
ಗೃಹ್ಣಂತು ಶೀಘ್ರಂ ನಿಜರಾಜ್ಯಹೇತೋಃ ||

ಬೋಧಾಮೃತ.

ಈ ಸಮ್ಯಗ್ದರ್ಶನವೆಂಬ ರತ್ನವು ಅಚಿಂತ್ಯ ಸುಖವನ್ನು ಕೊಡುವ ದೊಡ್ಡ ಭಂಡಾರವಾಗಿದೆ, ಸಂಸಾರವೆಂಬ ಸಮುದ್ರವನ್ನು ದಾಟಲಿಕ್ಕೆ ಹಡಗಿನಂತಿದೆ ಮೂರು ಲೋಕದ ರಾಜ್ಯವನ್ನು ಕೊಡಲಿಕ್ಕೆ ಬೀಜವೋಪಾದಿಯಲ್ಲಿದೆ. ಅದು ಆತ್ಮ ಸುಖದ ಸಾರವಾಗಿದೆ ಚತುರ್ಗತಿಯ ದುಃಖಗಳನ್ನು ನಾಶ ಮಾಡಲು ಸಮರ್ಥವಾಗಿದೆ. ಮಿಥ್ಯಾತ್ವವೆಂಬ ಸಂತಾಪವನ್ನು ನಾಶ ಮಾಡಲು ನೀರಿನಂತಿದೆ. ಮತ್ತು ಸುಖ ಶಾಂತಿಮಯವಾದ ರಾಜ್ಯವನ್ನು ಕೊಡಲು ಸಮರ್ಥವಾಗಿದೆ. ಆದುದರಿಂದ ಈ ಸಮ್ಯಗ್ದರ್ಶನವೆಂಬ ರತ್ನವನ್ನು ಜ್ಞಾನಿಗಳು ಅವಶ್ಯ ತಮ್ಮೊಡನೆ ಇಟ್ಟುಕೊಳ್ಳಬೇಕು ಸುಖವನ್ನು ಬಯಸುವ ಭವ್ಯಾತ್ಮರೇ ! ಸಮ್ಯಗ್ದರ್ಶನವೆಂಬ ಆತ್ಮ-ರಸಾಮೃತವನ್ನು ಧಾರಣೆ ಮಾಡಿ ನೀವು ಸುಖಿಗಳಾಗಿರಿ.

ಸಮ್ಯಗ್ದರ್ಶನವಿಲ್ಲದೆ ಈ ಅಜ್ಞಾನಿ ಮತ್ತು ಮಿಥ್ಯಾದೃಷ್ಟಿ ಜೀವರುಗಳು ತನ್ನ ಅಜ್ಞಾನ ಪರಿಣಾಮದಿಂದ ಕಷಾಯಜನ್ಯ ದುರಭಿಮಾನ, ಹಠ, ಅಹಂಕಾರಗಳನ್ನು ಧಾರಣೆ ಮಾಡಿ ಇಂದ್ರಿಯ ಸುಖಗಳನ್ನೇ ನಿತ್ಯ ಸುಖಗಳೆಂದು ಭಾವಿಸಿ, ಅವುಗಳ ವಿಷಯದಲ್ಲಿ ರಾಗದ್ವೇಷಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಅದರಿಂದ ನೂತನ ಕರ್ಮಗಳನ್ನು ಕಟ್ಟಿಕೊಳ್ಳುತ್ತಾರೆ. ಶರೀರ ಸಂಬಂಧವಾದ ಸುಖಗಳನ್ನು ತನ್ನ ಸುಖವೆಂದೇ ತಿಳಿದು ನಾನು ಸುಖಿಯಾಗಿದ್ದೇನೆ, ನಾನು ಸುಂದರನಾಗಿದ್ದೇನೆ, ನನಗೆ ಸರಿಸಮಾನರಾದ ರೂಪವಂತರು ಬೇರೆ ಯಾರೂ ಇಲ್ಲ, ಎಂಬ ದುರಭಿಮಾನದಿಂದ ಬೇರೆಯವರ ತಿರಸ್ಕಾರವನ್ನು ಮಾಡುತ್ತಾರೆ. ಆ ಅವಿವೇಕಿಗಳು ಇಹಪರಗಳಲ್ಲಿ ತನ್ನ ಸುಖದಿಂದ ವಂಚಿತರಾಗುತ್ತಾರೆ.

## ರೂಪ ಮದದಿಂದಾದ ಹಾನಿ.

ಶಾಸ್ತ್ರದಲ್ಲಿ ಒಂದೆಡೆ ಈ ಪ್ರಕಾರದ ಘಟನೆಯ ಉಲ್ಲೇಖವಿದೆ.

ಒಬ್ಬ ರಾಜನ ರಾಣಿಯು ತನ್ನ ಅರಮನೆಯ ಉಪ್ಪರಿಗೆಯ ಮಹಡಿಯ ಮೇಲೆ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿ ಕುಂಕುಮವನ್ನು ಹಚ್ಚಿಕೊಳ್ಳುತ್ತಿದ್ದಳು. ಆಕಾಶದಿಂದ ಒಬ್ಬ ಚಾರಣ ಮುನಿಗಳು ಆಹಾರಕ್ಕೋಸ್ಕರ ಇಳಿಯುತ್ತಿದ್ದರು. ಅವರ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಿದ ರಾಣಿಯು ತಿರಸ್ಕಾರದಿಂದ ತನ್ನ ರೂಪದ ಅಭಿಮಾನದಿಂದ ನಕ್ಕಳು, ಮತ್ತು ಕಠೋರ ಶಬ್ದಗಳಿಂದ ಹೀಯಾಳಿಸಿದಳು. ಆ ಪಾಪ ಕರ್ಮದ ಫಲದಿಂದ ಕೆಲವು ದಿವಸಗಳಲ್ಲಿಯೇ ಅವಳು ಮಹಾರೋಗಿಯಾದಳು. ರಾಜನು ಅವಳನ್ನು ಅರಮನೆಯಿಂದ ಹೊರಡಿಸಿದನು. ರಾಜ್ಯ ಸುಖದಿಂದ ಚ್ಯುತಳಾದ ಕಾರಣ ಆರ್ತಧ್ಯಾನದಿಂದ ತಿರ್ಯಂಚ ಗತಿಯ ಬಂಧವನ್ನು ಕಟ್ಟಿಕೊಂಡು ಕತ್ತೆಯಾಗಿ ಹುಟ್ಟಿದಳು. ಆದುದರಿಂದ ಭವ್ಯಾತ್ಮರೇ ! ದುರಭಿಮಾನವನ್ನು ಬಿಟ್ಟು ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ.

ಇದು ಕೇವಲಿಗಳ ಉಪದೇಶವಾಗಿದೆ. ಜ್ಞಾನಿಯಾದ ಜೀವನು ತನ್ನ ವಿಚಾರ ಶಕ್ತಿಯಿಂದ ಯಾವಾಗಲೂ 'ನಾನು ಅಮೂರ್ತಿಕ, ರೂಪರಸ ರಹಿತನಾಗಿದ್ದೇನೆ. ಅನಂತಜ್ಞಾನವೇ ನನ್ನ ಸ್ವಭಾವವಾಗಿದೆ, ಎಂದು ಭಾವಿಸುತ್ತಿರುತ್ತಾನೆ.

**ಅರಸಃ ಅರೂಪಃ ಅಗಂಧಃ ಅವ್ಯಾಬಾಧಃ ಅನಂತಜ್ಞಾನಮಯಃ**
**ಅನ್ಯೋ ನ ಮಮ ಶರಣಂ ಶರಣಂ ಸ ಏಕ ಪರಮಾತ್ಮಾ ||**

ಕಲ್ಯಾಣ ಆಲೋಚನಾ.

ನನ್ನ ಆತ್ಮನು ರೂಪ, ರಸ, ಗಂಧ, ವರ್ಣ ಇವುಗಳಿಂದ ರಹಿತನಾಗಿ ಬಾಧಾರಹಿತನಾಗಿ ಅನಂತಜ್ಞಾನದಿಂದ ಯುಕ್ತನಾಗಿದ್ದಾನೆ. ಇದೇ ನನ್ನ ಪರಮಾತ್ಮನ ಸ್ವರೂಪವಾಗಿದೆ. ಈ ಪ್ರಕಾರದ ವಿಚಾರವನ್ನು ಮಾಡುವ ಆ ಸಮ್ಯಗ್‌ದೃಷ್ಟಿ ಜೀವನು ಸಂಸಾರದಲ್ಲಿದ್ದರೂ ಆತ್ಮಾನುಭವವನ್ನು ಮಾಡುತ್ತಿರುತ್ತಾನೆ. ಆ ಸಮ್ಯಕ್‌ದೃಷ್ಟಿಯ ಹೃದಯದಲ್ಲಿ ಮಾರ್ದವ ಧರ್ಮವಿರುತ್ತದೆ. ಆ ಮಾರ್ದವ ಧರ್ಮದ ಪ್ರಭಾವದಿಂದ ಅವನು ಈ ಲೋಕದಲ್ಲಿ ಸರ್ವರಿಗೂ ವಂದನೀಯ ಮತ್ತು ಆದರಣೀಯನಾಗುತ್ತಾನೆ. ಮತ್ತು ಪರಲೋಕದಲ್ಲಿಯೂ ಸಮ್ಯಕ್ತ್ವಸಹಿತ ಉತ್ತಮ ಸುಖವನ್ನು ಪಡೆಯುತ್ತಾನೆ. ತನ್ನ ಸಮ್ಯಕ್ತ್ವವೆಂಬ ನಿಧಿಯ ಪ್ರಭಾವದಿಂದ ಎಲ್ಲರ ಅಂತಃಕರಣದಲ್ಲಿ ವಾಸ ಮಾಡುತ್ತಾನೆ, ಅವನ ಕೀರ್ತಿಯು ಹತ್ತು ದಿಕ್ಕುಗಳಲ್ಲಿಯೂ ಹಬ್ಬುತ್ತದೆ. ಅವನು ತನ್ನ ಸಮ್ಯಕ್ತ್ವದಲ್ಲಿ ಸ್ಥಿರನಾಗಿರುತ್ತಾನೆ. ಎಂಥಹ ಸಂಕಟ ಮತ್ತು ವಿಪತ್ತು ಬಂದರೂ ತನ್ನ ನಿಜ ಸ್ವಭಾವದಿಂದ ವಿಚಲಿತನಾಗುವುದಿಲ್ಲ.

'ನನ್ನ ಸಮ್ಯಕ್-ಶ್ರದ್ಧೆಯು ಮೋಹರಹಿತವಾಗಿದೆ ಎಂಬ ಸತ್ಯ ಅಭಿಮಾನವು ಸಮ್ಯಗ್‌ದೃಷ್ಟಿಯ ಹೃದಯಲ್ಲಿ ಇರಲು ಸಾಧ್ಯ. ನಾನು ನಿರ್ದೋಷವಾದ ದೇವ-ಗುರು-ಶಾಸ್ತ್ರ ಮತ್ತು ಅಂತಹ ಭಗವಂತನ

ಭಕ್ತರಾದ ಸಮ್ಯಗ್‌ದೃಷ್ಟಿಗಳನ್ನೇ ವಂದಿಸುವೆನು. ಅವರ ಆದರ ಸತ್ಕಾರವನ್ನು ಮಾಡುವೆನು. ಮಿಥ್ಯಾದೃಷ್ಟಿ, ಅಹಂಕಾರೀ, ಮತ್ತು ಹಟವಾದಿಗಳಾದವರನ್ನು ಎಂದೂ ವಂದಿಸೆನು. ಅವರಿಗೆ ನಮಸ್ಕಾರ ಮಾಡಲಾರೆ, ಎಂಬ ದೃಢವ್ರತದಿಂದ ಸಮ್ಯಗ್‌ದೃಷ್ಟಿಯು ಯುಕ್ತನಾಗಿರುತ್ತಾನೆ.

ಒಬ್ಬ ಮಿಥ್ಯಾದೃಷ್ಟಿ ರಾಜನು ತನ್ನ ವೈಭವದ ಅಭಿಮಾನದಿಂದ ಒಬ್ಬ ಸಮ್ಯಗ್‌ದೃಷ್ಟಿಗೆ ' ನೀನು ಕೂಡಲೇ ಬಂದು ನನಗೆ ನಮಸ್ಕಾರವನ್ನು ಮಾಡಬೇಕು. ಇಲ್ಲವಾದರೆ ನೀನು ರಾಜ್ಯದಿಂದ ಹೊರಟು ಹೋಗಬೇಕು, ಎಂದು ಪತ್ರ ಬರೆದು ತಿಳಿಸಿದನು. ಈ ಪತ್ರವನ್ನು ಓದಿ ಆ ಸಮ್ಯಗ್‌ದೃಷ್ಟಿಯು ಗಾಬರಿಯಾಗದೆ, ಧೈರ್ಯದಿಂದ ವಿಚಾರ ಮಾಡಿ, ಏನೂ ಚಿಂತೆ ಇಲ್ಲ. ರಾಜನು ಸದಾಚಾರಿಯಾಗಿ ಧರ್ಮಾತ್ಮನಾಗಿದ್ದರೆ ಆದರಣೀಯನೇ ಸರಿ. ನಾನು ಅಗತ್ಯ ಬರುತ್ತೇನೆ, ಆದರೆ ಅವನು ಮಿಥ್ಯಾದೃಷ್ಟಿಯಾಗಿ ಹಟಗ್ರಾಹಿಯಾಗಿದ್ದರೆ ನಾನು ಅವನನ್ನು ವಂದಿಸಲಾರೆ ಆದರಿಸಲಾರೆ, ಈ ವ್ರತವನ್ನು ನಾನು ಭಗವಂತನ ಸಾಕ್ಷಿಯಾಗಿ ತೆಗೆದುಕೊಂಡಿದ್ದೇನೆ. ಈ ಪ್ರಕಾರ ಹೇಳಿ ಆ ದೂತನನ್ನು ಕಳುಹಿಸಿದನು. ಮತ್ತು ತಾನು ಭಗವಂತನ ಸ್ಮರಣೆಯನ್ನು ಮಾಡುತ್ತಾ ' ಪ್ರಭೋ, ತಾವು ಭಕ್ತರಿಗೆ ಬಂದ ಸಂಕಟದ ಸಮಯದಲ್ಲಿ ಅವರನ್ನು ಉದ್ಧರಿಸುತ್ತೀರಿ. ವಿಪತ್ತಿಯ ಸಮಯದಲ್ಲಿ ರಕ್ಷಣೆ ಮಾಡಲು ತಮ್ಮನ್ನು ಬಿಟ್ಟು ಬೇರೆ ಯಾವ ಶಕ್ತಿ ಇದೆ ? ತಮ್ಮ ಚರಣಗಳ ಶರಣವನ್ನು ಪಡೆದ ಭಕ್ತನನ್ನು ತಾವು ಪಾರಗೊಳಿಸುತ್ತೀರೆಂದು ನನ್ನ ಅವಿಚಲವಾದ ವಿಶ್ವಾಸವಿದೆ. '' ಎಂದು ಹೇಳಿ ಅವನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾದನು.

ಹೃದ್ವರ್ತಿನಿ ತ್ವಯಿ ವಿಭೋ ! ಶಿಥಿಲೀಭವಂತಿ,<br>
ಜಂತೋಃ ಕ್ಷಣೇನ ನಿಬಡಾ ಅಪಿ ಕರ್ಮಬಂಧಾಃ,<br>
ಸದ್ಯೋ ಭುಜಂಗಮಮಯಾ ಇವ ಮಧ್ಯಭಾಗ–<br>
ಮಭ್ಯಾಗತೇ ವನಶಿಖಂಡಿನಿ ಚಂದನಸ್ಯ ||

ಕಲ್ಯಾಣ ಮಂದಿರ ಸ್ತೋತ್ರ.

ಸ್ವಾಮಿನ್, ಯಾರ ಹೃದಯದಲ್ಲಿ ತಮ್ಮ ನಿವಾಸವಿದೆಯೋ ಅವರ ಕರ್ಮ ಬಂಧನವು, ಅವರ ಆಪತ್ತಿಗಳು ತನ್ನಷ್ಟಕ್ಕೆ ತಾನೇ ದೂರವಾಗುತ್ತವೆ. ಚಂದನದ ವೃಕ್ಷಗಳೊಡನೆ ದೃಢವಾಗಿ ವೇಷ್ಟಿತವಾಗಿರುವ ಸರ್ಪಗಳು ವನಮಯೂರವನ್ನು ನೋಡಿ ತನ್ನಷ್ಟಕ್ಕೆ ತಾನೇ ಬಿಟ್ಟು ಹೋಗುತ್ತವೆ. ಹಾಗೆಯೇ ತಮ್ಮ ಸ್ಮರಣೆಯಿಂದ ನನಗೆ ಬಂದ ಸಂಕಟಗಳೂ, ಶತ್ರುವಿನ ಪೀಡೆಯೂ ನಾಶವಾಗುವುದರಲ್ಲಿ ಸಂಶಯವಿಲ್ಲ. ಈ ವಿಷಯದಲ್ಲಿ ನನಗೆ ಪೂರ್ಣ ವಿಶ್ವಾಸವಿದೆ.

ಈ ಭಾವನೆಯಿಂದ ಆ ಸಮ್ಯಕ್‌ದೃಷ್ಟಿಯು ನಿಶ್ಚಲವಾದ ಧ್ಯಾನದಲ್ಲಿ ಲೀನನಾಗಿರಲು ಆ ಧ್ಯಾನದ ಪ್ರಭಾವದಿಂದ ಸಮ್ಯಗ್‌ದೃಷ್ಟಿ ದೇವತೆಯು ಪ್ರಸನ್ನಳಾಗಿ ಆ ರಾಜನಿಗೆ ಹೀಗೆ ಹೇಳಿದಳು, ರಾಜನ್, ನೀನು ನಿನ್ನ ಧನಮದದಿಂದ ಆ ಸಮ್ಯಗ್‌ದೃಷ್ಟಿಗೆ ತೊಂದರೆಯನ್ನು ಕೊಡುತ್ತಿದ್ದಿಯೇ ಇದು ನಿನ್ನ ಅಪರಾಧವಾಗಿದೆ. ನಿನಗೆ ನಿನ್ನ ಕಲ್ಯಾಣವು ಇಷ್ಟವಾಗಿದ್ದರೆ ನೀನು ಅವನ ಮರೆ ಹೋಗು, ಇಲ್ಲವಾದರೆ ನಿನಗೆ ಒಳ್ಳೆಯದಾಗಲಾರದು.

ಇದನ್ನು ಕೇಳಿ ರಾಜನು ಹೆದರಿ ಆ ಸಮ್ಯಗ್‌ದೃಷ್ಟಿಯ ಕಡೆ ಹೋಗಿ ಅವನಿಗೆ ವಿನಯಪೂರ್ವಕವಾಗಿ ಕರ ಜೋಡಿಸಿ ಹೀಗೆಂದನು:—

'ಭವ್ಯಾತ್ಮನೇ, ನಾನು ನಿನಗೆ ಏನೂ ಕಾರಣವಿಲ್ಲದೆ ತೊಂದರೆ ಕೊಟ್ಟೆನು. ಅದಕ್ಕಾಗಿ ನನ್ನನ್ನು ಕ್ಷಮಿಸಬೇಕು. ಮಹಾಪುರುಷರು ಅವಿವೇಕಿಗಳು ಮಾಡಿದ ಅಪರಾಧಗಳನ್ನು ಕ್ಷಮಿಸುತ್ತಾರೆ. ನಾನು ಧನದ ಮದದಿಂದ, ನನ್ನ ಆನೆ, ಕುದುರೆ, ಧನ, ಕನಕ, ವಜ್ರ ವೈಡೂರ್ಯ ಮೊದಲಾದ ದ್ರವ್ಯಗಳ ದುರಭಿಮಾನದಿಂದ ಗರ್ವಿಷ್ಟನಾಗಿ ನಿನ್ನನ್ನು ತಿರಸ್ಕರಿಸಿದೆನು. ಆದುದರಿಂದ ನನಗೆ ಹತ್ತು ಸಾವಿರ ವಿದ್ಯೆಗಳು ಸಿದ್ಧವಿದ್ದರೂ ಅವುಗಳಿಂದ ನನ್ನ ರಕ್ಷಣೆಯಾಗಲಿಲ್ಲ. ಆದರೆ ನೀನು ಸಮ್ಯಗ್‌ದೃಷ್ಟಿಯಾಗಿರುವುದರಿಂದ ದೇವತೆಯು ಪ್ರಸನ್ನಳಾಗಿ, ನಾನು ನಿನ್ನ ಶತ್ರುವಾಗಿರುವುದರಿಂದ ನನಗೆ ತೊಂದರೆ ಪಡಿಸಿದಳು. ಆದುದರಿಂದ ಜಗತ್ತಿನಲ್ಲಿ ಎಲ್ಲ

ರನ್ನು ರಕ್ಷಿಸಲು ಸಮರ್ಥವಾದ ಸಮ್ಯಕ್ತ್ವವೆಂಬ ನಿಧಿಯ ನೀನು ಸ್ವಾಮಿಯಾಗಿರುತ್ತೀ, ನಿನ್ನಿಂದ ಹೆಚ್ಚಿನ ಸಾಮರ್ಥ್ಯಶಾಲಿಗಳು ಬೇರೆ ಇಲ್ಲ,

ಧನಮಂ ಧಾನ್ಯಮನೂಟಮಂ ವನಿತೆಯಂ ಬಂಗಾರಮಂ ವಸ್ತ್ರವಾ-
ಹನ ರಾಜ್ಯಾದಿಗಳಂ ಸದಾ ಬಯಸುವಿ ಭ್ರಾಂತಾತ್ಮರಾಪಾಟಿಯೊಳ್
ಜಿನರಂ ಸಿದ್ಧರನಾರ್ಯವರ್ಯರನುಪಾಧ್ಯಾಯರ್ಕಳಂ ಸಾಧುಪಾ
ವನರಂ ಚಿಂತಿಸಿ ಮುಕ್ತಿಗೇಕೊಡರೋ ರತ್ನಾಕರಾಧೀಶ್ವರಾ ||

ಶತಕತ್ರಯ.

ಅವನು ವಿಚಾರ ಮಾಡುತ್ತಾನೆ ಎಲೇ ಜೀವಾತ್ಮನೇ! ನಾನು ಧನ, ಧಾನ್ಯ, ಭೋಜನ, ರಾಜ್ಯವೈಭವ, ಸ್ತ್ರೀ, ಕುಟುಂಬ ವರ್ಗದ ವಸ್ತ್ರ, ವಾಹನ, ರತ್ನ, ರಾಜ್ಯಗಳನ್ನು ಬಯಸುತ್ತಾ ಸಂಸಾರದಲ್ಲಿ ಭ್ರಮಣೆ ಮಾಡಿಕೊಂಡು ಬಂದಿರುವೆನು. ಆದರಿಂದ ಈ ಧನ ಮೊದಲಾದುವುಗಳ ಮದದಿಂದ ಅನೇಕ ಸಾಧರ್ಮಿ ಬಂಧುಗಳನ್ನು ವಂಚಿಸಿ, ಪಾಪಬಂಧವನ್ನು ಮಾಡಿಕೊಂಡು ಸಂಸಾರದಲ್ಲಿ ಪರಿಭ್ರಮಣೆ ಮಾಡಿಕೊಂಡು ಬಂದಿರುತ್ತೇನೆ. ಆದರೆ ಸಮ್ಯಗ್ದರ್ಶನವೆಂಬ ಧನವು ನನಗೆ ದೊರೆಯಲಿಲ್ಲ. ಆದುದರಿಂದ ನಾನು ದುಃಖಿಯಾಗಿಯೇ ಉಳಿದೆನು. ಇವತ್ತು ಕಾಲಲಬ್ಧಿಯಿಂದ ನಿಮ್ಮ ದರ್ಶನವಾಯ್ತು. ಆದುದರಿಂದ ಇಂದು ನನ್ನ ಜನ್ಮ ಸಫಲವಾಯ್ತೆಂದು ತಿಳಿಯುತ್ತಿದ್ದೇನೆ. ನಿಮ್ಮಿಂದ ನನಗೆ ಸಮ್ಯಗ್ದರ್ಶನವೆಂಬ ರತ್ನದ ಪ್ರಾಪ್ತಿಯಾಗಿದೆ. ನಿಮ್ಮ ಚರಣವನ್ನು ನಾನು ಎಂದಿಗೂ ಬಿಡಲಾರೆ. ಆದರೆ ಭ್ರಾಂತಾತ್ಮರು ಸಂಸಾರದ ವೈಭವವನ್ನೇ ಬಯಸುತ್ತಾರಲ್ಲದೆ ಜಿನೇಂದ್ರ, ಸಿದ್ಧ, ಆಚಾರ್ಯ, ಉಪಾಧ್ಯಾಯ ಸರ್ವಸಾಧುಗಳೆಂಬ ಪಂಚ ಪರಮೇಷ್ಠಿಗಳನ್ನು ಚಿಂತಿಸಿ ಮುಕ್ತಿಗೆ ಏಕೆ ಹೋಗುವುದಿಲ್ಲವೋ ಇದು ಆಶ್ಚರ್ಯದ ವಿಷಯ.

ನೋಡಿ, ಆ ರಾಜನು ಗರ್ವವನ್ನು ಬಿಟ್ಟು ಮಾರ್ದವ ಧರ್ಮದಿಂದ ವಿನಯಪೂರ್ವಕ ವರ್ತಿಸಿ ಆ ಸಮ್ಯಗ್‌ದೃಷ್ಟಿಯ ಮಿತ್ರನಾದನು. ಮತ್ತು ಪರಂಪರೆಯಿಂದ ಆತ್ಮಸಿದ್ಧಿಯನ್ನು ಮಾಡಿಕೊಂಡನು. ಆದುದರಿಂದ ಭವ್ಯಾತ್ಮರೇ ! ನೀವೂ ಎಲ್ಲರೊಡನೆ ವಿನಯದಿಂದ ವರ್ತಿಸಿ ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಇದೇ ಮಾರ್ದವ ಧರ್ಮದ ಸಾರವಾಗಿದೆ.

ಶುಭ ಕರ್ಮದ ಉದಯದಿಂದ ಈ ಆತ್ಮನು ಉಚ್ಚ ಪರ್ಯಾಯವನ್ನು ಧರಿಸುತ್ತಾನೆ. ಮತ್ತು ಅಶುಭ ಕರ್ಮದ ನಿಮಿತ್ತದಿಂದ ನೀಚ ಪರ್ಯಾಯುವನ್ನು ಧರಿಸುತ್ತಾನೆ. ನಾವು ಕರ್ಮದ ಉದಯದಿಂದ ಮತ್ತು ತಾನು ಮಾಡಿದ ಉಚ್ಚ ಪರಿಣಾಮದಿಂದ ಈ ಜೀವನು ದೇವನೆಂದು ಹೇಳಲ್ಪಡುತ್ತಾನೆ. ನೀಚ ಪರಿಣಾಮದಿಂದ ಆತ್ಮನು ದುಃಖಿ, ದರಿದ್ರ ಎಂದೆನ್ನಿಸಿಕೊಳ್ಳುತ್ತಾನೆ. ಆತ್ಮನ ಪರಿಣಾಮವೇ ಸುಖ ದುಃಖಗಳಿಗೆ ಕಾರಣವಾಗಿದೆ. ಆದುದರಿಂದ ಉಚ್ಚ ಪರಿಣಾಮವನ್ನು ಮಾಡಿರಿ. ಅನೇಕ ಸುಖಗಳನ್ನು ನಾಶ ಮಾಡುವ ಗರ್ವವನ್ನು ಬಿಡಿರಿ. ಸರ್ವ ಸುಖವನ್ನು ಕೊಡುವ ಮಾರ್ದವ ಧರ್ಮವನ್ನು ಧರಿಸಿರಿ. ಮಾರ್ದವ ಧರ್ಮವು ಕಠೋರ ಪರಿಣಾಮವನ್ನು ನಾಶ ಮಾಡುತ್ತದೆ. ನೀವು ಗರ್ವವನ್ನು ಬಿಟ್ಟು ಎಲ್ಲರೊಡನೆ ಪ್ರೀತಿಯಿಂದ ವರ್ತಿಸಿದರೆ ಶತ್ರುಗಳೂ ಮಿತ್ರರಾಗುತ್ತಾರೆ. ಗರ್ವದಿಂದ ವರ್ತಿಸಿದರೆ ಮಿತ್ರರೂ ಶತ್ರುಗಳಾಗುತ್ತಾರೆ. ಎಂದು ತಿಳಿದು ಎಲ್ಲರೊಡನೆ ವಿನಯ, ನಯ, ಪ್ರೇಮದಿಂದ ವರ್ತಿಸಿರಿ.

**ಬಢಾಯಿ ಬಹುತ ಮಹಂಗೀ ಹೈ, ಬುರಾಯಿ ಬಹುತ ಸಸ್ತೀ ಹೈ**
**ಜಿನ ನಾಮ ಲೇನೆಸೇ ತೇರೀ ಕ್ಯಾ ಜೀಭ ಘಸತೀ ಹೈ ॥**

ಅಧ್ಯಾತ್ಮ ಪದ ಸಂಗ್ರಹ.

ಲೋಕದಲ್ಲಿ ಒಳ್ಳೆಯವರಾಗುವುದು ಬಹಳ ಕಠಿಣ ಕಾರ್ಯ. ಆದರೆ ಕೆಟ್ಟವರಾಗುವುದು ಬಹಳ ಸುಲಭ. ಜಿನೇಶ್ವರನ ಸ್ತುತಿ ಮಾಡುವುದರಿಂದ

ನಿಮ್ಮ ನಾಲಿಗೆಯು ಸವೆಯುತ್ತದೆಯೋ ? ಆದುದರಿಂದ ಭವ್ಯರೇ! ಲೋಕದಲ್ಲಿ ಮಿತ್ರ-ಶತ್ರುಗಳು ಬೇರೆ ಯಾರೂ ಇಲ್ಲದೆ ನಮ್ಮ ಶುಭ-ಅಶುಭ ಪರಿಣಾಮಗಳೇ ನಮ್ಮ ಮಿತ್ರ ಶತ್ರುಗಳೆಂದು ತಿಳಿಯಬೇಕು.

ಒಬ್ಬ ಕವಿಯು ಹೇಳುತ್ತಾನೆ,

ನ ಕಶ್ಚಿತ್ ಕಸ್ಯಚಿನ್ಮಿತ್ರಂ, ನ ಕಶ್ಚಿತ್ ಕಸ್ಯಚಿದ್ರಿಪುಃ
ವ್ಯವಹಾರೇಣ ಮಿತ್ರಾಣಿ, ಜಾಯಂತೇ ರಿಪವಸ್ತಥಾ ॥

ಲೋಕದಲ್ಲಿ ಯಾರೂ ಯಾರ ಮಿತ್ರನೂ ಅಲ್ಲ, ಶತ್ರುವೂ ಅಲ್ಲ, ಆದರೆ ತನ್ನ ಒಳ್ಳೆಯ ಕೆಟ್ಟ ವ್ಯವಹಾರಗಳಿಂದ ಮಿತ್ರ ಶತ್ರುಗಳಾಗುತ್ತಾರೆ. ಇಷ್ಟೇ, ಆದುದರಿಂದ ನೀವು ಉಚ್ಚಭಾವನೆಯನ್ನು ಧರಿಸಿರಿ. ಮಿಥ್ಯಾ ಅಭಿಮಾನವನ್ನು ಬಿಡಿರಿ. ಅಭಿಮಾನದಿಂದ ಮನುಷ್ಯನ ಎಲ್ಲಾ ಕಾರ್ಯಗಳು ನಿಷ್ಫಲವಾಗುತ್ತವೆ.

ಒಂದು ಕಡೆ ವಿದ್ವತ್ತೆಯ ಗರ್ವದಿಂದಾದ ಹಾನಿಯ ವಿಷಯದಲ್ಲಿ ಈ ಪ್ರಕಾರದ ಘಟನೆಯಿದೆ.

## ವಿದ್ವತ್ತೆಯ ಅಭಿಮಾನದ ಫಲ.

ವಿದ್ಯೆಯ ಅಭಿಮಾನದಿಂದ ಒಬ್ಬ ಶಿಷ್ಯನು ಅತಿ ಗರ್ವಿಷ್ಠನಾದನು. ಅವನಿಗೆ ಯಾರೋ ಒಬ್ಬರು ವಿಚಾರಿಸಿದರು "ಮುನಿಗಳೇ, ತಮ್ಮ ಗುರುಗಳು ಯಾರು? ಎಂದು, ಆದರೆ ಅವರು ಮನಸ್ಸಿನಲ್ಲಿ 'ನನ್ನ ಗುರುಗಳು ನನ್ನಿಂದ ಕಮ್ಮಿ ವಿದ್ವತ್ತೆಯನ್ನು ಹೊಂದಿದವರು. ಅವರ ಹೆಸರನ್ನು ಹೇಳುವುದು ನನಗೆ ಅಪಮಾನಕರವಾದ ಮಾತು' ಎಂದು ವಿಚಾರಿಸಿ "ನನ್ನ ಗುರು ಬೇರೆ ಯಾರೂ ಇಲ್ಲ, ನಾನೇ ನನ್ನ ಗುರುವಾಗಿದ್ದೇನೆ" ಎಂದು ಉತ್ತರಿಸಿದನು. ಅಂದರೆ ತನ್ನ ನಿಜವಾದ ಗುರುವಿನ ಹೆಸರನ್ನು ಹೇಳದೆ ಸುಳ್ಳು ಹೇಳಿದನು. ಆದರಿಂದ ಅವನ ಮುಖವು ನಿಸ್ತೇಜವಾಯಿತು. ಅದನ್ನು ನೋಡಿದವರು ಬೇರೆ ಸಾಧುಗಳ ಸಂಘಕ್ಕೆ ಹೋಗಿ

ಅವನ ಮುಖವು ನಿಸ್ತೇಜವಾಗಲು ಕಾರಣವೇನೆಂದು ಕೇಳಿದರು. ಪ್ರಶ್ನೆಯು ಹೀಗಿತ್ತು. ' ಗುರುದೇವ, ನಾವು ದಾರಿಯಲ್ಲಿ ಬರುವಾಗ ಒಬ್ಬ ಮುನಿಗಳು ಕೂತಿದ್ದರು. ಅವರಿಗೆ ನಾವು ಅವರ ಗುರುಗಳು ಯಾರೆಂದು ಕೇಳಿದೆವು. ಉತ್ತರಿಸಿದ ನಂತರ ಅವರ ತೇಜಃಪುಂಜವಾದ ಮುಖವು ನಿಸ್ತೇಜವಾಯಿತು. ಇದರ ಕಾರಣವೇನೆಂದು ಹೇಳುವ ಕೃಪೆಯಾಗಬೇಕು. '

ಆಗ ಗುರುಗಳು ಅವಧಿಜ್ಞಾನದಿಂದ ತಿಳಿದು ' ನಾನೇ ಆ ಮುನಿಯ ಗುರುವಾಗಿದ್ದೇನೆ. ನನ್ನಿಂದ ಅವನು ದೀಕ್ಷಿತನಾಗಿದ್ದಾನೆ. ಆದರೆ ಅಭಿಮಾನವಶನಾಗಿ ಅವನು ' ನಾನೇ ನನ್ನ ಗುರುವಾಗಿದ್ದೇನೆ. ಎಂದು ಹೇಳಿದನು. ಆದುದರಿಂದಲೇ ಅವನ ಮುಖವು ನಿಸ್ತೇಜವಾಯಿತು. ' ಎಂದನು.

ಆದುದರಿಂದ ಭವ್ಯಾತ್ಮರೇ ! ನೀವು ಗರ್ವವನ್ನು ಬಿಟ್ಟು ವಿನಯವನ್ನು ಧರಿಸಿರಿ- ನಮಗೆ ಉಪಕಾರ ಮಾಡಿದ ಗುರುಗಳನ್ನು ಆದರದಿಂದ ನೋಡಿರಿ, ಈ ವಿಷಯದಲ್ಲಿ ಒಬ್ಬ ನೀತಿಕಾರರು ಹೀಗೆ ಹೇಳಿದ್ದಾರೆ.

ಏಕಾಕ್ಷರ ಪ್ರದಾತಾರಂ ಯೋ ಗುರುಂ ನಾಭಿವಂದತೇ,
ಶ್ವಾನಯೋನಿಶತಂ ಭುಂಕ್ತ್ವಾ ಚಾಂಡಾಲೇಷ್ವಪಿ ಜಾಯತೇ ॥

ಸುಭಾಷಿತಾವಲಿ.

ಯಾರು ನಮಗೆ ಒಂದು ಅಕ್ಷರವಾದರೂ ಉಪದೇಶ ಕೊಟ್ಟು ಸನ್ಮಾರ್ಗವನ್ನು ತೋರಿಸಿದ್ದಾರೆಯೋ, ದುರ್ಮಾರ್ಗದಿಂದ ನಮ್ಮನ್ನು ಬಿಡಿಸಿದ್ದಾರೆಯೋ, ಅವರ ಉಪಕಾರವನ್ನು ಸ್ಮರಿಸಿ ಇವರು ನನ್ನ ಗುರುಗಳೆಂದು ಹೇಳದೆ, ಅವರೆದುರಿನಲ್ಲಿ ನಾನೇ ದೊಡ್ಡ ಜ್ಞಾನಿಯಾಗಿದ್ದೇನೆಂಬ ಮಿಥ್ಯಾ ಅಭಿಮಾನವನ್ನು ಮಾಡುವವನು ಪಾಪಿಗಳೆಂದು ಹೇಳಲ್ಪಡುತ್ತಾರೆ. ಆ ಪಾಪಕರ್ಮದ ಫಲವನ್ನು ಭೋಗಿಸದೆ ಬಿಡುವುದಿಲ್ಲ. ಆ ಪಾಪಕರ್ಮದ ಫಲವನ್ನು ಹೇಗೆ ಭೋಗಿಸುತ್ತಾರೆಂಬ ವಿಷಯವನ್ನು ಹೇಳುತ್ತಾರೆ.

ಆ ಶಿಷ್ಯನ ಅಭಿಮಾನವನ್ನು ಎಲ್ಲರೂ ನಿಂದಿಸಿದರು. ಜ್ಞಾನದ ಅಭಿಮಾನದಿಂದ ಅವನು ನಿಂದೆಗೆ ಪಾತ್ರನಾದನು ಮತ್ತು ಪರಲೋಕದಲ್ಲಿ ನೂರು ಸಾರಿ ನಾಯಿಯ ಜನ್ಮವನ್ನು ತಾಳಿ ತಿರ್ಯಂಚಗತಿಯ ದುಃಖವನ್ನು ಅನುಭವಿಸಿದನು. ಆದುದರಿಂದ ಸಜ್ಜನರೇ ! ವಿಚಾರ ಮಾಡಿ ನೋಡಿರಿ. ಉಪಕಾರ ಮಾಡುವವರ ಕಡೆ ಅಪಕಾರ ಬುದ್ಧಿಯನ್ನಿಡಬೇಡಿರಿ. ಕೃತಜ್ಞತೆಯನ್ನು ಧರಿಸಿರಿ. ಕೃತಘ್ನರಾಗಬೇಡಿರಿ. ಯಾವಾಗಲೂ ಹೃದಯಶುದ್ಧಿಯನ್ನು ಮಾಡಿರಿ. ಪುಣ್ಯ ಸಂಚಯ ಮಾಡಿರಿ. ಧರ್ಮವನ್ನು ಎಂದೂ ಮರೆಯ ಬೇಡಿರಿ. ಧರ್ಮವನ್ನು ಬಿಟ್ಟು ನಿಮ್ಮ ಆತ್ಮಕಲ್ಯಾಣವನ್ನು ಮಾಡುವ ಬೇರೆ ಉಪಾಯವೂ ಇಲ್ಲ. ಇದು ಅರ್ಹತ್ಪರಮೇಷ್ಠಿಗಳ ವಚನವಾಗಿದೆ.

ಸಮ್ಯಗ್ ಜ್ಞಾನಿಗಳು ತನ್ನ ಆತ್ಮನ ಉದ್ಧಾರ ಮಾಡುವುದರಲ್ಲಿಯೇ ತನ್ನ ಜನ್ಮ ಸಫಲವಾಯಿತೆಂದು ತಿಳಿಯುತ್ತಾರೆ. ಸಮ್ಯಗ್ ಜ್ಞಾನವಿಲ್ಲದೆ ಆತ್ಮನ ಉದ್ಧಾರವಾಗಲಾರದು. ಸಮ್ಯಕ್ತ್ವವೇ ನನ್ನನ್ನು ಈ ಸಂಸಾರದಿಂದ ಪಾರಗೊಳಿಸಲು ಸಮರ್ಥವಾಗಿದೆ, ಸಮ್ಯಕ್ತ್ವವಲ್ಲದೆ ನನ್ನ ಭೋಗ ವೈಭವಗಳು, ಆಪ್ತ ಇಷ್ಟ ಮಿತ್ರ ಬಂಧುಗಳು ಯಾರೂ ನನ್ನನ್ನು ಪಾರಗೊಳಿಸಲು ಸಾಧ್ಯವಿಲ್ಲ. ಅನೇಕ ದುಃಖಗಳಿಂದ ಬಿಡಿಸಿ ನಿತ್ಯ ಸುಖವನ್ನು ಕೊಡುವುದಕ್ಕೆ ಧರ್ಮವೇ ಸಮರ್ಥವಾಗಿದೆ. ಅದನ್ನು ಗ್ರಂಥಕಾರರು ಹೀಗೆ ಹೇಳುತ್ತಾರೆ.

ರಾಜಾ ನ ರಾಜ್ಯಂ ನ ಚ ಕಾಮಧೇನು,
ಶ್ಚಿಂತಾಮಣಿರ್ವಾ ನ ಚ ಕಲ್ಪವೃಕ್ಷಾಃ,
ಮಂತ್ರೀ ನ ಮಂತ್ರೋ ಹಿ ವಿಹಾಯ ಧರ್ಮಂ,
ದುಃಖಸ್ಯ ಹರ್ತಾ ಸುಖಶಾಂತಿದಾತಾ ||

ಬೋಧಾಮೃತ.

ಈ ಸಂಸಾರದಲ್ಲಿ ಜೀವನಿಗೆ ತಾಯಿ ತಂದೆ, ಅಣ್ಣ ತಂಗಿ, ಸ್ತ್ರೀಪುತ್ರ ಮಿತ್ರ, ಸ್ವಾಮಿ, ಸೇವಕ, ದೇವ ದೇವಿ, ದೈತ್ಯ, ವೈದ್ಯ, ರಾಜಾ, ರಾಜ್ಯ, ಕಾಮಧೇನು, ಚಿಂತಾಮಣಿ, ಮಂತ್ರಿ, ಮಾಂತ್ರ ಮೊದಲಾದ ಯಾವ ಸಾಮಗ್ರಿಗಳೂ ರಕ್ಷಿಸಲು ಸಾಧ್ಯವಿಲ್ಲ. ಒಂದು ಮಾತ್ರ ಧರ್ಮವೇ ಅವನನ್ನು ರಕ್ಷಿಸಲು ಸಮರ್ಥವಾಗಿದೆ ಧರ್ಮವನ್ನು ಬಿಟ್ಟು ಯಾರೂ ರಕ್ಷಿಸಲು ಸಮರ್ಥರಿಲ್ಲ.

ಸಮ್ಯಕ್ತ್ವರತ್ನಂ ಪ್ರವಿಹಾಯ ಕೋಪಿ,
ನ ಮೋಕ್ಷದಾತಾ ನ ಚ ಜನ್ಮಹರ್ತಾ ॥

ಬೋಧಾಮೃತ.

ಜೀವನನ್ನು ಜನ್ಮ ಮರಣದಿಂದ ಬಿಡಿಸಿ ಸುಖವನ್ನು ಕೊಡುವುದಕ್ಕೆ ಸಮ್ಯಕ್ತ್ವವೇ ಸಮರ್ಥವಾಗಿದೆ. ಸಮ್ಯಕ್ತ್ವವನ್ನು ಬಿಟ್ಟು ಯಾರೂ ಮೋಕ್ಷವನ್ನು ಕೊಡಲಾರರು, ಜನ್ಮವನ್ನು ನಾಶ ಮಾಡಲೂ ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ಸಮ್ಯಕ್ತ್ವರತ್ನವು ಶ್ರೇಷ್ಟವಾಗಿದೆ. ಇದನ್ನು ತಿಳಿದು ದೃಢ ಶ್ರದ್ಧೆಯನ್ನಿಡಿರಿ. ಸಮ್ಯಕ್ತ್ವದಿಂದ ಪುಣ್ಯದ ವೃದ್ಧಿಯನ್ನು ಮಾಡಿರಿ. ಅಜ್ಞಾನೀ ಜೀವನಿಗೆ ಶತ್ರು, ಮಿತ್ರ, ಹಿತ, ಅಹಿತ, ಕಲ್ಯಾಣ, ಅಕಲ್ಯಾಣ ಮೊದಲಾದ ಸಂಕಲ್ಪ ವಿಕಲ್ಪಗಳಾಗುತ್ತವೆ. ಹಾಗೆ ಸಮ್ಯಗ್ಜ್ಞಾನೀ ಜೀವನಿಗೆ ಆ ಪ್ರಕಾರದ ಸಂಕಲ್ಪ ವಿಕಲ್ಪಗಳಾಗುವುದಿಲ್ಲ. ಜ್ಞಾನಿಗಳಿಗೆ ಭೋಗ ವೈಭವ ಸಾಮಗ್ರಿಗಳು ಎಷ್ಟು ದೊರೆತರೂ ಅವರಿಗೆ ದುರಭಿಮಾನ ಅಹಂಕಾರಗಳು ಹುಟ್ಟುವುದಿಲ್ಲ. ಅವರ ದೃಷ್ಟಿಯಲ್ಲಿ—

ಸಂಪೂರ್ಣ ಕುಂಭೋ ನ ಕರೋತಿ ಶಬ್ದ-
ಮರ್ಧೋ ಘಟೋ ಘೋಷಮುಪೈತಿ ನೂನಂ ।
ವಿದ್ವಾನ್ ಕುಲೀನೋ ನ ಕರೋತಿ ಗರ್ವಂ,
ಗುಣೈರ್ವಿಹೀನೋ ಬಹು ಜಲ್ಪಯಂತಿ ॥

ಸುಭಾಷಿತಾವಲಿ.

ತುಂಬಿದ ಕೊಡ ತುಳುಕುವುದಿಲ್ಲ. ಆದರೆ ಅರ್ಧ ತುಂಬಿದ ಕೊಡವು ಶಬ್ದ ಮಾಡುತ್ತದೆ. ಅದೇ ಪ್ರಕಾರ ಅರ್ಧ ವಿದ್ಯೆಯಿಂದ ಪಂಡಿತನಾಥ ಗರ್ವಿಷ್ಠ ಮಿಥ್ಯಾದೃಷ್ಟಿಯು ತನ್ನಲ್ಲಿ ಇಲ್ಲದಿರುವ ಗುಣಗಳನ್ನು ಹೇಳಿ ಜಲ್ಪನೆ ಮಾಡುತ್ತಾನೆ. ಈ ಲೋಕದಲ್ಲಿ ನಾನೇ ಶ್ರೇಷ್ಠನಾಗಿದ್ದೇನೆ ಗುಣವಂತನಾಗಿದ್ದೇನೆ, ನನ್ನಲ್ಲಿ ಯಾವ ನ್ಯೂನತೆಯೂ ಇಲ್ಲ. ನನಗೆ ಎಲ್ಲಾ ಅನುಕೂಲತೆಗಳು ಇವೆ. ಆದುದರಿಂದ ನನಗೆ ಎಲ್ಲರೂ ಮಾನ ಸನ್ಮಾನಗಳನ್ನು ಮಾಡುತ್ತಾರೆ. ನನ್ನ ಆಜ್ಞೆಯನ್ನು ಎಲ್ಲರೂ ಪಾಲಿ ಸುತ್ತಾರೆ ನನಗೆ ಎಲ್ಲರೂ ಹೆದರುತ್ತಾರೆ.' ಹೀಗೆ ಅಜ್ಞಾನಿ ಮಿಥ್ಯಾ ದೃಷ್ಟಿ ಅಹಂಕಾರ ಮತ್ತು ಮಮತ್ವದಿಂದ ಭಕ್ಷ್ಯಾಭಕ್ಷ್ಯದ ವಿಚಾರವನ್ನು ಮಾಡದೆ ಇಂದ್ರಿಯ ವಿಷಯಗಳ ಪೋಷಣೆಯನ್ನು ಮಾಡುತ್ತಾರೆ. ಇಂಥಹ ಜೀವರುಗಳಿಗೆ ಮಹರ್ಷಿಗಳು ಏನು ಹೇಳುತ್ತಾರೆ ನೋಡಿರಿ.

ಚಾರಿತ್ರೇಣ ವಿನಾ ಜೀವಾಃ ಪೃಥಿವ್ಯಾಂ ಪಶವೋ ಮತಾಃ
ಅಸತ್ ಸದ್ವಸ್ತು ಭಕ್ಷಣೇನ, ಪಂಚೇಂದ್ರಿಯಪ್ರಪೋಷಣಾತ್ ||

ಪ್ರಶ್ನೋತ್ತರಮಾಣಿಕ್ಯಮಾಲಾ.

ಯಾವ ಮಿಥ್ಯಾದೃಷ್ಟಿಗಳು ಈ ಲೋಕದಲ್ಲಿ ಭಕ್ಷ್ಯ ಅಭಕ್ಷ್ಯದ ವಿಚಾರವನ್ನು ಮಾಡದೆ ಇಂದ್ರಿಯಗಳ ಪೋಷಣೆಯನ್ನು ಮಾಡುತ್ತಾ ರೆಯೋ ಅವರು ಪಶುಗಳೆಂದು ಹೇಳಲ್ಪಡುತ್ತಾರೆ. ಏಕಂದರೆ ಅವರಿಗೆ ಚಾರಿತ್ರವಿಲ್ಲ. ಅವರು ತಮ್ಮ ಅವಗುಣವನ್ನು ಮುಚ್ಚುವುದಕ್ಕೋಸ್ಕರ ವಾಗಿ ಬೇರೆ ಗುಣವಂತರ ನಿಂದೆಯನ್ನು ಮಾಡಿ ಸಮಾಧಾನವನ್ನು ಪಡೆಯುತ್ತಾರೆ. ಅಶುಭ ಪರಿಣಾಮ ಮತ್ತು ಆರ್ತಧ್ಯಾನದಿಂದ ನವೀನ ಕರ್ಮಗಳನ್ನು ಕಟ್ಟಿಕೊಳ್ಳುತ್ತಾರೆ. ಇಂಥಹ ಮಿಥ್ಯಾದೃಷ್ಟಿ ಜೀವರುಗ ಳನ್ನು ನೋಡಿ ಸಮ್ಯಗ್‌ದೃಷ್ಟಿ ಜ್ಞಾನಿಗಳು ಅವರನ್ನು ದುರ್ಮಾರ್ಗದಿಂದ ಬಿಡಿಸಿ ಸನ್ಮಾರ್ಗದಲ್ಲಿ ತರಲಿಕ್ಕೆ ಪ್ರಯತ್ನ ಮಾಡುತ್ತಾರೆ. ಅವರಿಗೆ ಈ ಪ್ರಕಾರ ಉಪದೇಶ ಕೊಡುತ್ತಾರೆ.

' ಎಲೇ ಜೀವಾತ್ಮನೇ ! ಈ ಕುಧರ್ಮವು ಕುಗತಿಗೆ ಕಾರಣವಾಗಿದೆ. ಈ ನಿನ್ನ ದುರ್ಭಾವನೆಯು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ದುಃಖಕ್ಕೆ ಕಾರಣವಾಗಿದೆ. ಇದನ್ನು ತಿಳಿದು ನೀನು ಕೂಡಲೇ ಕುಮಾರ್ಗವನ್ನು ಬಿಡಬೇಕು. ಮತ್ತು ಇಹ ಪರಲೋಕದಲ್ಲಿ ನಿನ್ನ ಹಿತವನ್ನು ಕೊಡುವ ಮಾರ್ದವ ಧರ್ಮವನ್ನು ಅಂಗೀಕರಿಸಬೇಕು. ಅದರಿಂದ ನಿನ್ನ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳಬೇಕು. ಇದು ಅತ್ಯಂತ ದಯಾಳುವಾದ ಜಿನೇಶ್ವರನ ವಾಕ್ಯವಿದೆ.

ಈ ಉಪದೇಶವನ್ನು ಕೇಳಿ ಮಿಥ್ಯಾದೃಷ್ಟಿ ಭದ್ರನಾಗಿದ್ದರೆ ಆತ್ಮಕಲ್ಯಾಣವನ್ನು ಮಾಡಿಕೊಳ್ಳುತ್ತಾನೆ. ಅಭದ್ರನಾಗಿದ್ದರೆ ತನ್ನ ದುರಭಿಮಾನವನ್ನು ಬಿಡುವುದಿಲ್ಲ. ಆದರೂ ವಿದ್ವಾಂಸರು ಅವರ ಮೇಲೆ ರಾಗದ್ವೇಷವನ್ನು ಮಾಡದೆ ಶಮಭಾವವನ್ನಿಡುತ್ತಾರೆ. ಆ ಜ್ಞಾನೀ ಸಾಧುಗಳು ತಮ್ಮ ಉಪಕಾರ ವೃತ್ತಿಯನ್ನು ಬಿಡುವುದಿಲ್ಲ. ದುಷ್ಟರು ತನ್ನ ದುಷ್ಟತೆಯಿಂದ ವರ್ತಿಸಿದರೂ ಸಾಧು ಸಜ್ಜನರು ಅವರ ಮೇಲೆ ಉಪಕಾರವನ್ನೇ ಮಾಡುತ್ತಾರೆ. ಅಪಕಾರ ಬುದ್ಧಿಯನ್ನಿಡುವುದಿಲ್ಲ. ಆ ಸಾಧುಗಳು ಹೇಗಿರುತ್ತಾರೆಂಬ ವಿಷಯವನ್ನು ಶುಭಾಷಿತಕಾರರು ಹೀಗೆ ಹೇಳುತ್ತಾರೆ.

ವಿಕೃತಿಂ ನೈವ ಗಚ್ಛಂತಿ ದುಷ್ಟಸಂಗೇನ ಸಾಧವಃ ।
ಆವೇಷ್ಟಿತೋ ಮಹಾಸರ್ಪೈಶ್ಚಂದನಂ ಕಿಂ ವಿಷಾಯತೇ ॥

ಸ. ಭಾಷಿತಾವಲಿ.

ಯಾವ ವಿದ್ವಾಂಸರು ಎಲ್ಲರ ಮೇಲೆ ಉಪಕಾರ ಮಾಡುವ ಸ್ವಭಾವದವರಾಗಿರುತ್ತಾರೆಯೋ ಅವರು ತಮ್ಮ ಸ್ವಭಾವವನ್ನು ಎಂದೂ ಬಿಡುವುದಿಲ್ಲ. ಸುಗಂಧದಿಂದ ಮೋಹಿತವಾದ ಸರ್ಪವು ಚಂದನದ ಮರವನ್ನು ವೇಷ್ಟಿಸಿದರೂ ಚಂದನವು ವಿಷವಾಗುವುದಿಲ್ಲ. ಅದು ತನ್ನ ಸುಗಂಧ ಸ್ವಭಾವವನ್ನು ಬಿಡುವುದಿಲ್ಲ. ಅದೇ ಪ್ರಕಾರ ಸಜ್ಜನರು, ಸತ್ಪುರುಷರು ದುಷ್ಟರ ಸಂಸರ್ಗದಿಂದ ದುಷ್ಟರಾಗುವುದಿಲ್ಲ. ತಮ್ಮ ಸದ್ಗುಣಗಳನ್ನು

ಬಿಡುವುದಿಲ್ಲ, ಸಮ್ಯಗ್ಜ್ಞಾನೀ ಸದ್ಗುಣಶಾಲಿಗಳು ತಮ್ಮ ಗುಣವೆಂಬ ಶೃಂಗಾರದಿಂದ ಅಲಂಕೃತರಾಗಿರುತ್ತಾರೆ, ಅವರ ಸದ್ಗುಣಗಳ ಸುಗಂಧವು ಎಲ್ಲಾ ಕಡೆಗಳಲ್ಲಿ ವ್ಯಾಪ್ತವಾಗಿ ಅವರ ಕೀರ್ತಿ ಲೋಕದಲ್ಲಿ ಹಬ್ಬುತ್ತದೆ ಅವರ ಕೀರ್ತಿಯು ಎಲ್ಲರನ್ನು ಆಕರ್ಷಿಸುತ್ತದೆ.

ಒಂದಾನೊಂದು ಸಾರಿ ಸ್ವರ್ಗದಲ್ಲಿ ದೇವೇಂದ್ರನ ಸಭೆಯಲ್ಲಿ ವಾರ್ತಾಲಾಪ ನಡೆಯುತ್ತಿರುವಾಗ ಒಬ್ಬ ದೇವನು ಪ್ರಶ್ನೆ ಮಾಡಿದನು. ಈ ಭೂಲೋಕದಲ್ಲಿ ಸಮ್ಯಗ್ಜ್ಞಾನಿ ಸದ್ಗುಣಿಯು ಯಾರು ? ಆಗ " ಜಯಕುಮಾರನು ಸಮ್ಯಗ್ಜ್ಞಾನಿಯಾಗಿದ್ದಾನೆಂದು " ಉತ್ತರ ದೊರೆಯಿತು. ಆಗ ಅವನ ಗುಣಗಳ ಪರೀಕ್ಷೆಯನ್ನು ಮಾಡುವುದಕ್ಕೋಸ್ಕರವಾಗಿ ಒಬ್ಬ ದೇವನು ಭಯಂಕರ ವಿಕಾರರೂಪವನ್ನು ಧಾರಣೆ ಮಾಡಿ ಜಯಕುಮಾರನಿದ್ದಲ್ಲಿಗೆ ಬಂದನು. ಮತ್ತು ಅಲ್ಲಿ ಅನೇಕ ವಿಧವಾಗಿ ಘೋರ ಉಪಸರ್ಗವನ್ನು ಕೊಡಲಾರಂಭಿಸಿದನು. ಎಷ್ಟು ಉಪಸರ್ಗವನ್ನು ಕೊಟ್ಟರೂ ಅವನು ತನ್ನ ಸ್ವಭಾವದಿಂದ ಚ್ಯುತನಾಗಲಿಲ್ಲ. ಯಾಕಂದರೆ—

**ಉದಯೇ ಸವಿತಾ ರಕ್ತೋ ರಕ್ತಶ್ಚಾಸ್ತಮನೇ ತಥಾ ।**
**ಸಂಪತ್ತೌ ಚ ವಿಪತ್ತೌ ಚ ಸಾಧೂನಾಮೇಕರೂಪತಾ ॥**

ಸುಭಾಷಿತಾವಲಿ.

ಸೂರ್ಯನು ಉದಯ ಕಾಲದಲ್ಲಿ ಮತ್ತು ಅಸ್ತ ಕಾಲದಲ್ಲಿ ಕೆಂಪಾಗಿರುತ್ತಾನೆ. ಅದರೆ ಸಜ್ಜನರು ಸಂಪತ್ತು ಮತ್ತು ವಿಪತ್ತಿಯ ಕಾಲದಲ್ಲಿ ಏಕರೂಪದಲ್ಲಿ ಇರುತ್ತಾರೆ. ಅವರಿಗೆ ಹರ್ಷ ವಿಷಾದಗಳಾಗುವುದಿಲ್ಲ. ಸುಖ ದುಃಖಗಳಲ್ಲಿ ಅವರ ಪರಿಣಾಮವು ಸುಖದುಃಖಗಳ ರೂಪದಲ್ಲಿ ಪರಿಣಮಿಸದೆ ಅವರು ಯಾವಾಗಲೂ ಆನಂದ ರೂಪದಲ್ಲಿಯೇ ಇರುತ್ತಾರೆ. ಇದೇ ಪ್ರಕಾರ ಆ ಸಮ್ಯಗ್ಜ್ಞಾನಿಯು ಏಕರೂಪನಾಗಿಯೇ ಅವಿಚಲನಾಗಿದ್ದ. ಇದನ್ನು ನೋಡಿದ ಆ ದೇವನು ಪ್ರಸನ್ನನಾಗಿ ಅವನನ್ನು ಸ್ತುತಿಸಿದನು. ತನ್ನ ನಿಜರೂಪವನ್ನು ಪ್ರಕಟಿಸಿ ' ನಿಮ್ಮ ಸಮ್ಯಗ್

ಜ್ಞಾನವು ಸ್ತುತ್ಯವಾಗಿದೆ. ನಿಮ್ಮ ಗುಣಗಳಿಂದ ಆಕೃಷ್ಟನಾಗಿ ನಾನು ಸ್ವರ್ಗದಿಂದ ಇಲ್ಲಿಯ ವರೆಗೆ ಬಂದಿದ್ದೇನೆ." ಎಂದು ಅನೇಕ ವಿಧದಿಂದ ಸ್ತುತಿಸಿದನು.

**ಗುಣಾಃ ಕುರ್ವಂತಿ ದೂತತ್ವಂ ದೂರೇಪಿ ವಸತಾಂ ಸತಾಂ ।**
**ಕೇತಕೀ ಗಂಧಮಾಘ್ರಾಯ ಸ್ವಯಮಾಯಾಂತಿ ಷಟ್ಪದಾಃ ॥**

ಸುಭಾಷಿತಾವಲಿ.

ಯಾವ ಪ್ರಕಾರವಾಗಿ ಕೇದಗೆಯ ಸುಗಂಧಕ್ಕೆ ಲುಬ್ಧರಾಗಿ ಭ್ರಮರ ಗಳು ತನ್ನಷ್ಟಕ್ಕೆ ತಾನೇ ಬರುತ್ತವೆಯೋ ಅದೇ ಪ್ರಕಾರವಾಗಿ ಸಜ್ಜನರ ಗುಣಗಳಿಂದ ಆಕೃಷ್ಟರಾಗಿ ಭಕ್ತರು ತನ್ನಷ್ಟಕ್ಕೆ ತಾನೇ ಅವರ ಕಡೆ ಬರುತ್ತಾರೆ.

ಈ ಪ್ರಕಾರ ಆ ದೇವನು ಜಯಕುಮಾರನ ಸ್ತುತಿ ಮಾಡಿ "ನನ್ನನ್ನು ಆಗತ್ಯ ಬಿದ್ದಾಗ ಸ್ಮರಿಸಿಕೊಳ್ಳಬೇಕು; ಆ ಸಮಯದಲ್ಲಿ ಸೇವೆಗೆ ಸಿದ್ಧ ನಾಗಿರುವೆನು." ಎಂದು ಹೇಳಿ ಸ್ವರ್ಗಲೋಕಕ್ಕೆ ಹೊರಟು ಹೋದನು. ಭವ್ಯರೇ ನೋಡಿರಿ. ಸಮ್ಯಗ್ಜ್ಞಾನೀ ಸತ್ಪುರುಷರು ತಮ್ಮ ಜ್ಞಾನದಿಂದ ತಾವು ತಮ್ಮನ್ನು ಉದ್ಧರಿಸಿಕೊಳ್ಳುತ್ತಾರೆ. ಮತ್ತು ಇತರರನ್ನು ಉದ್ಧರಿಸುವ ಮಾರ್ಗವನ್ನು ಉಪದೇಶಿಸಿ ಅವರ ಕಲ್ಯಾಣವನ್ನು ಮಾಡುತ್ತಾರೆ. ಭೇದ ಜ್ಞಾನಿಗಳು ಸ್ವಪರ ಕಲ್ಯಾಣಕ್ಕೆ ಕಾರಣರಾಗಿರುತ್ತಾರೆ. ಅವರು ಭವ್ಯರಿಗೆ ಉಪಕಾರವನ್ನು ಮಾಡಿ ತನ್ನ ಮತ್ತು ಇತರರ ಕಲ್ಯಾಣವನ್ನು ಮಾಡು ತ್ತಾರೆ. ಆದುದರಿಂದ ನೀವೂ ಅವರಂತೆಯೇ ಆತ್ಮಕಲ್ಯಾಣವನ್ನು ಮಾಡಿ ಕೊಳ್ಳಿರಿ. ಇದು ಆಚಾರ್ಯರ ವಚನವಾಗಿದೆ.

ಆತ್ಮಕಲ್ಯಾಣದ ಸಾಧನಗಳು ಯಾವುವು? ತಮ್ಮ ದುರ್ಗುಣಗಳು ಯಾವುವೆಂದು ಜ್ಞಾನಿಯು ಯಾವಾಗಲೂ ವಿಚಾರ ಮಾಡುತ್ತಿರುತ್ತಾನೆ. ಅನಾದಿ ಕಾಲದಿಂದ ಈ ಜೀವನು ಮಿಥ್ಯಾ ಪರಿಣಾಮದಿಂದ ಜಡರೂಪ ವಾದ ಇಂದ್ರಿಯ ಸುಖಗಳನ್ನೇ ತನ್ನ ಸುಖವೆಂದು ತಿಳಿದು ಈ ವಿಷಯ

ದಲ್ಲಿ ಅಹಂಕಾರ ಮಮಕಾರವನ್ನು ಮಾಡುತ್ತಾ ಅನಂತ ಕರ್ಮಗಳನ್ನು ಕಟ್ಟಿಕೊಳ್ಳುತ್ತಾನೆ. ಆದರಿಂದ ಧುಃಖಿಯಾಗಿದ್ದಾನೆ. ಈ ದುಃಖದಿಂದ ಬಿಡುಗಡೆ ಮಾಡಲಿಕ್ಕೆ ಧರ್ಮವಲ್ಲದೆ ಬೇರೆ ಯಾರೂ ಸಮರ್ಥರಿಲ್ಲ. ಈ ಅಜ್ಞಾನಿ ಮಿಥ್ಯಾದೃಷ್ಟಿಯೂ ಸುಖವನ್ನು ಬಯಸುತ್ತಾನೆ, ಆದರೆ ಸುಖದ ಸಾಧನೆಗಳನ್ನು ಕೂಡಿಸಲು ಪ್ರಯತ್ನಿಸುವುದಿಲ್ಲ. ಸುಖವನ್ನು ನಾಶ ಮಾಡುವ ಪಾಪಸಂಚಯವನ್ನು ಮಾಡಲು ಮಾತ್ರ ಪ್ರಯತ್ನಪೂರ್ವಕ ತತ್ಪರನಾಗಿರುತ್ತಾನೆ. ಅವನಿಗೆ ಸುಖವು ಹೇಗೆ ಲಭಿಸುವುದು ?

ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।
ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥

ಆತ್ಮಾನುಶಾಸನ.

ಸಂಸಾರದಲ್ಲಿ ಪ್ರಾಣಿಗಳು ಪುಣ್ಯದ ಫಲವಾದ ಸುಖವನ್ನು ಅಪೇಕ್ಷಿಸುತ್ತಾರೆ. ಪುಣ್ಯವನ್ನು ಅಪೇಕ್ಷಿಸುವುದಿಲ್ಲ. ಪಾಪದ ಫಲವಾದ ದುಃಖವನ್ನು ಅಪೇಕ್ಷಿಸುವುದಿಲ್ಲ. ಆದರೆ ಪಾಪವನ್ನು ಮಾತ್ರ ಬಹಳ ಆಸಕ್ತಿಯಿಂದ ಮಾಡುತ್ತಾರೆ. ಹೀಗಿರುವಾಗ ಸುಖವು ದೊರೆಯಲು ಹೇಗೆ ಸಾಧ್ಯ ! ಆದುದರಿಂದ ಸುಖದ ಇಚ್ಛೆಯನ್ನು ಸಫಲಗೊಳಿಸುವ, ಪ್ರಯತ್ನದಿಂದ ಪಾಪವನ್ನು ನಾಶ ಮಾಡಿಸುವ, ಆತ್ಮೋನ್ನತಿಗೆ ಸಾಧನವಾದ, ಪರಂಪರೆಯಿಂದ ಮುಕ್ತಿ ಸುಖವನ್ನು ಕೊಡುವ ಮಾರ್ದವ ಧರ್ಮವನ್ನು ಧಾರಣೆ ಮಾಡಿ ನೀವು ಸುಖಿಗಳಾಗಿರಿ. ಈ ಪ್ರಕಾರದ ಸದ್ಗುರುಗಳ ಉಪದೇಶವನ್ನು ಸ್ವೀಕರಿಸದೆ ಬಹಿರಾತ್ಮ ಬುದ್ಧಿಯಿಂದ ಕೂಡಿದ ಅಜ್ಞಾನೀ ಜೀವರು ದುಃಖಿಗಳಾಗಿದ್ದಾರೆ. ಆದುದರಿಂದ ನೀವು ಇದನ್ನು ನಂಬಿ ತನ್ನ ಕಲ್ಯಾಣವನ್ನು ಮಾಡಿಕೊಳ್ಳಬೇಕು.

ತ್ರಿವಿಧ ಆತಮಾ ಜಾನಕೇ ತಜ ಬಹಿರಾತಮ ಭಾವ ।
ಅಂತರಾತಮಾ ಹೋಯಕರ, ಪರಮಾತಮಕೋಧ್ಯಾವ ॥

ಸ್ವಾನುಭವದರ್ಪಣ.

ಎಲೇ ಜೀವಾತ್ಮನೇ, ನೀನು ಬಹಿರಾತ್ಮ ಬುದ್ಧಿಯನ್ನು ಬಿಟ್ಟು ಅಂತರಾತ್ಮನಲ್ಲಿ ಲೀನನಾಗಿ ಪರಮಾತ್ಮನಾಗಲು ಪ್ರಯತ್ನಿಸಬೇಕು. ಆ ಪ್ರಯತ್ನವನ್ನು ಮಾಡದೆ ನಾನಾ ಪ್ರಕಾರದ ಅಜ್ಞಾನಮೂಲಕ ತಪಶ್ಚರ್ಯೆ ಮತ್ತು ಕಾಯಕ್ಲೇಶಗಳನ್ನು ಮಾಡಿಯೂ ದುಃಖಕ್ಕೇನೆಯೇ ಪಾತ್ರನಾಗಿದ್ದಿಯೇ. ಆದುದರಿಂದಲೇ ಗ್ರಂಥಕಾರರು ಹೇಳಿದ್ದಾರೆ.

**ಜ್ಞಾನವಿನಾ ಬಹುಕಷ್ಟಕರ ಮಿಲೇ ನ ನಿರ್ಮಲ ಜ್ಞಾನ**
**ಸರ್ವಕರ್ಮ ಮುಕ್ತಿ ಚಹೋ, ಧರೋ ಜ್ಞಾನಕೋ ಧ್ಯಾನ ||**

ಸಮಯಸಾರ.

ಎಲೇ ಆತ್ಮನೇ ! ಜ್ಞಾನವಿಲ್ಲದೆ ನೀನು ಬಹಳ ಕಷ್ಟವನ್ನು ಅನುಭವಿಸುತ್ತಿದ್ದಿಯೇ, ಇದರಿಂದ ನಿನಗೆ ನಿರ್ಮಲ ಜ್ಞಾನವು ಪ್ರಾಪ್ತಿಯಾಗಲಿಲ್ಲ. ಒಂದು ವೇಳೆ ಸರ್ವಸುಖವನ್ನು ಕೊಡುವ ಮುಕ್ತಿಯು ಬೇಕಾದರೆ ಅಥವಾ ಕರ್ಮದಿಂದ ಮುಕ್ತಿಯನ್ನು ಪಡೆಯಬೇಕೆಂಬ ಅಪೇಕ್ಷೆ ಇದ್ದರೆ ನೀನು ಸಮಗ್ಜ್ಞಾನವನ್ನು ಧರಿಸಬೇಕು. ಆದರಿಂದ ಇಚ್ಛಿತ ಸುಖವು ಲಭಿಸುವುದು.

**ಸದಾ ಜ್ಞಾನಮೆ ಲೀನಹೋ ಪ್ರತಿಕ್ಷಣ ಧರ ಸಂತೋಷ ।**
**ಐಕ್ಯಭಾವ ಚಿಸಸಮಯಹೋ ಖುಲೇ ಜ್ಞಾನಕಾ ಕೋಷ ||**

ಸಮಯಸಾರ

ಹೇ ಭವ್ಯಾತ್ಮನ್, ಸಮ್ಯಗ್‌ಜ್ಞಾನದಲ್ಲಿ ಲೀನನಾಗಿ ಆತ್ಮಸ್ವರೂಪದ ಅನುಭವಾಮೃತವನ್ನು ಪಾನ ಮಾಡು, ಅಲ್ಲಿಯೇ ಸಂತುಷ್ಟನಾಗಿರು, ಹಾಗಲ್ಲದೆ ಆತ್ಮಕಲ್ಯಾಣಕ್ಕೆ ಬೇರೆ ಯಾವ ಉಪಾಯವೂ ಇಲ್ಲ. ಆತ್ಮಧ್ಯಾನಿಗಳು ಹೇಗಿರುತ್ತಾರೆಂಬ ವಿಷಯವನ್ನು ಮಹಾಕವಿ ರತ್ನಾಕರನು ತನ್ನ ಶತಕತ್ರಯದಲ್ಲಿ ಹೀಗೆ ಹೇಳಿದ್ದಾನೆ.



ಶ್ರೀ ಚಾರಿತ್ರಚಕ್ರವರ್ತಿ ಆಚಾರ್ಯ ಶಾಂತಿಸಾಗರ ಸ್ವಾಮಿಗಳು

ಸುಡಿ ಕಿರಿದಪ್ಪುದೂಟದೊಳರೋಚಕಮಪ್ಪುದು ಬಾಹ್ಯಗೋಷ್ಠಿಯೋಳ್
ಸಿಡಿಮಿಡಿಯಪ್ಪುದಂತೆ ಬಹಿರಂಗದ ನೋಟಕೆ ಕಣ್ಗಳೊಲ್ಲವಾ
ಕಡುಪಿನ ಕಾಲ್ಗಳಾಟವಡಕಕ್ಕೊಳಗಪ್ಪುದು ಬುದ್ಧಿ ಮುಕ್ತಿಯಂ
ತುಡುಕುತಮಿರ್ಪುದಲ್ತೆ ಪರಮಾತ್ಮರತಂಗಪರಾಜಿತೇಶ್ವರಾ ॥

ಶತಕತ್ರ್ಯ೦.

ಪರಮಾತ್ಮನ ಸುಖದಲ್ಲಿ ಯಾರಿಗೆ ಅಭಿರುಚಿ ಇದೆಯೋ ಅವರಿಗೆ ವ್ಯವಹಾರದ ಮಾತುಕತೆಗಳಲ್ಲಿ ಪ್ರೀತಿ ಇರುವುದಿಲ್ಲ. ಭೋಜನದ ವಿಷಯದಲ್ಲಿ ಅರುಚಿ ಇರುತ್ತದೆ. ಬಾಹ್ಯ ವಿಷಯಗಳಲ್ಲಿ ಉತ್ಸಾಹವಿರುವುದಿಲ್ಲ. ಸಭೆಯಲ್ಲಿ ಆಗುವ ವಿವಿಧ ಕಾರ್ಯಗಳಲ್ಲಿ ಅವರು ಉಪೇಕ್ಷಿತರಾಗಿರುತ್ತಾರೆ. ವ್ಯವಹಾರದ ಸಮಸ್ತ ಕಾರ್ಯಗಳಲ್ಲಿ ಅವರು ಉತ್ಸಾಹಹೀನರಾಗಿರುತ್ತಾರೆ. ತನ್ನ ಆತ್ಮಕಾರ್ಯದಲ್ಲಿ ಉತ್ಸುಕರಾಗಿರುತ್ತಾರೆ. ಇಂಥಹ ಆತ್ಮರಸಿಕರಿಗೆ ನಿಶ್ಚಯ ಮಾರ್ದವಧರ್ಮದ ಪ್ರಾಪ್ತಿಯಾಗುತ್ತದೆ. ಅವರು ತಮ್ಮ ಸ್ವಭಾವ ಧರ್ಮದಲ್ಲಿದ್ದು ಭವಭವಗಳಲ್ಲಿ ಉದಯಕ್ಕೆ ಬರುವ ಶುಭಾಶುಭ ಕರ್ಮಗಳನ್ನು ತಿಳಿದುಕೊಂಡು ಅವುಗಳ ವಿಷಯದಲ್ಲಿ ರಾಗದ್ವೇಷವನ್ನು ಮಾಡದೆ ಕರ್ಮಫಲವನ್ನು ಉಪೇಕ್ಷೆವೃತ್ತಿಯಿಂದ ಅನುಭವಿಸುತ್ತಾರೆ, ಇಂಥಹ ಜ್ಞಾನಿಗಳು ಸಂಸಾರದಲ್ಲಿದ್ದರೂ ವಿರಾಗಿ ಸಾಧುಗಳಂತಿರುತ್ತಾರೆ.

ಇಂಥಹ ಒಬ್ಬ ಸಮ್ಯಗ್‌ದೃಷ್ಟಿಯು ಮಲಗಿದವನು ನಿದ್ದೆಯಿಂದೆದ್ದು ಕಣ್ಣು ತೆರೆದು ನೋಡುತ್ತಿರಲು ಅಲ್ಲಿ ಅನೇಕ ದೇವತೆಗಳು ಕೈಯಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಕೂತಿದ್ದರು. ನೀವು ಯಾರು ? ಇಲ್ಲಿ ಏಕೆ ಬಂದಿರೆಂದು ಕೇಳಲು ಆ ದೇವತೆಗಳು ಕರ ಜೋಡಿಸಿ ಹಿಗೆಂದರು, ಭದ್ರ ! ನಾವು ದೇವತೆಗಳು. ತಮ್ಮ ಪುಣ್ಯದ ಪ್ರಭಾವದಿಂದ, ತಮಗೆ ಯಾವ ಸಂಕಟವೂ ಬರಬಾರದೆಂಬುದಾಗಿ ತಮ್ಮನ್ನು ರಕ್ಷಿಸುವುದಕ್ಕೋಸ್ಕರವಾಗಿ

ನಾವು ಇಲ್ಲಿ ಬಂದಿದ್ದೇವೆ. ” ಇದನ್ನು ಕೇಳಿದ ಸಮ್ಯಗ್‌ದೃಷ್ಟಿಯು ಆ ದೇವತೆಗಳಿಗೆ “ ನೀವು ಇಲ್ಲಿಂದ ಹೊರಟು ಹೋಗಬೇಕು. ನನ್ನ ರಕ್ಷಣೆಗೆ ಯಾರ ಅಗತ್ಯವೂ ಇಲ್ಲ. ನನ್ನ ರಕ್ಷಣೆಯನ್ನು ನಾನೇ ಮಾಡುವೆನು ” ಎಂದು ಹೇಳಿದನು.

ದೇವತೆಗಳು ‘ ನಾವು ಇನ್ನೂ ೧೨ ವರ್ಷಗಳ ವರೆಗೆ ಹೋಗುವುದಿಲ್ಲ. ಮುಂದೆ ನೀವು ಇರಲು ಹೇಳಿದರೂ ಇರಲಾರೆವು. ೧೨ ವರ್ಷಗಳಲ್ಲಿ ನಮ್ಮ ಸೇವೆಯ ಅವಧಿಯು ಮುಗಿಯುತ್ತದೆ. ’ ಎಂದರು.

ಇದನ್ನು ಕೇಳಿದ ಸಮ್ಯಗ್‌ದೃಷ್ಟಿಯು ಅದೇ ಸಮಯದಲ್ಲಿ ಸಂಸಾರದಿಂದ ವಿರಕ್ತನಾಗಿ, ಸಮಸ್ತ ಪರಿಗ್ರಹಗಳನ್ನು ತ್ಯಜಿಸಿ ಜಿನದೀಕ್ಷೆಯನ್ನು ತೆಗೆದುಕೊಂಡನು. ಘೋರ ತಪಶ್ಚರ್ಯೆಯನ್ನು ಮಾಡಿ, ಕರ್ಮ ನಿರ್ಜರೆಯ ಫಲವಾಗಿ ಆತ್ಮಸಿದ್ಧಿಯನ್ನು ಮಾಡಿಕೊಂಡನು. ಆದುದರಿಂದ ಭವ್ಯಾತ್ಮರೇ ! ನೀವೂ ಇಂಥಹ ಭಾವನೆಯನ್ನು ಮಾಡಿ ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಜಿನೇಶ್ವರನ ವಚನವಾಗಿದೆ.

ಎಲೇ ಜೀವಾತ್ಮನೇ ! ಜನ್ಮ ಮರಣದಿಂದ ಬಿಡುಗಡೆಯಾಗಲು ಸಮ್ಯಗ್ದರ್ಶನವಲ್ಲದೆ ಬೇರೆ ಉಪಾಯವಿಲ್ಲ.. ಆದುದರಿಂದ ಸಮ್ಯಗ್ದರ್ಶನವನ್ನು ಧರಿಸಬೇಕು. ಸಂಸಾರದಲ್ಲಿದ್ದರೂ ಸಮ್ಯಗ್‌ದೃಷ್ಟಿಗಳು ಲಘು ಜಿನರಂತಿದ್ದಾರೆ. ಚಾರಿತ್ರ ಮೋಹನೀಯ ಕರ್ಮದ ನಿಮಿತ್ತದಿಂದ ಸಂಸಾರ ಸುಖವನ್ನು ಅನುಭವಿಸುತ್ತಿದ್ದರೂ ಅವರಲ್ಲಿ ಆಸಕ್ತಿ ಇರುವುದಿಲ್ಲ. ಉದಾಸೀನರಾಗಿ ಭೋಗಿಸುತ್ತಾರೆ. ಆದುದರಿಂದ ಅವರನ್ನು ನಿಷ್ಕರ್ಮಿ ಎಂದು ಹೇಳುತ್ತಾರೆ. ಅವರು ಮುಂದಿನ ಸಂಸಾರಕ್ಕೆ ಬೀಜರೂಪವಾದ ಕರ್ಮವನ್ನು ಕಟ್ಟಿಕೊಳ್ಳುವುದಿಲ್ಲ. ತನ್ನಲ್ಲಿರುವ ಕರ್ಮಗಳ ನಿರ್ಜರೆಯನ್ನು ಮಾಡುತ್ತಾರೆ. ಅವರು ಹೆಚ್ಚಿನಿಂದ ಹೆಚ್ಚು ಅರ್ಧ ಪುದ್ಗಲ ಪರಾವರ್ತನ ಕಾಲದವರೆಗೆ ಸಂಸಾರದಲ್ಲಿರುವರು. ನಂತರ ಅವನು ಅವಶ್ಯವಾಗಿ ಮುಕ್ತಿಗೆ

ಹೋಗುವರೆಂಬ ಸಿದ್ಧಾಂತವಿದೆ. ಸಮ್ಯಗ್‌ದೃಷ್ಟಿಯಾದವನಿಗೆ ದುರ್ಗತಿಯ ಬಂಧವಾಗುವುದಿಲ್ಲ.

**ನಾರಕ ಪಶು ತಿಯ ಷಂಢ ವಿಕಲತ್ರಯ**
**ಪ್ರಕೃತಿನಕೋ ಹ್ವೈ ಕಟಾಕಟೀ**
**ಸಂಯಮ ಧರ ನ ಸಕೇ ಪೈ**
**ಸಂಯಮ ಧಾರನಕೀ ಉರ ಚಟಾಚಟೀ ॥**

ಅಧ್ಯಾತ್ಮ ಪದಸಂಗ್ರಹ

ಸಮ್ಯಗ್‌ದೃಷ್ಟಿ ಜೀವನು ಪ್ರಥಮ ನರಕವನ್ನು ಬಿಟ್ಟು ಇತರ ಆರು ನರಕಗಳಲ್ಲಿ ಹೋಗುವುದಿಲ್ಲ. ಯಾವ ಸ್ತ್ರೀ ಪರ್ಯಾಯದಲ್ಲಿಯೂ ಜನ್ಮ ವೆತ್ತುವುದಿಲ್ಲ. ವಿಕಲತ್ರಯ ಮತ್ತು ತಿರ್ಯಂಚಗತಿಯಲ್ಲಿಯೂ ಜನ್ಮವೆತ್ತು ವುದಿಲ್ಲ. ಹೀಗೆ ಸಮ್ಯಗ್‌ದರ್ಶನದ ಮಹಿಮೆ ಇದೆ. ಸಮ್ಯಗ್‌ದೃಷ್ಟಿಗೆ ಜೀವನ್ಮುಕ್ತನೆಂದು ಹೇಳಿದ್ದಾರೆ. ಇಂಥಹ ಸಮ್ಯಗ್‌ದೃಷ್ಟಿಗೂ ಕರ್ಮದ ಉದಯವು ಬರುತ್ತದೆ. ಆದರೆ ಅವನು ಕರ್ಮದ ಉದಯುವನ್ನು ತನ್ನ ಸ್ವರೂಪವೆಂದು ತಿಳಿಯುವುದಿಲ್ಲ. ಸಮ್ಯಕ್ತ್ವದ ಬಲದಿಂದ ಆ ಕರ್ಮಗ ಳನ್ನು ನಾಶಗೊಳಿಸುತ್ತಾನೆ.

**ಮಿಥ್ಯಾವಾದಂ ಮಲಮಪನುದನ್ ಸಪ್ತಭಂಗೀತರಂಗೈ-**
**ರ್ವಾಗಂಭೋಧಿರ್ಭುವನಮಖಿಲಂ ದೇವ ಪರ್ಯೇತಿ ಯಸ್ತೇ,**
**ತಸ್ಯಾ ವೃತ್ತಿಂ ಸಪದಿ ವಿಬುಧಾಶ್ಚೇತಸೈವಾಚಲೇನ**
**ವ್ಯಾತನ್ವಂತಃ ಸ್ಥಿರಮಮೃತಯಾ ಸೇವಯಾ ತೃಪ್ನುವಂತಿ ॥**

ಏಕೀಭಾವಸ್ತೋತ್ರ.

ಕರ್ಮವು ಉದಯದಲ್ಲಿ ಬರುತ್ತಿರುವಾಗ ಜ್ಞಾನಿಗಳು ಆ ಕರ್ಮ ವನ್ನು ಹೇಗೆ ನಾಶ ಮಾಡುತ್ತಾರೆಂಬ ವಿಷಯವನ್ನು ಹೇಳುತ್ತಾರೆ. ' ಎಲೇ ಭಗವಂತನೇ ! ಸಪ್ತಭಂಗಿ ಎಂಬ ತರಂಗಗಳಿಂದ ಮಿಥ್ಯಾವಾದ ವೆಂಬ ಕಸಕಡ್ಡಿಗಳನ್ನು ನಾಶ ಮಾಡಲಿಕ್ಕೆ ಸಮರ್ಥವಾದ ನಿನ್ನ ದಿವ್ಯ

ಧ್ವನಿ ಎಂಬ ಸಮುದ್ರವು ಎಲ್ಲೆಡೆಯಲ್ಲಿಯೂ ವ್ಯಾಪ್ತವಾಗಿದೆ. ಅಂಥಹ ನಿನ್ನ ವಚನವೆಂಬ ಸಮುದ್ರವನ್ನು ಅಂತಃಕರಣವೆಂಬ ಪರ್ವತದಿಂದ ಮಥನ ಮಾಡಿ ವಿದ್ವಾಂಸರು ಜ್ಞಾನವೆಂಬ ಅಮೃತವನ್ನು ತೆಗೆದು ಅದರ ಆಸ್ವಾದನೆಯನ್ನು ಅನಂತಕಾಲದ ವರೆಗೆ ಮಾಡಿಕೊಂಡು ತೃಪ್ತಿ ಪಡೆಯುತ್ತಾರೆ. ಇಂಥಹ ಜ್ಞಾನಿಗಳ ಮೇಲೆ ಬಂದ ಆಪತ್ತಿಗಳು ತನ್ನಿಂದ ತಾನೇ ನಷ್ಟವಾಗುತ್ತವೆ. ಯಾವ ಪ್ರಕಾರವಾಗಿ ಭೂಮಿಯಲ್ಲಿ ಒಡೆದ ಚೆಂಡುವು ತನ್ನಷ್ಟಕ್ಕೆ ತಾನೇ ಮೇಲೆ ಹಾರುತ್ತದೆಯೋ ಹಾಗೆಯೇ ಸಮ್ಯಗ್‌ದೃಷ್ಟಿಗಳ ಮೇಲೆ ಬಂದ ಸಂಕಟಗಳು ನಷ್ಟವಾಗುತ್ತವೆ. ಸಂಕಟ ಬಂದರೆ ಅವರು ಕಷ್ಟ ಪಡುವುದಿಲ್ಲ. ವೈಭವ ಬಂದರೆ ಆನಂದ ಪಡುವುದಿಲ್ಲ, ಅವರಿಗೆ ಸುಖದುಃಖವಾಗುವುದೇ ಇಲ್ಲ. ಯಾಕಂದರೆ ಅವರ ಸಪ್ತಪ್ರಕೃತಿಗಳ ಕ್ಷಯೋಪಶಮವಾಗಿರುತ್ತದೆ. ಅನಂತಾಬಂಧೀ ಕ್ರೋಧ, ಮಾನ, ಮಾಯಾ, ಲೋಭ, ಸಮ್ಯಕ್ತ್ವ, ಮಿಥ್ಯಾತ್ವ, ಸಮ್ಯಕ್‌ಮಿಥ್ಯಾತ್ವ, ಈ ಪ್ರಕಾರ ಏಳು ಪ್ರಕೃತಿಗಳ ಕ್ಷಯೋಪಶಮದಿಂದಲೇ ಅವರಿಗೆ ಸಮ್ಯಕ್ತ್ವವಾಗಿರುತ್ತದೆ.

ದುಃಖಮೇ ತಡಪೇ ನಹೀ ಸುಖಮೆ ಫೂಲೇ ನಹೀ,
ಪ್ರಾಣ ಜಾಯೆ ಮಗರ ಧರ್ಮ ಭೂಲೇ ನಹೀ ॥

ಧರ್ಮಪ್ರವೇಶ.

ಸಮ್ಯಗ್‌ದೃಷ್ಟಿಗಳು ದುಃಖದಲ್ಲಿ ಕಾತರರಾಗುವುದಿಲ್ಲ. ಸುಖದಲ್ಲಿ ಆನಂದತುಂದಿಲರಾಗುವುದಿಲ್ಲ. ಪ್ರಾಣ ಹೋದರೂ ಧರ್ಮವನ್ನು ಮರೆಯುವುದಿಲ್ಲ. ಸುಖದುಃಖಗಳಿಂದ ಏನೂ ಆಗುವುದಿಲ್ಲ. ತನ್ನ ಪರೀಕ್ಷೆಯನ್ನು ಮಾಡುವುದಕ್ಕೋಸ್ಕರವಾಗಿ ಕರ್ಮವು ಉದಯಕ್ಕೆ ಬರುತ್ತದೆಂದು ಅವರು ತಿಳಿಯುತ್ತಾರೆ. ಆ ಪರೀಕ್ಷೆಯಲ್ಲಿ ಉತ್ತೀರ್ಣರಾಗುತ್ತಾರೆ. ಒಬ್ಬ ಗರ್ವಿಷ್ಠನಾದ ಮಿಥ್ಯಾದೃಷ್ಟಿಯು ತನ್ನ ಕುವಿದ್ಯೆಯ ಸಹಾಯದಿಂದ ಸಾಧಾರಣ ಜನರನ್ನು ತನ್ನ ಮೋಹ ಜಾಲಕ್ಕೊಳಗೊಳಿಸಿದನು. ಮತ್ತು ತನ್ನ ವಿದ್ಯೆಗೆ " ನನ್ನ ದರ್ಶನಕ್ಕೆ ಬರದವರು ಯಾರಾದರೂ ಉಳಿದರೋ " ? ಎಂದ

ಕೇಳಿದನು. ಆಗ ವಿದ್ಯಾ ದೇವತೆಯು ಉತ್ತರಿಸಿತು. ಯಾರೂ ಉಳಿಯು ಲಿಲ್ಲ. ಎಲ್ಲರೂ ಬಂದರು. ಆದರೆ ಜೈನ ಧರ್ಮದ ಅಭಿಮಾನವನ್ನು ಇಟ್ಟುಕೊಂಡಿರುವ ಒಬ್ಬ ಸಮ್ಯಗ್ದೃಷ್ಟೀ ಶ್ರೇಷ್ಠಿಯು ದರ್ಶನಕ್ಕೆ ಬರ ಲಿಲ್ಲ ಅವನು ತನ್ನ ಧರ್ಮವನ್ನು ಬಿಟ್ಟು ಬೇರೆ ಧರ್ಮವನ್ನು ತುಚ್ಛ ವೆಂದು ತಿಳಿಯುತ್ತಾನೆ ಮತ್ತು ಪರಧರ್ಮಿಯರಿಗೆ ನಮಸ್ಕಾರ ಮಾಡು ವುದಿಲ್ಲ. ಅವರ ಸ್ತುತಿಯನ್ನು ಎಂದೂ ಮಾಡುವುದಿಲ್ಲ, ತನ್ನ ಸ್ವಧರ್ಮ ಸ್ವರತ್ನತ್ರಯ, ಸ್ವಸ್ವರೂಪವೇ ಆತ್ಮರೂಪವಾಗಿದೆ. ಅದರಲ್ಲಿ ಸ್ಥಿರವಾಗಿರು ವುದೇ ಆತ್ಮನ ದರ್ಮವಾಗಿದೆ.

ದರ್ಶನ ಜ್ಞಾನಚಾರಿತ್ರ ಕಹೇ ಹೇತು ವ್ಯವಹಾರ,
ನಿಶ್ಚಯಸೇ ತೀನೋ ನಹೀ, ಜ್ಞಾಯಕ ಬುದ್ಧ ನಿಹಾರ

ಸಮಯಸಾರ

ನಿಶ್ಚಯ ದೃಷ್ಟಿಯಿಂದ ವಿಚಾರ ಮಾಡಿದರೆ ಆತ್ಮನು ರತ್ನತ್ರಯ ಸ್ವರೂಪನಾಗಿರುತ್ತಾನೆ. ಬಾಲ ಬುದ್ಧಿಗಳಿಗೆ ಜ್ಞಾನ ಮಾಡುವುದಕ್ಕೋ ಸ್ಕರವಾಗಿ ಆತ್ಮನನ್ನು ಮೂರು ವಿಧವಾಗಿ ವರ್ಣನೆ ಮಾಡಿದ್ದಾರೆ. ಸಮ್ಯಗ್ದೃಷ್ಟಿಗಳು ತನ್ನ ಸ್ವರೂಪದಲ್ಲಿರುವುದೇ ತನ್ನ ಧರ್ಮವೆಂದು ತಿಳಿಯುತ್ತಾರೆ. ತನ್ನ ಆತ್ಮನ ವಿಷಯದಲ್ಲಿ ಅವರಿಗೆ ಪೂರ್ಣ ಅಭಿಮಾನ ವಿರುತ್ತದೆ. ಆತ್ಮಜ್ಞಾನಿಗಳಿಗೆ ಈ ಅಭಿಮಾನವು ಇರಲೇ ಬೇಕು. ದುರಭಿ ಮಾನವನ್ನು ಬಿಡಿರಿ. ಸ್ವಾಭಿಮಾನವನ್ನು ಬಿಡಬೇಡಿ.

ವಾದಿರಾಜ ಸೂರಿಗಳು ಹೀಗೆ ಹೇಳುತ್ತಾರೆ.

ಪಾಷಾಣಾತ್ಮಾ ತದಿತರಸಮಃ ಕೇವಲಂ ರತ್ನಮೂರ್ತಿ,
ರ್ಮಾನಸ್ತಂಭೋ ಭವತಿ ಚ ಪರಸ್ಮಾದ್ದೃಶೋ ರತ್ನವರ್ಗಃ ।
ದೃಷ್ಟಿ ಪ್ರಾಪ್ತೋ ಹರತಿ ಸ ಕಥಂ ಮಾನರೋಗಂ ನರಾಣಾಂ
ಪ್ರತ್ಯಾಸತ್ತಿರ್ಯದಿ ನ ಭವತಸ್ತಸ್ಯ ತಚ್ಛಕ್ತಿ ಹೇತುಃ ॥

ಏಕೀಭಾವಸ್ತೋತ್ರ,

ಭಗವನ್ ! ತಮ್ಮ ಎದುರಿನಲ್ಲಿರುವ ಮಾನಸ್ತಂಭವೂ ಕಲ್ಲಿನಿಂದ ನಿರ್ಮಿತವಾಗಿದ್ದರೂ ಅದು ತಮ್ಮ ಸಾನ್ನಿಧ್ಯವನ್ನು ಹೊಂದಿರುವುದರಿಂದ ಬೇರೆಯವರ ಮಾನವೆಂಬ ರೋಗವನ್ನು ದೂರ ಮಾಡುತ್ತದೆ. ಹೀಗಿರುವಾಗ ಯಾರ ಅಂತಃಕರಣದಲ್ಲಿ ನೀವೇ ವಾಸ ಮಾಡಿಕೊಂಡು ಇರುತ್ತಿರೋ ಅವರ ಕ್ರೋಧ ಮಾನಾದಿ ಕಷಾಯಗಳು ಹೇಗೆ ಉಳಿಯಲು ಸಾಧ್ಯ ? ತನ್ನಷ್ಟಕ್ಕೆ ತಾನೇ ನಷ್ಟವಾಗುವವು. ಹೀಗೆ ಸಮ್ಯಗ್‌ದೃಷ್ಟಿ ಜೀವನು ರತ್ನತ್ರಯರೂಪವಾದ ಮಾರ್ದವ ಧರ್ಮದಲ್ಲಿ ಸ್ಥಿರನಾಗಿರುತ್ತಾನೆ.

ಇದನ್ನು ಕೇಳಿದ ಆ ಮಿಥ್ಯಾದೃಷ್ಟಿಯು ಅಹಂಕಾರದಿಂದ ತನ್ನ ಕುವಿದ್ಯೆಯ ಸಾಮರ್ಥ್ಯದಿಂದ ಆ ಸಮ್ಯಗ್‌ದೃಷ್ಟಿಯು ಧ್ಯಾನಸ್ಥನಾಗಿರುವಾಗ ಅವನ ಮೇಲೆ ಕಲ್ಲು ಮಣ್ಣುಗಳನ್ನು ಹಾಕಿ ಮುಚ್ಚಿ ಉಸಿರುಕಟ್ಟಿ ಸಾಯುವಂತೆ ಮಾಡಿದನು. ಹೀಗೆ ದುಷ್ಟಬುದ್ಧಿಯಿಂದ ಅವನಿಗೆ ತೊಂದರೆ ಪಡಿಸಿದನು. ಆದರೆ ಆ ಸಮ್ಯಗ್‌ದೃಷ್ಟಿಯು ಸ್ವಲ್ಪವೂ ಗಾಬರಿಯಾಗದೆ ಮಾರ್ದವ ಧರ್ಮದಲ್ಲಿ ಸ್ಥಿರವಾಗಿದ್ದು ಅತ್ಯಂತ ಭಕ್ತಿಯಿಂದ ಭಗವಂತನನ್ನು ಸ್ತುತಿಸಿದನು.

ಆಸ್ತಾಂ ತವಸ್ತವನಮಸ್ತಸಮಸ್ತದೋಷಂ
ತ್ವತ್ಸಂಕಥಾಪಿ ಜಗತಾಂ ದುರಿತಾನಿ ಹಂತಿ,
ದೂರೇ ಸಹಸ್ರಕಿರಣಃ ಕುರುತೇ ಪ್ರಭೈವ
ಪದ್ಮಾಕರೇಷು ಜಲಜಾನಿ ವಿಕಾಸಭಾಂಜಿ ||

ಭಕ್ತಾಮರ ಸ್ತೋತ್ರ.

ಯಾವ ಪ್ರಕಾರ ಸೂರ್ಯನು ದೂರವಾಗಿದ್ದರೂ ಅವನ ಕಿರಣಗಳೇ ಸರೋವರದಲ್ಲಿರುವ ಕಮಲಗಳನ್ನು ಅರಳಿಸುವುದಕ್ಕೆ ಸಮರ್ಥವಾಗಿವೆಯೋ ಹಾಗೆಯೇ ಭಗವನ್ ! ತಮ್ಮ ನಿರ್ದೋಷವಾದ ಸ್ತವನವಂತಿರಲಿ, ತಮ್ಮ ನಾಮ ಸ್ಮರಣೆಯೂ ಅಥವಾ ತಮ್ಮ ವಿಷಯದ ವಿಚಾರವೂ ಭವ್ಯ ಪ್ರಾಣಿಗಳ ಪಾಪವನ್ನು ನಾಶ ಮಾಡುತ್ತದೆ.

ಈ ಪ್ರಕಾರದ ಸ್ತೋತ್ರದ ಪ್ರಭಾವದಿಂದ ಚಕ್ರೇಶ್ವರಿಯು ಪ್ರಸನ್ನಳಾಗಿ ಹೀಗೆಂದಳು. ಭವ್ಯ ! ಮಾರ್ದವಧರ್ಮದ ಪ್ರಭಾವದಿಂದ ನಿನ್ನ ಕಲ್ಯಾಣವಾಗುವುದು. '' ಹೀಗೆಂದು ಅವನನ್ನು ರತ್ನಮಯ ಸಿಂಹಾಸನದಲ್ಲಿ ಕುಳ್ಳಿರಿಸಿ ಸ್ತುತಿಸಿದಳು. ಆ ಪಾಖಂಡಿ ಸಾಧುವಿನ ಮತ್ತು ಅವನ ಭಕ್ತರ ಮನೆಗಳನ್ನು ಕಲ್ಲುಮಣ್ಣುಗಳಿಂದ ತುಂಬಿಸಿದಳು. ಆಗ ಆ ಭಕ್ತರು ತ್ರಸ್ತರಾಗಿ ಆ ಮಿಥ್ಯಾಗುರು ಮತ್ತು ಮಿಥ್ಯಾದೇವಿಯನ್ನು ವಿವಿಧ ರೀತಿಯಿಂದ ಪ್ರಾರ್ಥಿಸಿದರು. ಆದರೆ ಯಾವ ಧರ್ಮವೂ, ಯಾವ ಗುರುವೂ ಯಾವ ದೇವದೇವತೆಯೂ ಅವರನ್ನು ರಕ್ಷಿಸಲಾಗಲಿಲ್ಲ. ಅವರಿಗೆ ಆಗ ಪಶ್ಚಾತ್ತಾಪವಾಯಿತು. ಆಗ ಅವರು ಹೇಳತೊಡಗಿದರು.

ನಹಿ ತ್ರಾತಾ ನಹಿ ತ್ರಾತಾ ನ ಹಿ ತ್ರಾತಾ ಜಗತ್ರಯೇ
ವೀತರಾಗಾತ್ಪರೋ ದೇವೋ ನ ಭೂತೋ ನ ಭವಿಷ್ಯತಿ ||

ಇದನ್ನು ತಿಳಿದು ಆ ಪಾಖಂಡಿ ಸಾಧುವು ಈ ಧರ್ಮದೆದುರಿನಲ್ಲಿ ನನ್ನ ಮಾಯಾ ಜಾಲವು ನಡೆಯಲು ಸಾಧ್ಯವಿಲ್ಲವೆಂದು ಹೇಳಿ ಅಲ್ಲಿಂದ ಮೆಲ್ಲನೆ ಹೊರಟು ಹೋದನು.

ಆದುದರಿಂದ ಭವ್ಯರೇ ! ತಮ್ಮ ಉದ್ಧಾರವನ್ನು ಮಾಡುವ ಈ ಮಾರ್ದವ ಧರ್ಮವನ್ನು ಧರಿಸಿ ತಮ್ಮ ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಹೀಗೆ ಆಚಾರ್ಯರ ಉಪದೇಶವಾಗಿದೆ.

ಹೀಗೆ ಯಥಾಶಕ್ತಿ ಆತ್ಮಕಲ್ಯಾಣವನ್ನು ಮಾಡುವ ಉತ್ತಮಮಾರ್ದವ ಧರ್ಮವನ್ನು ವರ್ಣಿಸಲಾಗಿದೆ.

ಉತ್ತಮ ಮಾರ್ದವಧರ್ಮ ಸಮಾಪ್ತ

# ಉತ್ತಮಾರ್ಜವಧರ್ಮಾಯ ನಮಃ.

ಮಂಗಲಾಚರಣ.

**ಕೇವಲಕನ್ಯೆ ವಾಙ್ಮಯಗಂಗೆ ಜಗದಂಬೆ ಅಘನಾಶ ಹಮಾರೇ**
**ಸತ್ಯ ಸ್ವರೂಪೇ ಮಂಗಲರೂಪೇ ಮನಮಂದಿರಮೆ ತಿಷ್ಠ ಹಮಾರೇ**

ಜಿನವಾಣೀಸಂಗ್ರಹ.

ಕೇವಲೀ ಭಗವಂತನಿಗೆ ಕನ್ಯೆಯೋಪಾದಿಯಲ್ಲಿರತಕ್ಕ ಮಹಾವೀರ ಭಗವಂತನ ಮುಖಕಮಲದಿಂದ ಹೊರಟ, ಏಕಾದಶಾಂಗ, ಹದಿನಾಲ್ಕು ಪೂರ್ವರೂಪದಲ್ಲಿರುವ, ಗಂಗೆಯಂತಿರುವ, ಜಗತ್ತಿನ ತಾಯಿ, ಸತ್ಯ ಸ್ವರೂಪಿಯಾದ, ಮಂಗಲಸ್ವರೂಪೆಯಾದ ಜಿನವಾಣಿ ತಾಯಿಯು ನಮ್ಮ ಹೃದಯ ಮಂದಿರದಲ್ಲಿ ಸದಾ ನೆಲಸಲಿ, ಮತ್ತು ರಕ್ಷಣೆಯನ್ನು ಮಾಡಲಿ.

## ಉತ್ತಮ ಆರ್ಜವ.

**ಯೋಗಸ್ಯಾವಕ್ರತಾ ಆರ್ಜವಂ.**

ಸರ್ವಾರ್ಥಸಿದ್ಧಿ

ಧರ್ಮದ ಉತ್ತಮವಾದ ಲಕ್ಷಣವು ಆರ್ಜವ ರೂಪವಾಗಿದೆ. ಆರ್ಜವವೆಂದರೆ ಸರಲತೆ, ಮನವಚನ ಕಾಯಗಳ ಕುಟಿಲತೆಯ ಅಭಾವವೇ ಆರ್ಜವವೆಂದು ಹೇಳಲಾಗಿದೆ. ಆರ್ಜವ ಧರ್ಮ ಪಾಪವನ್ನು ನಾಶ ಮಾಡುತ್ತದೆ. ಆದುದರಿಂದ ಕುಟಿಲತೆಯನ್ನು ಬಿಟ್ಟು ಕರ್ಮದ ನಾಶವನ್ನು ಮಾಡುವ ಆರ್ಜವ ಧರ್ಮವನ್ನು ಸ್ವೀಕರಿಸಿರಿ. ಕುಟಿಲತೆ ಅಂದರೆ ಮಾಯಾಚಾರವು ಅಶುಭ ಕರ್ಮದ ಬಂಧವನ್ನು ಮಾಡುವ ಸಾಧನವಾಗಿದೆ. ಅಲ್ಲದೆ ಮಾಯಾಚಾರಿಯು ಲೋಕದಲ್ಲಿ ನಿಂದೆಯಾಗುತ್ತದೆ. ಆದುದರಿಂದ ಆತ್ಮಹಿತವನ್ನು ಬಯಸುವವರು ಆರ್ಜವ ಧರ್ಮದ ಅವಲಂಬನೆಯನ್ನು ಮಾಡಬೇಕು.

ಯಾವ ಪ್ರಕಾರವಾಗಿ ನಾವು ಮನಸ್ಸಿನಲ್ಲಿ ವಿಚಾರ ಮಾಡುತ್ತೇವೆಯೋ ಅದೇ ಪ್ರಕಾರ ಮತ್ತೊಬ್ಬರಿಗೆ ವಚನದಿಂದ ಹೇಳುವುದು, ವಚನದಲ್ಲಿ ಹೇಳಿದ ಹಾಗೆಯೇ ಕಾಯದಿಂದ ಮಾಡುವುದು ಇದೇ ಸುಖದ ಸಂಚಯವನ್ನು ಮಾಡುವ ಆರ್ಜವಧರ್ಮವೆಂದು ತಿಳಿಯಬೇಕು.

ಯಥಾ ಚಿತ್ತಂ ತಥಾ ವಾಚೋ
ಯಥಾ ವಾಚಸ್ತಥಾ ಕ್ರಿಯಾ
ಚಿತ್ತೇ ವಾಚಿ ಕ್ರಿಯಾಯಾಂ ಚ
ಸಾಧೂನಾಮೇಕರೂಪತಾ ||

ಸುಭಾಷಿತರತ್ನಾವಲಿ.

ಸಾಧು ಸತ್ಪುರುಷರು ಅಥವಾ ಸಜ್ಜನರು ಮನಸ್ಸಿನಲ್ಲಿ ಏನು ವಿಚಾರ ಮಾಡುತ್ತಾರೆಯೋ ಅದನ್ನೇ ಮಾತಿನಿಂದ ನುಡಿಯುತ್ತಾರೆ. ಮಾತಿನಿಂದ ಏನು ನುಡಿಯುತ್ತಾರೆಯೋ ಅದನ್ನೇ ಕ್ರಿಯೆಯಿಂದ ಮಾಡಿ ತೋರಿಸುತ್ತಾರೆ. ಅವರ ಚಿತ್ತದಲ್ಲಿಯೇ ಈ ಆರ್ಜವಧರ್ಮವು ಇರಲು ಯೋಗ್ಯವಾಗಿದೆ. ಆದ್ದರಿಂದ ಭವ್ಯರೇ ! ಮನಸ್ಸಿನಿಂದ ಈ ಮಾಯಾಚಾರವನ್ನು ತೆಗೆದು ಹಾಕಿರಿ. ಮಾಯಾಚಾರಿಯ ವ್ರತ, ಶೀಲ, ಸಂಯಮ, ಜಪ, ತಪವೆಲ್ಲವೂ ನಿರರ್ಥಕ. ಆರ್ಜವ ಧರ್ಮವು ಮುಕ್ತಿಯ ಮಾರ್ಗದಲ್ಲಿ ಸಹಾಯಕವಾಗಿರುತ್ತದೆ. ಎಲ್ಲಿ ಕಪಟದ ಮಾತಿಲ್ಲವೋ ಅಲ್ಲಿಯೇ ಆರ್ಜವ ಧರ್ಮವು ಪ್ರಕಟವಾಗುತ್ತದೆ. ಈ ಆರ್ಜವ ಧರ್ಮವು ದರ್ಶನ ಜ್ಞಾನ ಚಾರಿತ್ರದ ಅಖಂಡ ರೂಪವಾಗಿದೆ. ಅಖಂಡಸುಖದ ಭಂಡಾರವಾಗಿದೆ. ಆರ್ಜವ ಧರ್ಮದ ಪ್ರಭಾವದಿಂದ ಅತೀಂದ್ರಿಯ ಅವಿನಾಶೀ ಸುಖದ ಪ್ರಾಪ್ತಿಯಾಗುತ್ತದೆ. ಸಂಸಾರ ಸಮುದ್ರವನ್ನು ದಾಟುವುದಕ್ಕೆ ಈ ಆರ್ಜವಧರ್ಮವು ಹಡಗಿನಂತಿದೆ. ಎಲ್ಲಿ ಮಾಯಾಚಾರವಿರುತ್ತದೆಯೋ ಅಲ್ಲಿ ಪ್ರೀತಿಯ ಭಂಗವಾಗುತ್ತದೆ. ಹೇಗೆ ಪಾದರಸದಿಂದ ಹಾಲು ಕೆಡುತ್ತದೆಯೋ ಹಾಗೆಯೇ ಮಾಯಾಚಾರದಿಂದ ಈ ಆತ್ಮನ ಪರಿಣಾಮವು ಕೆಡುತ್ತದೆ.

ಮಾಯಾಚಾರಿಯೂ ತನ್ನ ಕಪಟವನ್ನು ಎಷ್ಟು ಮರೆಮಾಚಲು ಪ್ರಯತ್ನ ಮಾಡಿದರೂ ಅದು ಪ್ರಕಟವಾಗದೆ ಇರುವುದಿಲ್ಲ. ಇಂಥಹ ಕಪಟ ಮಾಯಾ ಚಾರ ಮಾಡಿ ತನ್ನ ಪರಿಣಾಮವನ್ನು ಕೆಡಿಸಿಕೊಳ್ಳಬೇಡಿರಿ. ಮಾಯಾ ಚಾರಿಗಳು ತನ್ನ ಪರಿಣಾಮವನ್ನು ಕೆಡಿಸಿಕೊಳ್ಳುತ್ತಾರೆ. ಆದುದರಿಂದ ಅವರು ಘಾತಕಿಗಳೆಂದು ಹೇಳಲ್ಪಡುತ್ತಾರೆ.

ಅತಿಮಲಿನೇ ಕರ್ತವ್ಯೇ,
ಖಲಾನಾ ಮತೀಹ ನಿಪುಣಾ ಧೀಃ
ತಿಮಿರೇ ಹಿ ಕೌಶಿಕಾನಾಂ
ರೂಪಂ ಪ್ರತಿಪದ್ಯತೇ ದೃಷ್ಟಿಃ ॥

ಸುಭಾಷಿತರತ್ನಾವಲಿ.

ಯಾವ ಪ್ರಕಾರವಾಗಿ ಗೂಗೆಯ ಕಣ್ಣಿನಲ್ಲಿ ಕತ್ತಲೆಯಲ್ಲಿ ನೋಡುವ ಶಕ್ತಿ ಇರುತ್ತದೆಯೋ ಹಾಗೆಯೇ ದುಷ್ಟರಿಗೆ ತಮ್ಮ ಕಪಟವ್ಯವಹಾರದಲ್ಲಿ ವಿಶೇಷ ನೈಪುಣ್ಯವಿರುತ್ತದೆ. ತನ್ನಂತೆಯೇ ಇತರರೂ ಎಂದು ತಿಳಿಯುವ ನಿರ್ದೋಷರಾದ ಸಜ್ಜನರ ಮೇಲೆಯೂ ಅವರು ದೋಷಾರೋಪಣೆಯನ್ನು ಮಾಡುತ್ತಾರೆ. ಮತ್ತು ಲೋಕವಲ್ಲಿ ಅವರ ನಿಂದೆಯನ್ನು ಮಾಡುತ್ತಾ ಅವರ ಅಪಕೀರ್ತಿಯನ್ನು ಮಾಡುತ್ತಿರುತ್ತಾರೆ. ಇದು ದುಷ್ಟರ ಸ್ವಭಾ ವವೇ ಆಗಿದೆ.

ನ ವಿನಾ ಪರಿವಾದೇನ
ರಮತೇ ದುರ್ಜನೋ ಜನಃ,
ಕಾಕಃ ಸರ್ವ ರಸಾನ್ ಭುಂಕ್ತೇ
ವಿನಾಮೇಧ್ಯಂ ನ ತೃಷ್ಯತಿ ॥

ಸುಭಾಷಿತಾವಲಿ.

ಹೇಗೆ ಕಾಗೆಗೆ ಅನೇಕ ಮಿಷ್ಟ ಮಧುರ ಪದಾರ್ಥಗಳು ತಿನ್ನಲಿಕ್ಕೆ ಸಿಕ್ಕಿದರೂ ಅಮೇಧ್ಯ ಅಂದರೆ ಮಲವನ್ನು ಭಕ್ಷಣೆ ಮಾಡದೆ ಅದಕ್ಕೆ

ತೃಪ್ತಿಯಾಗುವುದಿಲ್ಲವೋ ಹಾಗೆಯೇ ದುಷ್ಟರಿಗೆ ಬೇರೆಯವರ ನಿಂದೆಯನ್ನು ಮಾಡದೆ ತೃಪ್ತಿಯೇ ಆಗುವುದಿಲ್ಲ. ದುಷ್ಟರ ಸ್ವಭಾವವೇ ಹೀಗಿದೆ. ಆದುದರಿಂದ ಭವ್ಯಾತ್ಮರೇ ! ವಿಚಾರ ಮಾಡಿರಿ. ನಿನಗೆ ಅನಂತ ಭವಗಳಲ್ಲಿ ಮನ ಇಂದ್ರಿಯದ ಪ್ರಾಪ್ತಿಯೇ ಆಗಲಿಲ್ಲ. ಮನವಿಲ್ಲದೇನೇ ಅನಂತ ಭವಗಳನ್ನು ಧಾರಣೆ ಮಾಡಿರುತ್ತಿಯೇ ಈಗ ಸ್ವಲ್ಪ ಪುಣ್ಯದ ಉದಯದಿಂದ ಮನಸ್ಸಿನ ಪ್ರಾಪ್ತಿಯಾಗಿದೆ.

ಕಬಹೂಂ ಪಂಚೇಂದ್ರಿಯ ಪಶುಭಯೇ
ಮನವಿನ ನಿಪಟ ಅಜ್ಞಾನೀ ಥಯೋ–
ಸಿಂಹಾದಿಕ ಸೈನೀ ಹೈ ಕೂತ
ನಿರ್ಬಲ ಪಶುಹನಿ ಖಾಯೇ ಭೊರ ||

ಛಹಢಾಲಾ.

ಆದುದರಿಂದ ಮನಸ್ಸಿನಲ್ಲಿ ಕುಟಿಲತೆಯನ್ನು ಬಿಡಿರಿ. ಅದನ್ನು ಸರಳವಾಗಿಟ್ಟುಕೊಳ್ಳಿರಿ. ಮನಸ್ಸಿನಲ್ಲಿ ಸ್ವಲ್ಪ ಕಪಟವಿದ್ದರೂ ಅದು ಆತ್ಮನ ಘಾತವನ್ನು ಮಾಡುತ್ತದೆ. ನೀನು ಪಂಚೇಂದ್ರಿಯನಾಗಿ ಹುಟ್ಟಿ ಮನವನ್ನು ಪ್ರಾಪ್ತ ಮಾಡಿಕೊಂಡಿದ್ದೀಯೇ ಮತ್ತು ಅದರಿಂದ ನಿರ್ಬಲ ಪ್ರಾಣಿಗಳ ಹಿಂಸೆಯನ್ನು ಮಾಡಿ ಪಾಪಬಂಧವನ್ನು ಮಾಡಿಕೊಂಡಿದ್ದೀಯೇ, ಈಗ ಪುಣ್ಯ ಮಾಡಿ ಮನುಷ್ಯನಾಗಿ ಹುಟ್ಟಿದ್ದೀ. ಆದುದರಿಂದ ಇಲ್ಲಿ ಮನವಚನ ಕಾಯ ವರ್ಗಣೆಗಳು ಪ್ರಾಪ್ತವಾಗಿವೆ. ಅದನ್ನು ಕೆಡಿಸಿಕೊಳ್ಳಬೇಡ.

ಮನ ಏವ ಮನುಷ್ಯಾಣಾಂ ಕಾರಣ ಬಂಧ ಮೋಕ್ಷಯೇ |
ಪರಿಣಾಮ ಮೇವಕಾರಣಮಾಹುಃ ಖಲು ಪುಣ್ಯಪಾಪಯಾ ಪ್ರಜ್ಞಾ

ನೀತಿಕಾರ.

ಮನಸ್ಸೇ ಈ ಮನುಷ್ಯನ ಬಂಧಕ್ಕೆ ಕಾರಣವಾಗಿದೆ. ಹಾಗೆಯೇ ಅದು ಮುಕ್ತಿಗೂ ಕಾರಣವಾಗಿದೆ. ಹೀಗೆ ಒಂದೆಡೆ ಗ್ರಂಥಕಾರರು ಹೇಳುತ್ತಾರೆ. ಆದುದರಿಂದ ನೀನು ನಿನ್ನ ಮನಸ್ಸನ್ನು ಸರಳವಾಗಿಟ್ಟುಕೊಳ್ಳ

ಬೇಕು. ಉತ್ತಮ ಆರ್ಜವ ಧರ್ಮವನ್ನು ನಿನ್ನ ಮನಸ್ಸಿನಲ್ಲಿ ಧರಿಸು. ಈ ಆರ್ಜವ ಧರ್ಮವು ಪಾಪದ ನಾಶವನ್ನು ಮಾಡುತ್ತದೆ. ಪುಣ್ಯದ ವೃದ್ಧಿಯನ್ನು ಮಾಡುತ್ತದೆ. ಸರಳ ವ್ಯವಹಾರವನ್ನು ಸೂಚಿಸುವ ಅದು ಧರ್ಮವಾಗಿದೆ. ಮುಕ್ತಿಯನ್ನು ಅದು ಕೊಡುತ್ತದೆ. ಅತೀಂದ್ರಿಯ ಸುಖವನ್ನು ಕೊಡುತ್ತದೆ. ಸರಳವಾದ ತಲವಾರಿನ ಕೊತ್ತಲದಲ್ಲಿ ಹೇಗೆ ಖಡ್ಗವು ಹೋಗುತ್ತದೆಯೋ ಅದೇ ಪ್ರಕಾರವಾಗಿ ಸರಳವಾದ ಮನಸ್ಸಿನಲ್ಲಿ ಆರ್ಜವ ಧರ್ಮವಿರುತ್ತದೆ. ನ್ಯಾಯನೀತಿಯಿಂದ ವರ್ತಿಸಿರಿ. ನಿಷ್ಕಪಟವೃತ್ತಿಯಿಂದ ಭದ್ರ ಪರಿಣಾಮವನ್ನಿಡಿರಿ. ಹೀಗೆ ವರ್ತಿಸುವವರಿಗೆ ಪಶುಗಳು ಸಹಾಯಕವಾಗುತ್ತವೆ.

**ಯಾಂತಿ ನ್ಯಾಯಪ್ರವೃತ್ತಸ್ಯ ತಿರ್ಯಂಚೋಪಿ ಸಹಾಯತಾಂ**
**ಅಪಂಥಾನಂತು ಗಚ್ಛಂತಂ ಸೋದರೋಪಿ ವಿಮುಂಚತಿ ||**

ಸುಭಾಷಿತರತ್ನಾವಲಿ.

ನೋಡಿ, ಒಂದು ಸಮಯದಲ್ಲಿ ಒಬ್ಬ ಜೀವನು ಕಪಟಭಾವದಿಂದ ಹೇಗೆ ಪಾಪಬಂಧವನ್ನು ಮಾಡಿಕೊಂಡನು. ಅದನ್ನು ಹೇಳುತ್ತೇನೆ.

ಒಬ್ಬ ಸಜ್ಜನ ಮನುಷ್ಯನೊಡನೆ ಒಬ್ಬ ದುಷ್ಟನು ಸ್ನೇಹವನ್ನು ಬೆಳೆಸಿದನು. ಆ ಸಜ್ಜನನು ಸರಳ ಬುದ್ಧಿಯಿಂದ ಇವನು ನನ್ನೊಡನೆ ನಿಜವಾಗಿಯೂ ಪ್ರೇಮ ಮಾಡುತ್ತಾನೆಂದು ತಿಳಿದುಕೊಂಡನು. ಅವನ ಮೇಲೆ ವಿಶ್ವಾಸವಿಟ್ಟನು. ಮತ್ತು ಅವನೊಡನೆ ಸರಳತೆಯಿಂದ ವ್ಯವಹಾರ ಮಾಡತೊಡಗಿದನು. ಕೆಲವು ದಿವಸಗಳ ನಂತರ ಆ ಕಪಟಿಯು ಅವನನ್ನು ಒಂದು ಕಾಡಿಗೆ ಕರಕೊಂಡು ಹೋದನು. ಅಲ್ಲಿ ಅವನಿಗೆ ' ನಾನು ಈಗ ಹಿಂದೆ ಬರುತ್ತೇನೆ. ಅದು ವರೆಗೆ ನೀನು ಇಲ್ಲಿ ಕೂಡುಕೋ " ಎಂದು ಹೇಳಿ ಹೊರಟು ಹೋದನು. ಆ ಸಜ್ಜನನು ಅಲ್ಲಿ ಒಬ್ಬನೇ ಕುಳಿತು ಕೊಂಡನು. ಸ್ವಲ್ಪ ಸಮಯದ ನಂತರ ಅವನಿಗೆ ಆಲಸ್ಯ ಬರಲು ಅಲ್ಲಿಯೇ ಮಲಗಿ

ಕೊಂಡನು, ಇಷ್ಟರಲ್ಲಿ ಆ ದುಷ್ಟನು ಬಂದು ಅವನು ಮಲಗಿ ನಿದ್ರೆ ಹೋಗಿದ್ದನ್ನು ಕಂಡು ತನ್ನ ಕಾರ್ಯವನ್ನು ಸಾಧಿಸಲು ಶಸ್ತ್ರವನ್ನು ಹೊರಗೆ ತೆಗೆದನು. ಶಸ್ತ್ರದಿಂದ ಅವನನ್ನು ಘಾತ ಮಾಡುವ ವಿಚಾರದಲ್ಲಿಯೇ ಇದ್ದ, ಇಷ್ಟರಲ್ಲಿ ಒಂದು ಸಿಂಹವು ಆ ಕಪಟಿಯ ಅನ್ಯಾಯ ವ್ಯವಹಾರ ವನ್ನು ನೋಡಿ ಅವನ ಮೇಲೆ ಆಕ್ರಮಿಸಿತು. ಆಗ ಆ ಕಪಟಿಯು ಸಿಂಹದ ಭಯದಿಂದ ಕೆಳಗೆ ಬಿದ್ದು ದುರ್ಧ್ಯಾನದಿಂದ ಸತ್ತು ತಿರ್ಯಂಚ ಯೋನಿ ಯಲ್ಲಿ ಜನ್ಮವೆತ್ತಿದನು. ತತ್ವಾರ್ಥಸೂತ್ರದಲ್ಲಿ ಮಾಯಾಚಾರ ಮಾಡಿದರೆ ತಿರ್ಯಂಚ ಗತಿಯು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ.

ಮಾಯಾ ತೈರ್ಯಗ್ಯೋನಸ್ಯ ।

ತತ್ವಾರ್ಥಸೂತ್ರ.

ಮೇಲಿನ ಉದಾಹರಣೆಯಲ್ಲಿ ಮಾಯಾಚಾರದಿಂದ ಬೇರೆಯವರ ಘಾತವಾಗಲಿಲ್ಲ. ತನ್ನದೇ ಘಾತ ಮಾಡಿಕೊಂಡನು. ಆ ಕಪಟೀ ಮನು ಷ್ಯನು ಇಹಲೋಕದಲ್ಲಿ ನಿಂದೆಗೆ ಪಾತ್ರನಾದನು. ಪರಲೋಕದಲ್ಲಿಯೂ ದುರ್ಗತಿಗೆ ಪಾತ್ರನಾದನು. ಆದರೆ ಆ ಸಜ್ಜನನು ‘ ನಾನು ಸರಳ ಪರಿ ಣಾಮವನ್ನಿಟ್ಟದ್ದರಿಂದ ಪಶುಗಳೂ ನಮಗೆ ಸಹಾಯಕರಾದರೆಂದು ತಿಳಿದು ಮುಂದೆಯೂ ಸರಳ ಪರಿಣಾಮದಲ್ಲಿಯೇ ಇರುವೆನೆಂದು ದೃಢ ಪ್ರತಿ ಜ್ಞನಾದನು.

ಆದುದರಿಂದ ಭವ್ಯರೇ ! ಮನಸ್ಸಿನ ಪರಿಣಾಮವನ್ನು ಸರಳವಾಗಿ ಡಿರಿ. ಮಾಯಾಚಾರೀ ಮನುಷ್ಯನು ತನ್ನ ಮತ್ತು ಇತರರ ಘಾತವನ್ನು ಮಾಡುತ್ತಾನೆ. ಮಾಯಾಚಾರಿಯು ಬಾಯಿಯಿಂದ ಬೆಲ್ಲದಂತಹ ಮಾತು ಗಳನ್ನು ಮಾತನಾಡುತ್ತಾನೆ. ಅತ್ಯಂತ ಪ್ರೇಮ ತೋರಿಸುತ್ತಾನೆ. ಅವನ ಕಪಟ ಸ್ವಭಾವವೇ ಹೀಗಿರುತ್ತದೆ. ಹೀಗೆ ಕಪಟದಿಂದ ವರ್ತಿಸುವುದರಲ್ಲಿಯೇ ಅವನು ಸುಖವೆಂದು ತಿಳಿಯುತ್ತಾನೆ. “ ಬೇರೆಯವರನ್ನು ಮೋಸ ಗೊಳಿಸುವುದರಲ್ಲಿ ನನ್ನಷ್ಟು ಚತುರರು ಯಾರೂ ಇಲ್ಲವೆಂದು ” ತನ್ನಲ್ಲಿ

ಕಾನೇ ಹಿಗ್ಗಿಕೊಳ್ಳುತ್ತಾನೆ. ತನ್ನನ್ನು ಧನ್ಯನಾಗಿ ತಿಳಿದುಕೊಳ್ಳುತ್ತಾನೆ, ಆದರೆ ಅಂಥಹವನಲ್ಲಿ ವಿಶ್ವಾಸವಿಡುವುದು ಯೋಗ್ಯವಲ್ಲ.

ದುರ್ಜನಃ ಪ್ರಿಯವಾದೀ ಚ ನೈತದ್ವಿಶ್ವಾಸಕಾರಣಂ ।
ಮಧು ತಿಷ್ಠತಿ ಜಿಹ್ವಾಗ್ರೇ ಹೃದಯೇತು ಹಲಾಹಲಂ ॥

ಸುಭಾಷಿತರತ್ನಾವಲಿ.

ಸಜ್ಜನರು ದುಷ್ಟರಲ್ಲಿ ವಿಶ್ವಾಸವಿಡುತ್ತಾರೆ. ಅವರ ಕಪಟ ವ್ಯವಹಾರವು ಇವರಿಗೆ ತಿಳಿಯುವುದಿಲ್ಲ. ಸಜ್ಜನರು ತನ್ನಂತೆಯೇ ಇತರರನ್ನು ತಿಳಿಯುತ್ತಾರೆ. ಆದರೆ ಕಪಟಿಗಳ ಹೃದಯದಲ್ಲಿ ತತ್ಕಾಲ ಪ್ರಾಣಹರಣವನ್ನು ಮಾಡುವ ವಿಷವು ತುಂಬಿರುತ್ತದೆ. ಆದುದರಿಂದ ಅವರು ವಿಶ್ವಾಸಕ್ಕೆ ಯೋಗ್ಯರಿಲ್ಲ. ಇದನ್ನು ತಿಳಿದು ಭವ್ಯರೇ ! ಪಂಚೇಂದ್ರಿಯಗಳನ್ನು ವಶಮಾಡಿ ಅವುಗಳನ್ನು ಸನ್ಮಾರ್ಗಕ್ಕೆ ಹಚ್ಚಿರಿ. ಸರಳ ವ್ಯವಹಾರವಿಡಿರಿ.

ಉಂಬನಿತಕ್ಕೆ ಕೊಟ್ಟು ಪಗೆಯೊಳ್ ಪಲವುಂ ತೆರದಿಂದ ಸೇವೆಯಂ
ಕೊಂಬ ವಿವೇಕಿಯಂತೆ ನಿರಸಾನ್ನಮನೇ ತನುವಿಂಗೆ ಜೋಕೆಯಿಂ
ತುಂಬ ಜಪಂತಪಂ ಪರಮ ಶಾಸ್ತ್ರರಹಸ್ಯದೊಳಾತ್ಮಕಾರ್ಯಮಂ
ಬೆಂಬಿಡದಾವಗಂ ನೆಗಳ್ವಂಗೆಣೆಯಾರಪರಾಜಿತೇಶ್ವರಾ ॥

ಅಪರಾಜಿತಶತಕ.

ಇಂದ್ರಿಯಗಳನ್ನು ಸನ್ಮಾರ್ಗದಕಡೆ ಹಚ್ಚಿ ಉಪಯೋಗ ಮಾಡಿಕೊಂಡರೆ ಪುಣ್ಯ ಸಂಚಯವಾಗುತ್ತದೆ. ಇಂದ್ರಿಯಗಳನ್ನು ವಶಮಾಡಿಕೊಳ್ಳದೆ ದುರ್ಮಾರ್ಗದ ಕಡೆಗೆ ಹಚ್ಚಿದರೆ ಪಾಪ ಬಂಧವಾಗುತ್ತದೆ. ಪುಣ್ಯ ಮತ್ತು ಪಾಪಕ್ಕೆ ಪರಿಣಾಮವೇ ಕಾರಣವಾಗಿರುತ್ತದೆ. ಆದುದರಿಂದ ವಿವೇಕಿಗಳು ಇಂದ್ರಿಯಗಳನ್ನು ಸನ್ಮಾರ್ಗಕ್ಕೆ ಹಚ್ಚುತ್ತಾರೆ. ಯಾವ ಪ್ರಕಾರವಾಗಿ ಒಬ್ಬ ಸೇವಕನಿಗೆ ಸಂಬಳ ಕೊಟ್ಟು ಅವನಕಡೆಯಿಂದ ಕೆಲಸ

ಮಾಡಿ ತೆಗೆದು ಕೊಳ್ಳಲಾಗುತ್ತದೆಯೋ ಅದೇ ಪ್ರಕಾರ ವಿವೇಕಿಗಳು ಪಂಚೇಂದ್ರಿಯ ಮತ್ತು ಮನಸ್ಸೆಂಬ ಸೇವಕರಿಗೆ ಸರಸ ಅಥವಾ ನೀರಸ ಅನ್ನಗಳನ್ನು ಕೊಟ್ಟ ಅವರಿಂದ ಆತ್ಮಕಲ್ಯಾಣದ ಕೆಲಸಗಳನ್ನು ತೆಗೆದು ಕೊಳ್ಳುತಾರೆ. ಮನವೇ ಪಾಪ ಪುಣ್ಯದ ಕಾರಣವಾಗಿದೆ. ಆದುದರಿಂದ ಮನಸ್ಸನ್ನು ಸರಳ ವಾಗಿಡಿರಿ. ಮನಸ್ಸು ಸರಳವಾಗಿದ್ದರೆ ಉತ್ತಮ ಆರ್ಜವ ವೆಂಬ ಅಮೃತವನ್ನಿಡಲು ಅದು ಯೋಗ್ಯವಾಗಿರುತ್ತದೆ, ಆದುದರಿಂದ ಪ್ರಯತ್ನ ಮಾಡಿ ಮನಸ್ಸನ್ನು ನಿರ್ಮಲವಾಗಿಡಿರಿ. ಮತ್ತು ಪುಣ್ಯಸಂಚಯ ಮಾಡಿಕೊಳ್ಳಿರಿ. ಪುಣ್ಯವು ಈ ಪ್ರಾಣಿಗಳಿಗೆ ಸುಖವನ್ನು ಕೊಡುತ್ತದೆ. ಮತ್ತು ಪಾಪವು ದುಃಖವನ್ನು ಕೊಡುತ್ತದೆ. ಸುಖವು ಎಲ್ಲರಿಗೂ ಬೇಕಾದ ವಸ್ತು, ಆ ಸುಖವು ಹೇಗೆ ಸಿಗುತ್ತದೆ ? ದಾನ, ಪೂಜೆ, ವ್ರತ, ಜಪತಪ, ಗಳನ್ನು ಸರಳ ಮನಸ್ಸಿನಿಂದ ಮಾಡಿರಿ. ಅದರಿಂದ ಆತ್ಮನಿಗೆ ಸುಖವಾ ಗುತ್ತದೆ. ಸುಖದುಃಖಗಳನ್ನು ಬೇರೆ ಯಾರೂ ಕೊಡುವುದಿಲ್ಲ. ಆದುದ ರಿಂದ ಭವ್ಯಾತ್ಮರೇ ! ಈ ಜನ್ಮವು ಪುಣ್ಯದಿಂದ ನಿಮಗೆ ಪ್ರಾಪ್ತವಾಗಿದೆ. ಅದನ್ನು ಸಾರ್ಥಕವನ್ನಾಗಿ ಮಾಡಿರಿ.

ಮಹತಾ ಪುಣ್ಯಪಣ್ಯೇನ ಕ್ರೀತೇಯಂ ಕಾಯ ನೌಸ್ತ್ವಯಾ,
ಪಾರಂ ದುಃಖೋದಧೇರ್ಗಂತುಂ ತರಯಾವನ್ನ ಭಿದ್ಯತೇ ||

ಎಲೇ ಜೀವನೇ ! ಪೂರ್ವಜನ್ಮದಲ್ಲಿ ಹೆಚ್ಚಾದ ಪುಣ್ಯ ಸಂಚಯ ವನ್ನು ಮಾಡಿ ಅಥವಾ ಪುಣ್ಯವೆಂಬ ಮೂಲ್ಯವನ್ನು ಕೊಟ್ಟು ಈ ಮನುಷ್ಯ ಶರೀರವೆಂಬ ಹಡಗವನ್ನು ನೀನು ಕ್ರಯಕ್ಕೆ ಪಡೆದು ಕೊಂಡಿರುತ್ತೀ. ಆದುದರಿಂದ ಈ ಶರೀರವೆಂಬ ಹಡಗು ಎಷ್ಟರವರೆಗೆ ಒಡೆಯುವುದಿಲ್ಲವೋ [ ಅಂದರೆ ಶರೀರವು ಎದುವರೆಗೆ ಜೀರ್ಣವಾಗುವುದಿಲ್ಲವೋ ] ಅದು ವರೆಗೆ ನೀನು ಈ ದುಃಖರೂಪವಾದ ಸಂಸಾರದಿಂದ ದಾಟ ಹೋಗಲು ಈ ಶರೀರದ ಸಹಾಯದಿಂದ ಪ್ರಯತ್ನ ಮಾಡು. ಈ ಪ್ರಯತ್ನದಿಂದ ನಿನ್ನ ಆತ್ಮಕಲ್ಯಾಣವಾಗುವುದು.

ಮನವಚನ ಕಾಯನೆಂಬ ತ್ರಿಕರಣಗಳನ್ನು ಸರಳವಾಗಿಟ್ಟುಕೊಳ್ಳಿರಿ ಇವುಗಳು ವಕ್ರವಾದಲ್ಲಿ ಅಶುಭ ಕರ್ಮದ ಬಂಧನಾಗುತ್ತದೆ. ಈ ಅಶುಭ ಕರ್ಮದ ಬೀಜವು ಅಂಕುರಿತವಾಗಿ ನಿನಗೆ ದುಃಖವನ್ನು ಕೊಡುತ್ತದೆ, ಆದುದರಿಂದ ಕಪಟವ್ಯವಹಾರವನ್ನು ಮಾಡಬೇಡ ಕಪಟ ವ್ಯವಹಾರ ದಿಂದ ಹೇಗೆ ಅಹಿತವಾಗುತ್ತದೆಂಬ ವಿಷಯುವನ್ನು ಈ ಕೆಳಗಿನ ಉದಾಹ ರಣೆಯಿಂದ ತಿಳಿಯಬಹುದು.

ಒಂದು ಸಾರಿ ಕಾಡಿನಲ್ಲಿ ಸಿಂಹದ ಗರ್ಜನೆಯನ್ನು ಕೇಳಿ ಎಲ್ಲಾ ಪಶುಗಳು ಭಯದಿಂದ " ಇವನು ನಮ್ಮ ದೊಡ್ಡ ವೈರಿ. ಇವನನ್ನು ನಾಶ ಮಾಡದೆ ನಮಗೆ ಸುಖ ದೊರೆಯಲಾರದೆಂದು ವಿಚಾರ ಮಾಡಿದವು. ಅವುಗಳಲ್ಲಿ ಒಂದು ವೃದ್ಧನಾದ ಗೂಗೆ ಇತ್ತು. ಅದು ಹೇಳಿತು. ' ನೀವು ಹೆದರ ಬೇಡಿರಿ. ನಾನು ಯುಕ್ತಿಯಿಂದ ಆ ಸಿಂಹವನ್ನು ಕೊಲ್ಲುವೆನು.

ಗೂಗೆಯು ಬಹಳ ಕಪಟಿಯಾಗಿರುತ್ತದೆ. ಅದು ಸಿಂಹದ ಸಮೀಪಕ್ಕೆ ಬಂತು. ಹೊರಗಿನಿಂದ ಬಹಳ ವಿನಯುವನ್ನು ತೋರಿಸಿ ಸಿಂಹದೊಡನೆ ಹೀಗೆಂದಿತು.

ಮಹಾರಾಜರೇ ! ನೀವು ನಮ್ಮೆಲ್ಲರ ರಾಜರಾಗಿದ್ದೀರಿ. ನಾವೆಲ್ಲ ಪಶುಪಕ್ಷಿಗಳು ಕೂಡಿ ವಿಚಾರ ಮಾಡಿ ನಿಮಗೆ ರಾಜಪಟ್ಟವನ್ನು ಕಟ್ಟ ಬೇಕೆಂದು ನಿರ್ಣಯ ಮಾಡಿದ್ದೇವೆ. ಆದುದರಿಂದ ಎಲ್ಲರೂ ಕೂಡಿ ನನ್ನನ್ನು ತಮ್ಮ ಕಡೆ ಕಳುಹಿಸಿದ್ದಾರೆ. ಇದನ್ನು ಕೇಳಿ ಭದ್ರ ಸ್ವಭಾವದ ಸಿಂಹವು ಆನಂದಿತವಾಯ್ತು. ಮತ್ತು ಮುಖದಲ್ಲಿ ಪ್ರಸನ್ನ ಮುದ್ರೆಯಾಯ್ತು. ಆಗ ಆ ಗೂಗೆಯು ಪುನಃ ಹೇಳತೊಡಗಿತು. ಸ್ವಾಮಿನ್! ನೀವು ಬೇಗನೇ ಏಳಿರಿ, ವಿಳಂಬ ಮಾಡಬೇಡಿರಿ. ಈಗ ಮುಹೂರ್ತವು ಸಮೀಪಿಸಿದೆ. ಮತ್ತು ಉತ್ತಮವಾದ ಮುಹೂರ್ತವಿದೆ. ಏಳಿರಿ ಬೇಗನೇ ಏಳಿರಿ. ಇದನ್ನು ಕೇಳಿ ಆ ಕಪಟಿಯಾದ ಗೂಗೆಯೊಡನೆ ಸಿಂಹವು ಹೊರಟಿತು.

ಆ ಕಪಟಿಯಾದ ಗೂಗೆಯು ಹಾದಿಯಲ್ಲಿ ದೊಡ್ಡದಾದ ಹೊಂಡ ವನ್ನು ಮಾಡಿ ಅದರಲ್ಲಿ ಕೆಸರನ್ನು ತುಂಬಿಡುವ ವ್ಯವಸ್ಥೆಯನ್ನು ಮಾಡಿತ್ತು. ಅದು ಸಮೀಪಕ್ಕೆ ಬಂದ ಕೂಡಲೇ ಗೂಗೆಯು ಮೇಲೆ ಹಾರಿ ಹೋಯಿತು. ಸಿಂಹವು ಅದನ್ನು ನೋಡಿ ಸ್ವಲ್ಪ ಸಂಶಯಗ್ರಸ್ತವಾಯ್ತು. ಸಿಂಹವು ಬಹಳ ಜಾಗ್ರತೆಯಾಗಿ ವಿಚಾರ ಮಾಡುವ ಪ್ರಾಣಿ. ಆದುದರಿಂದ ಇದ ರಲ್ಲೇನಾದರೂ ಕಪಟವಿರಬೇಕೆಂಬ ಸಂಶಯದಿಂದ ಮೆಲ್ಲನೆ ಆ ಕೆಸರಿನ ಮೇಲೆ ಕಾಲಿಡಲು ಒಳಗೆ ಕಾಲು ಹೋಗುತ್ತಿರಲು ಹಿಂದೆ ಸರಿಯಿತು. ಮತ್ತು ಇಲ್ಲಿ ದೊಡ್ಡ ಹೊಂಡವಿದೆ ಎಂದು ಕಂಡು ಬಂತು. ತತ್ಕಾಲದ ಲ್ಲಿಯೇ ಆ ಸಿಂಹವು ಗೂಗೆಯ ಕಪಟ ವ್ಯವಹಾರವನ್ನು ತಿಳಿದು ಕೋಪ ದಿಂದ ಆ ಗೂಗೆಯ ಮೇಲೆ ಆಕ್ರಮಣ ಮಾಡಿತು. ಆ ಗೂಗೆಯು ಆ ಸಮಯದಲ್ಲಿ ಆರ್ತರೌದ್ರ ಪರಿಣಾಮದಿಂದ ಸತ್ತು ದುರ್ಗತಿಗೆ ಹೋಯ್ತು.

ಬೇರೆಯರ ವಿಶ್ವಾಸಘಾತವನ್ನು ಮಾಡುವವರ ಘಾತವು ತನ್ನಷ್ಟಕ್ಕೆ ತಾನೇ ಆಗುತ್ತದೆ.

ಬ್ರಹ್ಮಹತ್ಯಾದಿಪಾಪಾನಾಂ ಕಥಂಚಿನಿಷ್ಕೃತಿರ್ಭವೇತ್
ವಿಶ್ವಾಸಘಾತಕಾನಾಂತು ನಿಷ್ಕೃತಿರ್ನಾಸ್ತಿ ಕುತ್ರಚಿತ್ ||

ಸುಭಾಷಿತರತ್ನಾವಲಿ.

ಬ್ರಹ್ಮಹತ್ಯೆಯಾದರೆ ಶಾಸ್ತ್ರದಲ್ಲಿ ಅದಕ್ಕೆ ಪ್ರಾಯಶ್ಚಿತ್ತವು ದೊರೆ ಯಬಹುದು. ಅವನ ಗತಿಯು ಸುಧಾರಿಸಬಹುದು. ಆದರೆ ವಿಶ್ವಾಸಘಾತ ವನ್ನು ಮಾಡುವ ಕಪಟ ಜೀವನಿಗೆ ಶಾಸ್ತ್ರದಲ್ಲಿ ಯಾವ ಪ್ರಾಯಶ್ಚಿತ್ತವೂ ಇಲ್ಲ. ಆದುದರಿಂದ ಆ ಗೂಗೆಯು ಬೇರೆಯವರ ವಿಶ್ವಾಸಘಾತವನ್ನು ಮಾಡುವ ಇಚ್ಛೆಯಿಂದ ಕಪಟ ಪರಿಣಾಮದಿಂದ ಕರ್ಮಬಂಧ ಮಾಡಿ ಕೊಂಡು ಪುನಃ ಕಷ್ಟಿನ ದುಃಖವನ್ನು ಪಡೆಯಿತು.

ಆದುದರಿಂದ ಭವ್ಯಾತ್ಮರೇ! ಕಪಟ ವ್ಯವಹಾರವನ್ನು ಬಿಡಿರಿ. ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ.

ಪರಿಣಾಮವೇ ಮೋಕ್ಷಕ್ಕೂ ಬಂಧಕ್ಕೂ ಕಾರಣವಾಗಿದೆ. ಆದುದರಿಂದ ‹ ಭಾವಾನುರೂಪಂ ಫಲಂ ' ಎಂಬ ಗಾದೆ ಇದೆ. ಹೇಗೆ ನೀವು ಭಾವನೆಯನ್ನು ಮಾಡುವಿರೋ ಆ ಪ್ರಕಾರದ ಫಲವು ದೊರೆಯುವುದು. ಭಾವನೆಯಿಲ್ಲದೆ ಪುಣ್ಯ ಪಾಪಗಳು ಬಾಹ್ಯಕ್ರಿಯೆಗಳಿಂದ ಲಭಿಸುವುದಿಲ್ಲ. ಆದುದರಿಂದ ನೀವು ಕಪಟವನ್ನು ಬಿಟ್ಟು ದೋಷಗಳನ್ನು ತ್ಯಜಿಸಿ ಗುಣಗಳನ್ನು ಗ್ರಹಣೆ ಮಾಡಿರಿ. ಈ ಸಂಸಾರದ ಎಲ್ಲಾ ಪದಾರ್ಥಗಳು ಕ್ಷಣಭಂಗುರವಾಗಿವೆ. ಆದುದರಿಂದ ಅವುಗಳಲ್ಲಿ ವಿರಕ್ತಿಬುದ್ಧಿಯನ್ನಿಡಿರಿ.

**ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ ।**
**ಐಶ್ವರ್ಯಂ ಪ್ರಿಯಸಂವಾಸೋ ಮುಹ್ಯೇತ್ತತ್ರ ನ ಪಂಡಿತಃ ॥**

ಸುಭಾಷಿತಾವಲಿ.

ತಾರುಣ್ಯ, ಆಯುಷ್ಯ, ಧನ ಸಂಚಯ, ಐಶ್ವರ್ಯ, ಪ್ರಿಯವಾದ ಚರಾಚರ ವಸ್ತುಗಳು ಇವೆಲ್ಲ ನಶ್ವರವಾಗಿವೆ. ಆದುದರಿಂದ ವಿವೇಕಿಗಳು ಇವುಗಳ ಮೇಲೆ ಮೋಹವನ್ನಿಡಬಾರದು. ಮೋಹವನ್ನು ಬಿಟ್ಟು ಯಾವಾಗಲೂ ವಿರಾಗಭಾವದಿಂದ ಸಂಸಾರವನ್ನು ಅನುಭವಿಸಿರಿ. ಅವರ ಸಂಸಾರವು ದೀರ್ಘ ಬಂಧಕ್ಕೆ ಕಾರಣವಾಗುವುದಿಲ್ಲ ಸಂಸಾರದಲ್ಲಿದ್ದರೂ ನಿಸ್ಪೃಹ ಪುರುಷರು ವೈರಾಗ್ಯ ಬುದ್ಧಿಯಿಂದ ವರ್ತಿಸುತ್ತಾರೆ.

**ಪಠಂತಿ ಚತುರೋ ವೇದಾನ್ ಧರ್ಮ ಶಾಸ್ತ್ರಾಣ್ಯನೇಕಶಃ**
**ಆತ್ಮಾನಂ ನೈವ ಜಾನಂತಿ ದರ್ವೀ ಪಾಕರಸಾನಿವ ॥**

ಸುಭಾಷಿತಾವಲಿ.

ಯಾರು ಅನೇಕ ಶಾಸ್ತ್ರಗಳನ್ನು ಓದಿ, ಅನೇಕ ವಿಧದ ಜ್ಞಾನ ಸಂಪಾದನೆಯನ್ನು ಮಾಡಿಯೂ ಆತ್ಮ ಸ್ವರೂಪವನ್ನು ತಿಳಿಯದೆ ಕಪಟ ವ್ಯವಹಾರವನ್ನು ಮಾಡುತ್ತಾರೆಯೋ ಅವರು ಪಕ್ವಾನ್ನವನ್ನು ಸರಸವಾಗಿ ತಯ್ಯಾರು ಮಾಡಲು ಸಹಾಯ ಮಾಡಿಯೂ ಅದರ ಸ್ವಾದದಿಂದ ವಂಚಿ

ಶವಾದ ಶವುಟನ ಹಾಗಿರುತ್ತಾರೆಂದು ತಿಳಿಯಬೇಕು. ಆದುದರಿಂದ ಕಪಟ ವನ್ನು ಬಿಟ್ಟು ಆತ್ಮಹಿತವನ್ನು ಮಾಡಿರಿ. ಕಪಟವು ಒಂದು ದೊಡ್ಡ ದುರ್ಗುಣ. ಕಪಟಿಗಳ ಮೇಲೆ ಅವರ ತಾಯಿಯೂ ವಿಶ್ವಾಸವನ್ನಿಡುವುದಿಲ್ಲ ಎಲ್ಲರೂ ಅವರನ್ನು ಧಿಕ್ಕರಿಸುತ್ತಾರೆ. ಆದುದರಿಂದ ಭವ್ಯರೇ! ಒಂದು ಕ್ಷಣದ ಸುಖಕ್ಕೋಸ್ಕರ ಅನಂತ ದುಃಖವನ್ನು ಕೊಡುವ ಮತ್ತು ಕರ್ಮ ಬಂಧವನ್ನು ಮಾಡಿಸುವ ಕಪಟ-ವ್ಯವಹಾರವನ್ನು ಮಾಡಬೇಡಿರಿ. ಇದ ರಿಂದ ನಿಮ್ಮ ಆತ್ಮನ ವಂಚನೆಯೇ ಆಗುತ್ತದೆ.

ನೋಡಿ, ಒಂದು ಕಡೆಯಲ್ಲಿ ಒಬ್ಬ ದೊಡ್ಡ ಕೋಟ್ಯಾಧೀಶ ಶ್ರೀಮಂ ತನಿದ್ದನು. ಅವನಿಗೆ ಸರ್ವಗುಣ ಸಂಪನ್ನನಾದ ಒಬ್ಬ ಮಗನಿದ್ದನು. ಅವನಿಗೆ ಮದುವೆಯಾಗಿ ಸೊಸೆಯು ಮನೆಗೆ ಬಂದಳು. ಆವಳಿಗೆ ಅಲ್ಲಿ ಎಲ್ಲಾ ವಿಧದಿಂದಲೂ ಸುಖವಿತ್ತು. ಮನಸ್ಸಿನಲ್ಲಿಯೇ ಅವಳು ತಿಳಿದು ಹೊರಗೆ ತೋರಿಸನೆ ನಮ್ರತೆ ಮತ್ತು ವಿನಯ ಭಕ್ತಿಯಿಂದ ವರ್ತಿಸುತ್ತಿ ದ್ದಳು. ನಮಸ್ಕಾರ, ಮೃದು ಭಾಷಣೆ, ಸೇವೆ ಮೊದಲಾದ ವಿನಯಗಳಿಂದ ಹೊರಗೆ ಅತ್ಯಂತ ಮಧುರ ವ್ಯವಹಾರವನ್ನು ಮಾಡುತ್ತಿದ್ದಳು. ಎಲ್ಲರೂ ಅವಳ ವ್ಯವಹಾರದಿಂದ ಅವಳನ್ನು ಪ್ರಶಂಸಿಸುತ್ತಿದ್ದರು. ಆದರೆ ಅವಳ ಮನಸ್ಸಿನಲ್ಲಿ ಅತ್ತೆಯ ವಿಷಯದಲ್ಲಿ ಮಾತ್ರ ದುರ್ಭಾವನೆ ಇತ್ತು.

ಮುಖಂ ಪದ್ಮದಲಾಕಾರಂ ವಾಚಾ ಚಂದನ ಶೀಲತಾ
ಹೃದಯಂ ಕರ್ತರೀತುಲ್ಯಂ, ತ್ರಿವಿಧಂ ಧೂರ್ತಲಕ್ಷಣಂ ॥

ಸುಭಾಷಿತಾವಲಿ.

ಕಪಟಿಗಳ ಮುಖವು ಅರಳಿದ ತಾವರೆಯಂತಿರುತ್ತದೆ. ಅವರ ಭಾಷ ಣವು ಚಂದನದಂತೆ ಶೀತಲವಾಗಿರುತ್ತದೆ. ಆದರೆ ಅಂತಃಕರಣದಲ್ಲಿ ಕತ್ತರಿಯಂತೆ ಕುವಿಚಾರಗಳು ನಡೆಯುತ್ತಿರುತ್ತವೆ. ಈ ಮೂರು ಧೂರ್ತ ಅಥವಾ ಕಪಟಿಗಳ ಲಕ್ಷಣವಾಗಿದೆ. ಈ ಪ್ರಕಾರ ಕುವಿಚಾರದಿಂದ ಕಪಟ

ಮಾಡಿ ಅತ್ತೆಯನ್ನು ಕೊಂದು ಹಾಕಬೇಕೆಂಬ ದುರ್ಭಾವನೆಯಿಂದ ವಿಷ ಮಿಶ್ರಿತವಾದ ಲಡ್ಡುಗಳನ್ನು ತಯ್ಯಾರು ಮಾಡಿದಳು. ವಿಷ ಮಿಶ್ರಿತವಾದ ದೊಡ್ಡ ಲಡ್ಡುಗಳನ್ನು ಅತ್ತೆಗಾಗಿಯೂ ಮತ್ತು ಸಣ್ಣದಾದ ಒಳ್ಳೆಯ ಲಡ್ಡುಗಳನ್ನು ತನಗೂ ತನ್ನ ಪತಿಗಾಗಿಯೂ ಮಾಡಿದಳು. ಅತ್ತೆಯು ಊಟಕ್ಕೆ ಕೂತಳು. ಇಷ್ಟರಲ್ಲಿ ಮಗನೂ ಊಟಕ್ಕೆ ಬಂದ. ಮತ್ತು ತಾಯಿಯ ಪಂಕ್ತಿಯಲ್ಲಿಯೇ ಊಟಕ್ಕೆ ಕುಳಿತುಕೊಂಡನು. ಇದನ್ನು ನೋಡಿ ಸೊಸೆಯು ಗಾಬರಿಯಾದಳು. ಮತ್ತು ಹೀಗೆಂದಳು. ' ಪತಿದೇವ ! ಹಿರಿಯರ ಊಟವಾಗದೆ ಕಿರಿಯರು ಊಟ ಮಾಡಬಾರದು ಹೀಗೆಂದು ಹೇಳಿ ಪತಿಗೆ ಬಡಿಸಿದ ತಟ್ಟೆಯಲ್ಲಿ ಸಣ್ಣ ಲಡ್ಡುಗಳನ್ನು ಇಟ್ಟ ಬಡಿಸಿದಳು.

ಪತಿಯು ಬಹಳ ದೂರದರ್ಶಿಯಾಗಿದ್ದನು. ಅವನಿಗೆ ಸಂಶಯ ಬಂದು ತಾಯಿಗೆ ಹೀಗೆ ಹೇಳಿದನು, ತಾಯಿ ! ನೀನು ಈ ಲಡ್ಡುಗಳನ್ನು ತಿನ್ನ ಬಾರದು. ಏನೋ ನನಗೆ ಶಂಕಯು ಬರುತ್ತಿದೆ. ಇವರ ಸತ್ಯ ಸುಳ್ಳನ್ನು ಪರೀಕ್ಷೆ ಮಾಡಿ ನೋಡೋಣವೆಂದು ಹೇಳಿ ತಾಯಿಗೆ ಆ ಲಡ್ಡುಗಳನ್ನು ತಿನ್ನಲು ಪ್ರತಿಬಂಧ ಮಾಡಿದನು. ಮತ್ತು ಆ ಕೂಡಲೇ ಡಾಕ್ಟರನನ್ನು ಕರೆಯಿಸಿ ಪರೀಕ್ಷೆ ಮಾಡಿಸಿದನು. ಆಗ ಅದರಲ್ಲಿ ಭಯಂಕರವಾದ ವಿಷ ವಿದೆ ಎಂದು ತಿಳಿದು ಬಂತು. ಆಗ ಆ ಸೊಸೆಗೆ ಬಹಳ ದುಃಖವಾಯ್ತು.

ಹಸದ್ಭಿಃ ಕ್ರಿಯತೇ ಕರ್ಮ ರುದದ್ಭಿರನುಭೂಯತೇ
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥

ಸುಭಾಷಿತಾವಲಿ.

ಈ ಎಲ್ಲಾ ಪ್ರಕಾರವನ್ನು ನೋಡಿ, ' ನನ್ನ ಕಪಟ ವ್ಯವಹಾರವು ಎಲ್ಲರಿಗೂ ಗೊತ್ತಾಯಿತು. ಇದನ್ನು ಮರೆ ಮಾಚುವ ಉಪಾಯವು ಇಲ್ಲ. ನಾನು ನಿಂದನೀಯಳಾಗಿದ್ದೇನೆ. ನನ್ನ ಪತಿಯೂ ನನ್ನ ಮೇಲೆ ವಿಶ್ವಾಸ

ವಿಡಲು ಸಾಧ್ಯವಿಲ್ಲ. ಇಂಥಹ ದುರ್ದಶೆಯುಲ್ಲಿರುವುದರಿಂದ ವಿಷ ತಿಂದು ಸಾಯುವದು ಒಳ್ಳೆಯದು ಎಂಬ ದುರ್ಭಾವನೆಯಿಂದ ವಿಷವನ್ನು ತಿಂದು ಸತ್ತಳು. ಮತ್ತು ದುರ್ಗತಿಗೆ ಹೋದಳು.

ಆದುದರಿಂದ ಭವ್ಯರೇ! ಕಪಟವೆಂಬ ವಿಷವನ್ನು ಹೃದಯದಿಂದ ವಮನ ಮಾಡಿ ಬಿಡಿರಿ, ಉತ್ತಮ ಸುಖವನ್ನು ಕೊಡುವ ಆರ್ಜವ ಧರ್ಮ ವೆಂಬ ಅಮೃತವನ್ನು ಹೃದಯದಲ್ಲಿ ಧರಿಸಿ ಆತ್ಮೋನ್ನತಿಯನ್ನು ಮಾಡಿ ಕೊಳ್ಳಿರಿ.

ಭವ್ಯರೇ! ಈ ಕಪಟ ವ್ಯವಹಾರವನ್ನು ಹೃದಯದಲ್ಲಿಟ್ಟುಕೊಂಡು ಯಾವ ವ್ರತ ನಿಯಮಗಳನ್ನು ಮಾಡಿದರೂ ಅದರಿಂದ ಒಳ್ಳೆಯ ಫಲ ಸಿಗಲಾರದು,

ಕೈಯ ಮುಷ್ಟಿಯಲ್ಲಿ ಮಣ್ಣು ಇಟ್ಟುಕೊಂಡು ಮೇಲಿಂದ ಸಾಬೂ ನಿನಲ್ಲಿ ಸ್ವಚ್ಛ ಮಾಡಿದರೆ ಕೈಯು ಸ್ವಚ್ಛವಾಗಲಾರದು. ಹಾಗೆ ಕಪಟವು ಒಳಗಿನಿಂದ ಇದ್ದರೂ ಮುಚ್ಚಿರಲಿಕ್ಕೆ ಸಾಧ್ಯವಿಲ್ಲ. ಒಂದು ಸಾರಿ ಜನರಿಗೆ ಗೊತ್ತಾದರೆ ಅವನ ಮೇಲೆ ಯಾರೂ ಪ್ರೀತಿ ಮಾಡುವುದಿಲ್ಲ. ಎಲ್ಲರೂ ಅವನನ್ನು ತಿರಸ್ಕರಿಸುತ್ತಾರೆ. ಕಪಟಿಯು ಮಿತ್ರದ್ರೋಹಿ, ಸ್ವಾಮಿ ದ್ರೋಹೀ, ಧರ್ಮದ್ರೋಹೀ ಮತ್ತು ಕೃತಘ್ನನಾಗಿರುತ್ತಾನೆ. ಜಿನೇಶ್ವರನ ಧರ್ಮವು ನಿಷ್ಕಪಟರೂಪವಾಗಿದೆ. ಮಾಯಾಚಾರಿಯ ಮೇಲೆ ಎಷ್ಟು ಉಪಕಾರ ಮಾಡಿದರೂ ಅವನು ಅಪಕಾರಿಯೇ ಆಗಿರುತ್ತಾನೆ.

ಮಿತ್ರದ್ರೋಹೀ ಕೃತಘ್ನಶ್ಚ ಯಶ್ಚ ವಿಶ್ವಾಸಘಾತಕಃ
ತೇ ನರಾ ನರಕಂ ಯಾಂತಿ ಯಾವಚ್ಚಂದ್ರದಿವಾಕರಾ ||

ಸುಭಾಷಿತಾವಲಿ.

ಹೊರಗಿನಿಂದ ಅತ್ಯಧಿಕ ಮಿತ್ರಪ್ರೇಮವನ್ನು ತೋರಿಸಿ ಒಳಗಿನಿಂದ ಮತ್ತೊಬ್ಬರ ಅಕಲ್ಯಾಣವನ್ನು ಬಯಸುವ, ವಿಶ್ವಾಸಘಾತವನ್ನು ಮಾಡುವ

ಉಪಕಾರ ಮಾಡಿದವರಿಗೆ ಅಪಕಾರ ಮಾಡುವ, ಮೇಲಿನಿಂದ ಧಾರ್ಮಿಕ ವೃತ್ತಿಯನ್ನು ತೋರಿಸುವ, ಅಂತರಂಗದಲ್ಲಿ ದುರ್ಭಾವನೆಯನ್ನಿಡುವ, ವಿಶ್ವಾಸಕೊಟ್ಟು ವಿಶ್ವಾಸಘಾತವನ್ನು ಮಾಡುವ, ಪಾಪಿಗಳಾದ ಮಾಯಾ ಚಾರಿಗಳು ಸತ್ತು ಸೂರ್ಯ-ಚಂದ್ರರಿರುವರೆಗೆ ನರಕ ದುಃಖವನ್ನು ಭೋಗಿಸುತ್ತಾರೆ. ಆದುದರಿಂದ ಭವ್ಯರೇ ! ಹೃದಯದಿಂದ ಮಾಯಾಚಾರ ವನ್ನು ತೆಗೆದು ಹಾಕಿರಿ. ಮತ್ತು ಅಮೃತದಂತಿರುವ ಆರ್ಜವ ಧರ್ಮವನ್ನು ಧರಿಸಿರಿ. ಆರ್ಜವ ಧರ್ಮವಿಲ್ಲದೆ ಆತ್ಮಕಲ್ಯಾಣವಾಗಲಾರದು. ಸರ್ಪಕ್ಕೆ ಹಾಲು ಕುಡಿಸಿದರೂ ಅದು ವಿಷವಾಗುತ್ತದೆ. ಹಾಗೆಯೇ ಮಾಯಾಚಾರಿ ಗಳಿಗೆ ಮಾಡಿದ ಉಪಕಾರಗಳೂ ಅಪಕಾರರೂಪದಲ್ಲಿ ಪರಿಣಮಿಸುತ್ತವೆ.

ಆದುದರಿಂದ ಭವ್ಯರೇ ! ಕಪಟವನ್ನು ಬಿಡಿರಿ. ಮಾಯಾಚಾರದ ತ್ಯಾಗವನ್ನು ಮಾಡಿ ಆತ್ಮಶುದ್ಧಿಯನ್ನು ಮಾಡಿಕೊಳ್ಳಿರಿ. ಭಗವಂತನ ಸ್ತುತಿ ಸ್ತೋತ್ರವನ್ನು ಮಾಡಿರಿ- ಇದರಿಂದ ತಮ್ಮ ವಿಘ್ನ ಸಂಕಟಗಳು ದೂರವಾಗುವವು. ಧರ್ಮಶ್ರದ್ಧೆಯು ದೃಢವಾಗುವುದು.

ಮುಚ್ಯಂತ ಏವ ಮನುಜಾಃ ಸಹಸಾ ಜಿನೇಂದ್ರ<br>ರೌದ್ರೈರುಪದ್ರವಶತೈಸ್ತ್ವಯಿ ವೀಕ್ಷಿತೋಽಪಿ,<br>ಗೋಸ್ವಾಮಿನಿ ಸ್ಫುರಿತತೇಜಸಿ ದೃಷ್ಟಮಾತ್ರೇ<br>ಚೌರ್ಯೈರಿವಾಶು ಪಶವಃ ಪ್ರಪಲಾಯಮಾನೈಃ ॥

ಕಲ್ಯಾಣಮಂದಿರ ಸ್ತೋತ್ರ

ದ್ರವ್ಯ, ವಸ್ತು, ಅಥವಾ ಪಶುಗಳನ್ನು ಕಳ್ಳತನ ಮಾಡುವ ಕಳ್ಳ ರನ್ನು ಆ ದ್ರವ್ಯದ ಯಜಮಾನನು ನೋಡಿದರೆ ಕಳ್ಳರು ಓಡಿ ಹೋಗು ತ್ತಾರೆ. ಅದೇ ಪ್ರಕಾರವಾಗಿ ಹೇ ಭಗವನ್ ! ನಿಮ್ಮ ದರ್ಶನ ಮಾತ್ರದಿಂದ ನೂರಾರು ಉಪದ್ರವಗಳು ದೂರವಾಗುತ್ತವೆ. ಆದುದರಿಂದ ಭವ್ಯರೇ ! ನೀವು ಮನಸ್ಸನ್ನು ಸ್ಥಿರ ಮಾಡಿ ಆರ್ಜವ ಧರ್ಮದ ಮೇಲೆ ಶ್ರದ್ಧೆಯನ್ನಿ

ಡಿರಿ. ಉಪಕಾರ ಮಾಡಿದ ಪ್ರಾಣಿಗಳಿಗೆ ಅಪಕಾರವನ್ನು ಮಾಡಬೇಡಿರಿ. ಅಪಕಾರ ಮಾಡುವುದು ಅಧರ್ಮವಾಗಿದೆ. ಈ ವಿಷಯದಲ್ಲಿ ಒಬ್ಬ ಸಾಹು ಕಾರ ಮತ್ತು ಕಳ್ಳನ ಕಥೆಯನ್ನು ಕೇಳಿರಿ.

ಒಬ್ಬ ಕಳ್ಳನು ಕಳ್ಳತನ ಮಾಡಿ ಯಾರಾದರೂ ನೋಡುವರೆಂಬ ಭಯದಿಂದ ಓಡಿ ಹೋಗುತ್ತಿದ್ದನು. ಅವನನ್ನು ಹಿಡಿಯಲಿಕ್ಕೆಂದು ಪೋ ಲೀಸರು ಹಿಂಬಾಲಿಸುತ್ತಿದ್ದರು. ಒಬ್ಬ ಸಾಹುಕಾರನು ರಾತ್ರಿಯಲ್ಲಿ ಅಂಗಡಿ ಮುಚ್ಚಿಕೊಂಡು ಮನೆಗೆ ಮಲಗಲಿಕ್ಕೆಂದು ತನ್ನ ಕೈಯಲ್ಲಿ ಹಣದ ಚೀಲವನ್ನು ಹಿಡಿದುಕೊಂಡು ನಡೆದಿದ್ದನು. ಅದೇ ಸಮಯದಲ್ಲಿ ಆ ಕಳ್ಳನು ಆ ಸಾಹುಕಾರನನ್ನು ನೋಡಿ ಹೇಳುತ್ತಿದ್ದಾನೆ. ಪುಣ್ಯಾತ್ಮನೇ ! ಈಗ ನೀನೇ ನನ್ನ ರಕ್ಷಕನಾಗಿದ್ದೀ. ನನ್ನನ್ನು ರಕ್ಷಿಸು. ಎಂದು ಮರೆಹೋದನು.

ಈ ಕರುಣವಾಣಿಯನ್ನು ಕೇಳಿ ಆ ಸಾಹುಕಾರನಿಗೂ ಕನಿಕರ ಹುಟ್ಟಿತು. ದಯೆಯಿಂದ ಅವನಿಗೆ ಹೇಳಿದನು. ಚಿಂತೆಯಿಲ್ಲ. ನೀನು ಗಾಬರಿಪಡಬೇಡ. ಎಂದು ಹೇಳಿ ಅವನನ್ನು ತನ್ನ ಹೊಟ್ಟೆಗೆ ಅಪ್ಪಿಸಿ ಕೊಂಡು ವಸ್ತ್ರದಿಂದ ಅವನನ್ನು ಮುಚ್ಚಿಕೊಂಡನು. ಇಷ್ಟರಲ್ಲಿ ಪೋಲೀ ಸರು ಬಂದು ಕೇಳುತ್ತಾರೆ.

ಸಾಹುಕಾರರೇ ! ಈಗ ಈಕಡೆ ಓಡಿ ಬಂದ ಕಳ್ಳನು ಎಲ್ಲಿ ಹೋದನು? ಆಗ ಆ ಕಳ್ಳನ ರಕ್ಷಣೆಗೋಸ್ಕರ ಸುಳ್ಳು ಹೇಳಿ ಸಾಹುಕಾರನು ಅವನು ಮುಂದೆ ಓಡಿ ಹೋದನೆಂದು ಹೇಳಿದನು. ಇದನ್ನು ಕೇಳಿ ಪೋಲೀಸರು ಮುಂದೆ ಹೋದರು. ಆ ಸಮಯದಲ್ಲಿ ಕಳ್ಳನ ಮನಸ್ಸಿನಲ್ಲಿ ಪುನ: ದುರ್ಭಾ ವನೆಯು ಬಂತು. ಸಾಹುಕಾರನ ಕೈಯಲ್ಲಿದ್ದ ಹಣದ ಚೀಲವನ್ನು ಅಪಹ ರಿಸಿ ಓಡಿ ಹೋಗೋಣವೆಂಬ ವಿಚಾರವು ಅವನ ಮನಸ್ಸಿನಲ್ಲಿ ಬಂತು. ಆ ಸಮಯದಲ್ಲಿ ಸಾಹುಕಾರನು ಮಾಡಿದ ಉಪಕಾರವು ಅಪಕಾರವೇ ಆಯಿತಲ್ಲ.

ದುಷ್ಟ ಮನುಷ್ಯರು ಸಜ್ಜನರು ಮಾಡಿದ ಉಪಕಾರವನ್ನು ಸ್ಮರಿಸು ವುದೇ ಇಲ್ಲ ಕಳ್ಳನು ಆ ಸಾಹುಕಾರನನ್ನು ಹೊಡೆಯಲಿಕ್ಕೆ ಪ್ರಾರಂಭಿಸಿ ದನು. ಇಬ್ಬರ ಝಟಾಪಟಿಯಲ್ಲಿ ಕಳ್ಳನು ಕೆಳಗೆ ಬಿದ್ದನು. ಆ ಸಮಯ ದಲ್ಲಿ ಸಾಹುಕಾರನು ಹೇಳುತ್ತಿದ್ದಾನೆ.

ದುಷ್ಟನೇ ! ಇನ್ನಾದರೂ ಕಪಟಭಾವವನ್ನು ಬಿಡು. ಆದರೆ ದುಷ್ಟರು ತನ್ನ ದುಷ್ಟ ಸ್ವಭಾವವನ್ನು ಎಂದೂ ಬಿಡುವುದಿಲ್ಲ. ಈ ವಿಷಯದಲ್ಲಿ ಹೀಗೆ ಹೇಳಿದ್ದಾರೆ.

> ಕರ್ಪೂರ ಧೂಲೀ ರಚಿತಾವಾಲ: ।
> ಕಸ್ತೂರಿಕಾ ಕುಂಕುಮಲಿಪ್ತ ದೇಹಃ ।
> ಸುವರ್ಣಕುಂಭೈಪರಿಷಿಚ್ಯಮಾನೋ ।
> ಪ್ರಾಂಚಂಗುಣಂ ಮುಂಚತಿ ಕಿಂ ಪಲಾಂಡು: ॥

ಸುಭಾಷಿತಾವಲಿ.

ಹೇಗೆ ನೀರುಳ್ಳಿಗಡ್ಡೆಗೆ ಕಸ್ತೂರಿ ಮತ್ತು ಕೇಶರದ ಲೇಪ ಮಾಡಿ ದರೂ ಮತ್ತ ಅದಕ್ಕೆ ಬಂಗಾರದ ಕೊಡದಿಂದ ನೀರು ಹಾಕಿದರೂ ನೀರು ಳ್ಳಿಯು ಕೆಟ್ಟ ವಾಸನೆಯನ್ನು ಬಿಡಲಾರದೋ ಹಾಗೆಯೇ ದುರ್ಜನರು ತನ್ನ ದುಷ್ಟ ಸ್ವಭಾವವನ್ನು ಬಿಡಲಾರರು. ಆ ಕಳ್ಳನು ತನ್ನ ದುಷ್ಟ ಸ್ವಭಾವವನ್ನು ಬಡದೆ ಸಾಹುಕಾರನನ್ನೇ ಹೊಡೆಯುವ ವಿಚಾರ ಮಾಡಿ ದನು. ಆ ಕಪಟ ಪಾಪದ ಫಲದಿಂದ ಕೆಳಗೆ ಬಿದ್ದು ಸತ್ತು ಆರ್ತಧ್ಯಾನ ದಿಂದ ದುರ್ಗತಿಗೆ ಹೋದನು. ಸಾಹುಕಾರನು ಪರೋಪಕಾರಬುದ್ಧಿಯಿಂದ ಮತ್ತು ದಯಾ ಪರಿಣಾಮದಿಂದ ಜೀವ ರಕ್ಷಣೆಯನ್ನು ಮಾಡಿ ಸ್ವರ್ಗಕ್ಕೆ ಹೋದನು. ಆದುದರಿಂದ ದುಷ್ಟಸ್ವಭಾವವನ್ನು ಬಿಟ್ಟು ಸರಳ ಪರಿಣಾಮ ವನ್ನಿಡಿರಿ. ಹೃದಯದಿಂದ ಕಪಟಭಾವವನ್ನು ಮಾಯಾಚಾರವನ್ನು ತೆಗೆದು ಹಾಕಿರಿ. ವಿವಿಧ ಮಾರ್ಗಗಳಿಂದ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳಿರಿ. ಇದು ಭಗವಂತನ ವಚನವಾಗಿದೆ.

ಭವ್ಯರೇ ! ನೀವು ಸ್ವಸ್ವರೂಪದಲ್ಲಿರಬೇಕು. ಯಥಾರ್ಥ ವಿಚಾರ ಮಾಡಿದರೆ ಸ್ವಸ್ವರೂಪದಲ್ಲಿರುವುದೇ ನಿಶ್ಚಯ ಆರ್ಜವ' ಧರ್ಮವಾಗಿದೆ. ಅದರಲ್ಲಿ ಸ್ಥಿರವಾಗಿದ್ದು ಉದಯದಲ್ಲಿ ಬರುತ್ತಿರುವ ಕರ್ಮಗಳ ಕಾರಣ ದಿಂದಾಗುವ ಪರಪರಿಣಾಮರೂಪವಾದ ಕಪಟಭಾವವನ್ನು ತ್ಯಾಗಮಾಡಿರಿ ಪರಪರಿಣತಿಯು ವಿಕಾರದ ವೃದ್ಧಿಯನ್ನು ಮಾಡುವುದಾಗಿದೆ. ನಾನಾ ಪ್ರಕಾರದ ಸಂಕಲ್ಪವಿಕಲ್ಪಗಳನ್ನು ಅದು ಬೆಳೆಸುತ್ತದೆ, ಮನಸ್ಸಿನಲ್ಲಿ ಯಾವ ಯಾವ ಸಂಕಲ್ಪ ವಿಕಲ್ಪಗಳು ಹುಟ್ಟುತ್ತವೆಯೋ ಅವೆಲ್ಲಾ ದೇಹ ಜನ್ಯವಾಗಿರುವುದರಿಂದ ಪುದ್ಗಲವಿಕಾರವೆಂದು ತಿಳಿಯಬೇಕು.

ದೇಹಾದಿಕ ಪುದ್ಗಲಮಯಿ ಸೋ ಜಡ ಹೈ ಪರ ಜಾನ।
ಜ್ಞಾತಾ ದ್ರಷ್ಟಾ ಆಪ ತೂ ಚೇತನ ನಿಜ ಪಹಿಚಾನ ॥

ಶರೀರ, ಧನ, ಕನಕ ಮೊದಲಾದವುಗಳು ಜಡ ಮತ್ತು ಪರರೂಪ ವಾಗಿವೆ. ನನ್ನ ಆತ್ಮನ ನಿಜರೂಪವು ತಿಳಿಯುವುದು, ನೋಡುವುದು ಆಗಿದೆ. ಚೈತನ್ಯ, ಚಿದಾನಂದ ರೂಪವು ನನ್ನ ಸ್ವರೂಪವಾಗಿದೆ. ಇದೇ ನನ್ನ ಧನ, ವೈಭವ ಹೀಗೆ ತಿಳಿಯುವವನು ಕರ್ಮದಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಮಮೇತಿ ಬಧ್ಯತೇ ಜಂತುರ್ನ ಮಮೇತಿ ಚ ಮುಚ್ಯತೇ ।
ಬಂಧಾಯ ವಿಷಯಾಸಕ್ತಂ ಮುಕ್ತ್ಯಾ ನಿರ್ವಿಷಯಂ ಮನಃ ॥

" ಮಮ ಇದಂ " ಇದು ನನ್ನದು ಎಂಬ ಸಂಸಾರದ ಬುದ್ಧಿಯು ಕರ್ಮಬಂಧಕ್ಕೆ ಕಾರಣವಾಗಿದೆ. ಪಂಚೇಂದ್ರಿಯ ಸಂಬಂಧೀ ವಿಷಯಗಳ ಪ್ರವೃತ್ತಿಯನ್ನು ಅದು ಬೆಳೆಸುತ್ತದೆ. ಇದಕ್ಕೆ ವಿಪರೀತವಾಗಿ ಲೋಕದಲ್ಲಿ ನನ್ನ ವಸ್ತುವು ಯಾವುದೂ ಇಲ್ಲ. ನಾನು ಮೋಹನೀಯ ಕರ್ಮದ ಉದ ಯದಿಂದ ಪರವಸ್ತುವನ್ನು ನನ್ನ ವಸ್ತುವೆಂದು ಹೇಳುತ್ತಿದ್ದೇನೆ. ಇದೇ

ನನ್ನ ಕರ್ಮಬಂಧಕ್ಕೆ ಕಾರಣವಾಗಿದೆ. ಮೋಹನೀಯ ಕರ್ಮವು ಎಲ್ಲಾ ಕರ್ಮಗಳಲ್ಲಿಯೂ ಪ್ರಬಲವಾಗಿದೆ.

ಬಂಧನಾನಿ ಖಲು ಸಂತಿ ಬಹೂನಿ
ಪ್ರೇಮ ರಜ್ಜುದೃಢಬಂಧನಮಾಹುಃ
ದಾಹ ಭೇದನಿಪುಣೋಪಿ ಷಡಂಘ್ರಿ
ನಿಷ್ಕ್ರಿಯೋ ಭವತಿ ಪಂಕಜಕೋಶೇ ||

ಸುಭಾಷಿತಾವಲಿ.

ಆತ್ಮನು ಬಲಿಷ್ಠವಾದ ಶಕ್ತಿಶಾಲಿಯಾದ ಮೋಹದ ಬಲೆಯಲ್ಲಿ ಬಿದ್ದಿದ್ದಾನೆ, ಕಟ್ಟಿಗೆಯಂತೆ ಕಠಿನವಾದ ವಸ್ತುವನ್ನು ಒಡೆದು ಹೊರಗೆ ಬರಲು ಸಮರ್ಥವಾದ ಭ್ರಮರವು ಕಮಲದ ಸುಗಂಧಕ್ಕೆ ಮೋಹಿತವಾಗಿ ಹೊರಗೆ ಬರದೆ ಅಲ್ಲಿಯೇ ಸತ್ತು ಹೋಗುತ್ತದೆ. ಪ್ರೇಮವೆಂಬ ಬಂಧನವು ಬಹಳ ಬಲವತ್ತರವಾಗಿದೆ. ಅದನ್ನು ಕಡಿಯ ಬೇಕಾದರೆ ವಿರಕ್ತಭಾವದಿಂದಲೇ ಕಡಿಯಬೇಕು. ಲೋಕದಲ್ಲಿ ಕಾಣುವ ಎಲ್ಲಾ ಪದಾರ್ಥಗಳು ಜಡರೂಪವಾಗಿವೆ. ಜಡರೂಪವಾದ ಈ ಪದಾರ್ಥಗಳ ಮೇಲೆ ರಾಗ ಭಾವವನ್ನಿಟ್ಟು ನಾನು ೮೪ ಲಕ್ಷ ಯೋನಿಗಳಲ್ಲಿ ತಿರುಗಾಡುತ್ತಾ ಬಂದಿದ್ದೇನೆ, ಇದನ್ನು ತಿಳಿದು ಆ ಬಂಧನದಿಂದ ಬಿಡುಗಡೆಯನ್ನು ಮಾಡಿಕೊಳ್ಳುವ ಇಚ್ಛೆಯನ್ನು ಮಾಡದೆ ಇಂದ್ರಿಯ ಸುಖಗಳನ್ನೇ ನಿಜವಾದ ಸುಖವೆಂದು ತಿಳಿದು ಅನೇಕ ಪ್ರಕಾರದ ಪಾಪ ಕೃತ್ಯಗಳನ್ನು ಮಾಡುವ ಕಾರ್ಯದಲ್ಲಿ ಪ್ರವೃತ್ತರಾಗುತ್ತಾರೆ. ಒಂದು ಕಡೆಯಲ್ಲಿ ಈ ಘಟನೆಯು ಉಲ್ಲೇಖವಿದೆ.

ಒಬ್ಬ ಗೃಹಸ್ಥನಿಗೆ ಇಬ್ಬರು ಹೆಂಡತಿಯರಿದ್ದರು. ಅದರಲ್ಲಿ ದೊಡ್ಡವಳಿಗೆ ಮಕ್ಕಳಿರಲಿಲ್ಲ. ಸಣ್ಣವಳಿಗೆ ಒಬ್ಬ ಪುತ್ರನಾದನು. ಆಗ ದೊಡ್ಡವಳ ಮನಸ್ಸಿನಲ್ಲಿ ಕಪಟ ಬಂತು. ಸವತಿ ಮತ್ಸರವು ಪ್ರಾರಂಭವಾಯ್ತು. ಅದನ್ನು ಹೊರಗೆ ತಿಳಿಸದೆ ಆ ಪುತ್ರನ ಮೇಲೆ ತಾಯಿಯಿಂದಲೂ ಹೆಚ್ಚು ಪ್ರೀತಿ

ಮಾಡತೊಡಗಿದಳು. ಒಂದು ದಿವಸ ಸಣ್ಣವಳು ದೊಡ್ಡವಳೊಡನೆ ಪುತ್ರ ನನ್ನು ನೋಡಿಕೋ ಎಂದು ಹೇಳಿ ಜಿನದರ್ಶನಕ್ಕೆ ಹೋದಳು. ಇತ್ತ ದೊಡ್ಡ ವಳು ಪಾಪವನ್ನು ತ್ಯಾಗ ಮಾಡಿದ ಒಂದು ಎತ್ತಿನ ಕೊಂಬಿನ ಮೇಲೆ ಆ ಮಗುವನ್ನು ಹಾಕಿದಳು. ಅದರಿಂದ ಆ ಮಗುವಿನ ಹೊಟ್ಟೆಯಲ್ಲಿ ಕೋಡು ಹೋಗಿ ಆ ಮಗುವು ಗತ ಪ್ರಾಣವಾಯ್ತು. ಮಗುವಿನ ತಾಯಿಯು ಭಗವಂತನ ಎದುರಿನಲ್ಲಿ ಜಪ ಮಾಡುತ್ತಿದ್ದಳು. ಅವಳು ಸರಳ ಪರಿಣಾಮುದವಳಾದ್ದರಿಂದ ಶಾಸನ ದೇವಿಯು ಪ್ರಸನ್ನಳಾಗಿ ಹೀಗೆ ಹೇಳಿದಳು.

'ನೀನು ಬೇಗನೇ ಮನೆಗೆ ಹೋಗು. ನಿನ್ನ ಮಗನು ಗತ ಪ್ರಾಣನಾಗಿದ್ದಾನೆ. ಅವನ ಶರೀರದ ಮೇಲೆ ಜಿನಪಾದಗಂಧೋ ದಕ ಸೇಚನೆಯನ್ನು ಮಾಡು.' ಇದನ್ನು ಕೇಳಿ ಮನೆಗೆ ಬಂದಳು. ಆ ಸಮಯದಲ್ಲಿ ಕಪಟಯಾದ ಸ್ತ್ರೀಯು ಅಳುತ್ತಿದ್ದಳು. ಅವಳ ಗಂಡನು ನಿರಪರಾಧಿಯಾದ ಎತ್ತನ್ನು ಹೊಡೆದೋಡಿಸಿದನು. ಮತ್ತು ಮಗುವಿನ ಮೇಲೆ ಗಂಧೋದಕ ಸೇಚನೆಯನ್ನು ಮಾಡಿದರು. ಅಷ್ಟರಲ್ಲಿ ಆ ಮಗುವು ಎದ್ದು ಕೂತುಕೊಂಡಿತು. ಆಗ ಆ ಕಪಟ ಸ್ತ್ರೀಯು 'ನಾನು ಮಾಡಿದ ಪ್ರಯತ್ನವು ವ್ಯರ್ಥವಾಯಿತು. ಇನ್ನೇನು ಮಾಡುವುದು' ಎಂದು ವಿಚಾರ ಮಾಡಿ ದುಃಖಿಯಾದಳು. ಆಗ ಆ ದೇವಿಯು ಪುನಃ ಪ್ರಕಟಳಾಗಿ ಹೇಳಿದಳು. ದುಷ್ಟೇ ! ನೀನು ಆ ಮಗುವನ್ನು ಎತ್ತಿನ ಮೇಲೆ ಹಾಕಿ ನಿರಪರಾಧಿಯಾದ ಎತ್ತಿಗೆ ದೋಷವನ್ನು ಹೊರಿಸಿದಿ ಮತ್ತು ಹೊಡಿಸಿದಿ. ಆದುದರಿಂದ ಈಗ ನಾನೇ ನಿನಗೆ ಹೊಡೆಯುತ್ತೇನೆ. ಎಂದು ಗರ್ಜಿಸಿದಳು. ಆಗ ಆ ಕಪಟಯಾದ ಸ್ತ್ರೀಯು ಹೇಳತೊಡಗಿದಳು. 'ನನ್ನ ಅಪರಾಧ ದಿಂದ ನನ್ನನ್ನು ನೀನು ಹೊಡೆಯುತ್ತಿದ್ದೀಯೋ ಹಾಗೆಯೇ ನನ್ನೊಡನೆ ನನ್ನ ಸವತಿಯ ಮಗನನ್ನು ಹೊಡೆದು ಹಾಕು. ಅಂದರೆ ನನಗೆ ಸಂತೋ ಷವಾಗುವುದು.

ತ್ಯಕ್ತ್ವಾಽಪಿ ನಿಜ ಪ್ರಾಣಾನ್
ಪರಹಿತವಿಘ್ನಂ ಖಲಃ ಕರೋತ್ಯೇವ
ಕವಲೇ ಪತಿತಾ ಸದ್ಯೋ
ವಮಯತಿ ಖಲು ಮಕ್ಷಿಕಾನ್ನ ಭೋಕ್ತಾರಂ ||

ಸುಭಾಷಿತಾವಲಿ.

ದುಷ್ಟರು ತನ್ನ ಪ್ರಾಣವನ್ನು ಕಳಕೊಂಡೂ ಬೇರೆಯವರ ಸುಖದಲ್ಲಿ ವಿಘ್ನವನ್ನು ಮಾಡುತ್ತಾರೆ. ಹೇಗಂದರೆ ನೊಣವು ಅನ್ನದಲ್ಲಿ ಬಿದ್ದು ತಾನು ಸಾಯುತ್ತವೆ ಮತ್ತು ತಿನ್ನುವವರಿಗೆ ವಮನವನ್ನು ಮಾಡಿಸುತ್ತದೆ. ಅದೇ ಪ್ರಕಾರ ಆ ಕಪಟೆ ತಾನು ಸತ್ತರೂ ಚಿಂತೆ ಇಲ್ಲ. ಮತ್ತೊಬ್ಬರೂ ಸುಖದಿಂದ ಬದುಕಿರಬಾರದು ಎಂಬ ದುರ್ಭಾವನೆಯನ್ನು ಮಾಡಿದಳು. ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯ್ತು. ಅವಳ ಪತಿಯು ಅವಳನ್ನು ಅದೇ ಸಮಯ ಕೊಲ್ಲಲು ಆಜ್ಞೆಯನ್ನಿತ್ತನು. ಆದರೂ ಮಗುವಿನ ತಾಯಿಯಾದ ಸಾಧ್ವಿಯು ಹೇಳುತ್ತಾಳೆ 'ಅವಳು ಅವಳ ಕರ್ಮದಿಂದಲೇ ಸಾಯುವಳು, ನೀವು ವ್ಯರ್ಥವಾಗಿ ಕೊಂದು ವೈರವನ್ನು ಕಟ್ಟಿಕೊಳ್ಳಬೇಡಿರಿ.

ಇದನ್ನು ಕೇಳಿ ಪತಿಯು ಅವಳ ಕಿವಿಗಳನ್ನು ಕತ್ತರಿಸಿ ಊರಿನಿಂದ ಹೊರಗೆ ಕಳುಹಿಸಿದನು. ಈ ಕಪಟ ಪರಿಣಾಮದಿಂದಲೇ ಇಹ ಲೋಕದಲ್ಲಿ ಅನೇಕ ದುಃಖಗಳನ್ನು ಅನುಭವಿಸಿ ಪರಲೋಕದಲ್ಲಿ ದುರ್ಗತಿಗೆ ಹೋದಳು. ಆದುದರಿಂದ ಭವ್ಯರೇ ! ಕಪಟ ವ್ಯವಹಾರವನ್ನು ಬಿಟ್ಟು ಸರಳ ಪರಿಣಾಮದಿಂದ ವರ್ತಿಸಿರಿ, ಮತ್ತು ಆತ್ಮೋನ್ನತಿಯನ್ನು ಮಾಡಿಕೊಳ್ಳಿರಿ. ಎಲೇ ಜೀವಾತ್ಮನೇ ! ನಿನ್ನ ಆತ್ಮ ಸ್ವರೂಪವು ಅನುಪಮವಾಗಿದೆ. ಜಡ ಶರೀರವು ಆತ್ಮನಿಂದ ಭಿನ್ನವಾಗಿದೆ. ಜ್ಞಾನವೆಂಬ ಕಣ್ಣನ್ನು ಬಿಚ್ಚಿ ನೋಡಿದರೆ ಅದು ಕಾಣುವುದು. ಅನಾದಿಕಾಲದಿಂದ ಆತ್ಮನೆಂಬ ನಿಧಿಯು ಕರ್ಮ ಶರೀರವೆಂಬ ಭೂಮಿಯಲ್ಲಿ ಅಡಗಿ ಹೋಗಿದೆ. ಇನ್ನಾದರೂ ಪ್ರಯತ್ನ ಮಾಡಿ ಆ ನಿಧಿಯನ್ನು ಹೊರಗೆ ತೆಗೆಯಲು ಪ್ರಯತ್ನ ಮಾಡು,

ಆತ್ಮಜ್ಯೋತಿರ್ನಿಧಿರನವಧಿರ್ದ್ರಷ್ಟುರಾನಂದಹೇತು:
ಕರ್ಮಕ್ಷೋಣೀ ಪಟಲಪಿಹಿತೋ ಯೋನವಾಪ್ಯಃ ಪರೇಷಾಂ,
ಹಸ್ತೇ ಕುರ್ವಂತ್ಯನತಿಚಿರತಸ್ತಂ ಭವದ್‌ಭಕ್ತಿಭಾಜಃ
ಸ್ತೋತ್ರೈರ್ಬಂಧ ಪ್ರಕೃತಿ ಪರುಷೋದ್ದಾಮಧಾತ್ರೀ ಖನಿತ್ರೈ: ॥

ಏಕೀಭಾವಸ್ತೋತ್ರ.

ಆತ್ಮಜ್ಯೋತಿ ಎಂಬ ನಿಧಿಯು ಅತ್ಯಂತ ಆನಂದದಾಯಕವಾಗಿದೆ. ಆದರೆ ಕರ್ಮವೆಂಬ ಭೂಮಿಯ ಪಟಲದಿಂದ ಮುಚ್ಚಲ್ಪಟ್ಟದೆ. ಅದನ್ನು ಒಂದು ವೇಳೆ ಹೊರಗೆ ತೆಗೆಯಬೇಕಾದರೆ ಭೇದಜ್ಞಾನವೆಂಬ ಶಸ್ತ್ರವಿಲ್ಲದೆ ಸಾಧ್ಯವಿಲ್ಲ. ಆದುದರಿಂದ ಹೇ ಭಗವನ್ ! ನಿಮ್ಮಲ್ಲಿ ಭಕ್ತಿಯನ್ನಿಡುವವರು ಆ ಭೇದಜ್ಞಾನವನ್ನು ಪ್ರಾಪ್ತ ಮಾಡಿ ಆ ನಿಧಿಯನ್ನು ಸುಲಭವಾಗಿ ಪಡೆದುಕೊಳ್ಳುತ್ತಾರೆ. ಭೇದವಿಜ್ಞಾನಿಗಳು ಸಂಸಾರದಲ್ಲಿದ್ದರೂ ಜೀವನ್ಮುಕ್ತರೆಂದು ಹೇಳಲ್ಪಡುತ್ತಾರೆ. ಅವರು ಸಂಸಾರದಲ್ಲಿ ಉದಾಸೀನರಾಗಿರುತ್ತಾರೆ.

ಮಾನಸವನು ಹಂಸನೊಳಗಿಟ್ಟು ಹೊರಗುದಾಸಿನದೊಳುಳಿದ
ಕರ್ಮಗಳಾ। ಜ್ಞಾನಿ ಮಾಡುವನು ಮಾಡಿಯು ಬಂಧವಿಲ್ಲದು
ಧ್ಯಾನದ ಶಕ್ತಿ ಕೇಳೆಂದಾ ॥

ಭರತೇಶವೈಭವ.

ಜ್ಞಾನಿಗಳು ತಮ್ಮ ಮನಸ್ಸನ್ನು ಆತ್ಮಸ್ವರೂಪದಲ್ಲಿಟ್ಟು ಇತರ ಹೊರಗಿನ ಕ್ರಿಯೆಗಳನ್ನು ಉದಾಸೀನ ಭಾವದಿಂದ ಮಾಡುತ್ತಾರೆ. ಆದುದರಿಂದ ಅವರಿಗೆ ನವೀನ ಕರ್ಮಗಳ ಬಂಧವಾದರೂ ದೀರ್ಘ ಸಂಸಾರಕ್ಕೆ ಕಾರಣವಾದ ಬಂಧವಾಗುವುದಿಲ್ಲ. ಕರ್ಮದ ಉದಯ, ಉದೀರಣೆಯಾಗಿ ಅವರು ಕರ್ಮದ ಫಲವನ್ನು ಅನುಭವಿಸುತ್ತಿದ್ದರೂ ಅವುಗಳಲ್ಲಿ ರಾಗದ್ವೇಷ ಮಾಡುವುದಿಲ್ಲ. ಯಾರಾದರೂ ಸ್ತುತಿಯನ್ನು ಮಾಡಿದರೂ ಆನಂದಿತರಾಗುವುದಿಲ್ಲ. ಯಾರಾದರೂ ದ್ವೇಷವನ್ನು ಮಾಡಿದರೂ ದುಃಖವನ್ನು ಮಾಡುವುದಿಲ್ಲ. ಇದೆಲ್ಲಾ ಕರ್ಮದ ಆಟವಾಗಿದೆ. ಎಂದು ತಿಳಿಯುತ್ತಾರೆ.

ಒಬ್ಬ ಜ್ಞಾನಿಗೆ ಇಂಥಹ ಒಂದು ಪ್ರಸಂಗ ಒದಗಿತು. ಆ ಊರಿನ ರಾಜನು ಆ ಜ್ಞಾನಿಯೊಡನೆ ಅತ್ಯಂತ ವಾತ್ಸಲ್ಯ, ಆದರದಿಂದ ವರ್ತಿಸುತ್ತಿದ್ದು ಅವನ ಸತ್ಕಾರವನ್ನು ಮಾಡುತ್ತಿದ್ದನು. ಒಂದಾನೊಂದು ಸಮಯದಲ್ಲಿ ಶತ್ರುಗಳನ್ನು ಜಯಿಸುವುದಕ್ಕೋಸ್ಕರವಾಗಿ ಊರು ಬಿಟ್ಟು ಹೋಗುವ ಪ್ರಸಂಗ ಬಂತು. ' ಹಿಂದೆ ಬರಲು ಬಹಳ ಸಮಯ ತಾಗಬಹುದು. ಅದು ವರೆಗೆ ರಾಜ್ಯವನ್ನು ಯಾರ ಮೇಲೆ ಬಿಟ್ಟು ಹೋಗಲಿ ' ಎಂಬ ವಿಚಾರ ಮಾಡಿ ಆ ಜ್ಞಾನಿಯನ್ನು ಕರೆದು ' ನಾನು ಹಿಂದೆ ಬರುವವರೆಗೆ ನೀವು ಈ ರಾಜ್ಯವನ್ನು ಆಳಬೇಕು. ' ಎಂದು ಹೇಳಿದನು. ಇದನ್ನು ಕೇಳಿ ಆ ಜ್ಞಾನಿಯು ತನ್ನ ಇಚ್ಛೆ ಇಲ್ಲದಿದ್ದರೂ ರಾಜನ ಆಜ್ಞೆ ಎಂದು ರಾಜ್ಯ ಪಾಲನೆ ಮಾಡಲು ಒಪ್ಪಿದನು, ಹಾಗೆಯೇ ಪ್ರಜೆಗಳನ್ನು ತನ್ನ ಮಕ್ಕಳಂತೆ ಪರಿಪಾಲಿಸಿದನು. ಕೆಲವು ದಿನಗಳ ನಂತರ ರಾಜನು ಶತ್ರುಗಳನ್ನು ಜಯಿಸಿ ಹಿಂದೆ ಬರುತ್ತಿದ್ದಾನೆಂದು ಕೇಳಿ ಆ ಜ್ಞಾನಿಯಾದ ಸಮ್ಯಗ್ ದೃಷ್ಟಿಯು ರಾಜನ ಸ್ವಾಗತಕ್ಕೆ ಹೋದನು. ರಾಜನು ಹಾಸ್ಯಮುಖದಿಂದ ಪ್ರಜೆಗಳಿಗೆ ನಿಮ್ಮೆಲ್ಲರ ಪಾಲನೆಯು ಯೋಗ್ಯರೂಪದಿಂದ ಆಯಿತಷ್ಟೇ ? ಎಂದು ಕೇಳಿದನು. ಅದಕ್ಕೆ ಪ್ರಜೆಗಳು ಕರ ಜೋಡಿಸಿ ಪ್ರಭೋ ! ನಿಮ್ಮಂತೆಯೇ ಇವರೂ ಕೂಡ ನಮ್ಮನ್ನು ನ್ಯಾಯನೀತಿಯಿಂದ ಪಾಲಿಸಿದರು. ಯಾವ ಮಾನಸಿಕ ಕಷ್ಟವೂ ಆಗಲಿಲ್ಲ, ವೆಂದರು. ಆಗ ರಾಜನು ಮನಸ್ಸಿನಲ್ಲಿ ಕಪಟಭಾವದಿಂದ ' ಇವನು ಪ್ರಜೆಗಳನ್ನು ವಶಪಡಿಸಿಕೊಂಡಿದ್ದಾನೆ. ಆದುದರಿಂದ ಇವನನ್ನು ಹೇಗಾದರೂ ಹೊಡೆದು ಹಾಕಬೇಕೆಂದು ದುಷ್ಟ ವಿಚಾರವನ್ನು ಮಾಡಿದನು, ಆಗ ಅವನು ಮತ್ತು ಇತರ ಮಂತ್ರಿಗಳು ಕೂಡಿ ರಾಜ್ಯದ ಭಂಡಾರದಿಂದ ದ್ರವ್ಯವನ್ನು ಕದ್ದುಕೊಂಡು ಆ ಜ್ಞಾನಿಯ ಮೇಲೆ ಆರೋಪವನ್ನು ಹೊರಿಸಿದರು. ಆದರೆ ಕರ್ಮದ ಉದಯದಿಂದ ಕಳ್ಳತನ ಮಾಡುವ ಸಮಯದಲ್ಲಿ ತನ್ನ ಒಂದೊಂದು ವಸ್ತುವನ್ನು ಮರೆತು

ಬಂದರು. ರಾಜನು ಮತ್ತು ಮಂತ್ರಿಗಳು ಆ ಜ್ಞಾನಿಯನ್ನು ಕರೆದು ಕೇಳಿದರು.

‘ ರಾಜ್ಯ ಭಂಡಾರದಿಂದ ವಿಪುಲ ದ್ರವ್ಯವು ಕಳ್ಳತನವಾಗಿ ಹೋಗಿದೆ. ಕಳ್ಳರನ್ನು ಹಿಡಿದು ಕೊಡು. ಇಲ್ಲವಾದರೆ ನಿನಗೆ ದೇಹಾಂತ ಶಾಸನ ಕೊಡಲಾಗುವುದು. ” ಇದನ್ನು ಕೇಳಿ ಆ ಭದ್ರನು ಇದು ನನ್ನ ಕರ್ಮದ ಉದಯವಾಗಿದೆ ಎಂದು ತಿಳಿದು ರಾಜಭಂಡಾರದಲ್ಲಿ ಹೋಗಿ ನೋಡಿದನು. ಅಲ್ಲಿ ರಾಜನ ಕಾಲಿನ ಮೆಟ್ಟುಗಳು, ಮಂತ್ರಿಯ ಮುದ್ರಿಕೆ, ಪುರೋಹಿತನ ಯಜ್ಞೋಪವೀತ, ಸೇನಾಪತಿಯ ಖಡ್ಗ, ಹೀಗೆ ನಾಲ್ಕು ವಸ್ತುಗಳಿದ್ದವು. ಅವುಗಳನ್ನು ಎತ್ತಿ ತಂದನು. ದೇಹಾಂತ ಪ್ರಾಯಶ್ಚಿತ್ತದ ಸಮಯದಲ್ಲಿ ಅವನು ಆ ವಸ್ತುಗಳನ್ನು ರಾಜನ ಎದುರಿನಲ್ಲಿಟ್ಟು ಕರ ಜೋಡಿಸಿ ಹೇಳಿದನು.

‘ ರಾಜನ್, ನನ್ನ ಅಪರಾಧವನ್ನು ಕ್ಷಮಿಸೋಣಾಗಲಿ. ನಾನು ಕಳ್ಳರನ್ನು ಹುಡುಕಿದೆನು. ಕಳ್ಳರು ಸಿಗಲಿಲ್ಲ. ಆದರೆ ಕಳ್ಳತನವಾದ ಸ್ಥಾನದಲ್ಲಿ ಈ ನಾಲ್ಕು ವಸ್ತುಗಳು ಸಿಕ್ಕಿವೆ. ಇವನ್ನು ಪರಾಂಬರಿಸೋಣಾಗಲಿ.

ಇದನ್ನು ರಾಜ ಮತ್ತು ಇತರ ಮಂತ್ರಿಜನರು ನೋಡಿ, ಇದೇನು ? ನಮ್ಮ ಕಪಟತನವು ಹೊರಬಿತ್ತಲ್ಲಾ ಎಂದು ದುಃಖಿಯಾದರು. ಪ್ರಜೆಗಳು ಈ ಪ್ರಕಾರವನ್ನು ನೋಡಿ ಈ ದುಷ್ಟ ರಾಜನನ್ನು ರಾಜ್ಯದಿಂದ ಹೊರಪಡಿಸಬೇಕೆಂದು ನಿಶ್ಚಯಿಸಿದರು. ಇದೇ ಉಚಿತವಾಗಿದೆ. ದುಷ್ಟ ಸಂಗತಿಯಿಂದ ಎಲ್ಲರ ಘಾತವಾಗುತ್ತದೆ. ಆ ಸಮಯದಲ್ಲಿ ರಾಜ, ಮಂತ್ರಿ ಪುರೋಹಿತ ಮತ್ತು ಸೇನಾಪತಿಯು ಕ್ರಮವಾಗಿ ಪಾದುಕೆ, ಮುದ್ರಿಕೆ, ಯಜ್ಞೋಪವೀತ ಮತ್ತು ಖಡ್ಗ, ಈ ನಾಲ್ಕು ವಸ್ತುಗಳಾಗಿರುವುದರಿಂದ ಇವರೇ ಕಳ್ಳರು. ಆದುದರಿಂದ ನೀವು ನಾಲ್ಕೂ ಜನರು ಈಗಲೇ ರಾಜ್ಯವನ್ನು ಬಿಟ್ಟು ಹೊರಗೆ ಹೋಗಬೇಕು. ಎಂದು ಪ್ರಜೆಗಳು ಹೇಳಿದ ನಂತರ ಅವರು ನಾಲ್ವರೂ ಮೌನದಿಂದಿದ್ದರು.

ಬಹವೋ ನ ವಿರೋದ್ಧವ್ಯಾ ದುರ್ಜಯೋ ಹಿ ಮಹಾಜನಃ
ಸ್ಫುರಂತಮಪಿ ನಾಗೇಂದ್ರಂ ಭಕ್ಷಯಂತಿ ಪಿಪೀಲಿಕಾಃ ॥

ಸುಭಾಷಿತಾವಲಿ.

ಅನೇಕರೊಡನೆ ವಿರೋಧವನ್ನು ಕಟ್ಟಿಕೊಳ್ಳಬಾರದು. ಯಾಕಂದರೆ ದೊಡ್ಡ ಜನಸಮುದಾಯುವನ್ನು ಜಯಿಸುವುದು ಕಠಿಣವಾಗಿರುತ್ತದೆ. ಯಾಕಂದರೆ ಬಹಳ ಫೂತ್ಕಾರವನ್ನು ಮಾಡವ ಸರ್ಪವನ್ನು ಇರುವೆಗಳ ಸಮುದಾಯವು ತಿಂದು ಹಾಕುತ್ತದೆ. ಅದೇ ಪ್ರಕಾರ ಆ ರಾಜ ಮತ್ತು ಮಂತ್ರಿಯವರೊಡನೆ ಪ್ರೇಮದಿಂದ ವರ್ತಿಸುವ ಪ್ರಜೆಗಳ ಮೇಲೆ ಮತ್ತು ಆ ಭದ್ರ ಪುರುಷನ ಮೇಲೆ ಕಪಟಭಾವ ಮಾಡಿದರಿಂದ ಅದರ ಫಲವು ತತ್ಕಾಲವೇ ಸಿಕ್ಕಿತು. ಅವರ ಮಾನಭಂಗವಾಗಿ ಅದೇ ಸಮಯ ರಾಜ್ಯತ್ಯಾಗ ಮಾಡಿ ಹೋಗಬೇಕಾಯ್ತು. ಆದುದರಿಂದ ಭವ್ಯರೇ ! ಕಪಟ ವ್ಯವಹಾರವು ದೊಡ್ಡ ದುರ್ಗುಣವಾಗಿದೆ, ಅದು ಇಹ ಮತ್ತು ಪರಲೋಕವನ್ನು ಕೆಡಿಸುತ್ತದೆ. ಅದನ್ನು ಮನಸ್ಸಿನಿಂದ ತೆಗೆದು ಹಾಕಿರಿ. ನಿತ್ಯ ಸುಖವನ್ನು ಕೊಡುವ ಆರ್ಜವ ಧರ್ಮವನ್ನು ಮನಸ್ಸಿನಲ್ಲಿಡಿರಿ. ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಎಲೇ ಭವ್ಯಾತ್ಮರೇ ! ನಿಮಗೆ ನಿತ್ಯ ಸುಖದ ಇಚ್ಛೆ ಇದ್ದರೆ ನಿಮ್ಮ ಪರಿಣಾಮವನ್ನು ಶುದ್ಧ ಮತ್ತು ನಿರ್ಮಲವಾಗಿಟ್ಟುಕೊಳ್ಳಿರಿ. ಅನಾದಿಕಾಲದಿಂದ ಈ ಜೀವನು ಮೋಹಜಾಲದಲ್ಲಿ ಸಿಕ್ಕಿಕೊಂಡಿದ್ದಾನೆ. ಆ ಕರ್ಮದ ಕಾರ್ಯದಿಂದ ದುಃಖಿಯಾಗಿದ್ದಾನೆ. ಇದು ಅಸತ್ಯವಲ್ಲ ಸಿದ್ಧ ಸತ್ಯವಾಗಿದೆ.

ನ ಸಿದ್ಧೋಽಸೌ ಹಿ ಸಿದ್ಧಾಂತಃ ಸಿದ್ಧಃ ಸಂದೃಷ್ಟಿತೋ ಯಥಾ
ವಹ್ನಿಯೋಗಾಜ್ಜಲಂ ಚೋಷ್ಣಂ ಶೀತಂ ತತ್ತದಯೋಗತಃ ॥

ಪಂಚಾಧ್ಯಾಯೀ.

ಯಾವ ಪ್ರಕಾರವಾಗಿ ತಣ್ಣೀರು ಅಗ್ನಿಯ ಸಂಸರ್ಗದಿಂದ ಬಿಸಿಯಾಗುತ್ತದೆಯೋ ಮತ್ತು ಅಗ್ನಿಯ ಸಂಸರ್ಗವು ದೂರವಾದ ಕೂಡಲೇ ಪುನಃ ತಣ್ಣಗಾಗುತ್ತದೆಯೋ ಹಾಗೆಯೇ ಈ ಆತ್ಮನು ಅನಾದಿಕಾಲದಿಂದ ವೈಭಾವಿಕ ಪರಿಣಾಮದಿಂದ ಕರ್ಮಬಂಧವನ್ನು ಮಾಡಿಕೊಂಡಿದ್ದಾನೆ. ಅದರಿಂದ ದುಃಖಿಯಾಗಿದ್ದಾನೆ. ಆ ವೈಭಾವಿಕ ಪರಿಣಾಮವನ್ನು ಬಿಟ್ಟರೆ ತನ್ನ ಸ್ವಸ್ವಭಾವದಲ್ಲಿರುತ್ತಾನೆ ಮತ್ತು ಸುಖಿಯಾಗುತ್ತಾನೆ. ಇದು ಪ್ರತ್ಯಕ್ಷ ಸಿದ್ಧವಾಗಿದೆ. ಇದನ್ನು ತಿಳಿದು ನೀವು ಪರಭಾವವನ್ನು ತ್ಯಜಿಸಿರಿ. ಮನಸ್ಸೆಂಬ ಪಾತ್ರದಲ್ಲಿ ಉತ್ತಮ ಆರ್ಜವ ಧರ್ಮವನ್ನು ಧರಿಸಿರಿ. ಆರ್ಜವ ಧರ್ಮದ ಪ್ರಭಾವದಿಂದ ಉದಯದಲ್ಲಿ ಬರುವ ಕರ್ಮಗಳನ್ನು ಸಜ್ಜನರು ಜಯಿಸುತ್ತಾರೆ. ಅದನ್ನು ಜಯಿಸದೆ ಸುಖವು ಲಭಿಸಲಾರದು, ಈ ವಿಷಯವು ಎಲ್ಲರಿಗೂ ಗೊತ್ತಿದೆ. ಆದರೂ ಕರ್ಮಕ್ಕೆ ಒಳಗಾಗುತ್ತಾರೆ. ಇದೆಲ್ಲಾ ಲೋಭದ ಮಹಿಮೆಯಾಗಿದೆ. ಲೋಭದ ವಶದಿಂದ ಕಪಟಿಯಾಗಿ ಅನೇಕ ಪ್ರಕಾರದ ಪಾಪವನ್ನು ಮಾಡುತ್ತಾರೆ. ಆದುದರಿಂದ ನೀವು ವಿವೇಕಿಗಳಾಗಿದ್ದರಿಂದ ಈ ಪಾಪದ ವಿಚಾರವನ್ನು ಮಾಡಿರಿ.

ತ್ಯಜಂತಿ ಶೂರ್ಪವದ್ದೋಷಾನ್
ಗುಣಾನ್ ಗೃಹ್ಣಂತಿ ಸಾಧವಃ,
ದೋಷಗ್ರಾಹೀ ಗುಣತ್ಯಾಗೀ
ಚಾಲನೀವ ಚ ದುರ್ಜನಃ ||

ಸುಭಾಷಿತಾವಲಿ.

ಜ್ಞಾನಿಗಳು ಮೊರದಂತೆ ದೋಷಗಳನ್ನು ಬಿಟ್ಟು ಗುಣಗಳನ್ನು ಗ್ರಹಣೆ ಮಾಡುತ್ತಾರೆ. ಆದರೆ ಅಜ್ಞಾನಿಗಳು ಸಾರಣಿಯಂತೆ ಗುಣಗಳನು

ಬಿಟ್ಟು ದೋಷಗಳನ್ನು ಗ್ರಹಣೆ ಮಾಡುತ್ತಾರೆ. ನೀವು ಜ್ಞಾನಿಗಳಾಗಿರುತ್ತೀರಿ. ಆದುದರಿಂದ ದೋಷಗಳನ್ನು ಬಿಟ್ಟು ಗುಣಗಳನ್ನು ಗ್ರಹಣೆ ಮಾಡಿಕೊಳ್ಳಿರಿ. ಇದರಿಂದಲೇ ನಿಮ್ಮ ಹಿತವಾಗುವುದು. ಹಿತ ಮತ್ತು ಅಹಿತವು ಪರಿಣಾಮದ ಮೇಲೆಯೇ ಅವಲಂಬಿಸಿದೆ.

ಸಜ್ಜನರು ಹೊರಗಿನಿಂದ ಕಠೋರವಾಗಿ ಕಂಡರೂ ಒಳಗಿನಿಂದ ಅವರ ಅಂತಃಕರಣವು ಶೀತಲ ಮತ್ತು ಮೃದುವಾಗಿರುತ್ತದೆ.

ನಾರಿಕೇಲಸಮಾಕಾರಾ ದೃಶ್ಯಂತೇಪಿ ಹಿ ಸಜ್ಜನಾಃ
ಅನ್ಯೇ ಬದರಿಕಾಕಾರಾ ಬಹಿರೇವ ಮನೋಹರಾಃ ॥

ಸುಭಾಷಿತಾವಲಿ.

ಯಾವ ಪ್ರಕಾರವಾಗಿ ತೆಂಗಿನಕಾಯಿಯು ಹೊರಗಿನಿಂದ ಕಠೋರವಾದ ಕವಚದಿಂದ ಯುಕ್ತವಾಗಿರುತ್ತದೆಯೋ ಅದೇ ಪ್ರಕಾರವಾಗಿ ಸಜ್ಜನರು ಮೇಲಿನಿಂದ ಕಠೋರವಾಗಿ ಕಂಡು ಬಂದರೂ ಅಂತಃಕರಣದಲ್ಲಿ ಮೃದು ಮತ್ತು ಕೋಮಲವಾಗಿರುತ್ತಾರೆ. ದುರ್ಜನರು ಬೋರೆಕಾಯಿಯು ಹೇಗೆ ಮೇಲಿನಿಂದ ಸುಂದರ ಮತ್ತು ಕೋಮಲವಾಗಿ ಕಂಡು ಬಂದರೂ ಒಳಗೆ ಕಠಿನವಾದ ಬೀಜವು ತುಂಬಿರುತ್ತದೆಯೋ ಹಾಗೆಯೇ ದುರ್ಜನರು ಮೇಲಿನಿಂದ ಸುಂದರ ಮತ್ತು ಕೋಮಲ, ಧಾರ್ಮಿಕ ಸಜ್ಜನರಂತೆ ಕಂಡರೂ ಒಳಗಿನಿಂದ ಕಪಟಿಗಳಾಗಿರುತ್ತಾರೆ. ಮೇಲಿನಿಂದ ಅವರು ಧಾರ್ಮಿಕ ದಯಾಳುಗಳೆಂದು ತೋರಿಸಿ ನಟಿಸುತ್ತಾರೆ. ಅವರ ಬಲೆಗೆ ಬೀಳಬಾರದು.

ಒಂದು ದಿವಸ ಒಬ್ಬ ಢೋಂಗೀ, ಕಪಟಿಯಾದ ಮಿಥ್ಯಾದೃಷ್ಟಿ ತರುಣನು ಒಬ್ಬ ಸಮ್ಯಗ್‌ದೃಷ್ಟಿ ತರುಣಿಯನ್ನು ನೋಡಿ ಕಾಮುಪರವಶನಾದನು. ಮನೆಗೆ ಹೋಗಿ ತನ್ನ ತಂದೆಗೆ ಅವನು 'ನನ್ನ ಮದುವೆ ಅ

ತರುಣಿಯೊಡನೆ ಮಾಡಿಸಿರಿ " ಎಂದನು. ಅದನ್ನು ಕೇಳಿ ಮಿಥ್ಯಾದೃಷ್ಟಿ ಯಾದ ಆ ಕಪಟ ತಂದೆಯು ಆ ತರುಣಿಯ ಪ್ರಾಪ್ತಿಗಾಗಿ ಅದೇ ಸಮಯ ದಲ್ಲಿ ಜೈನಧರ್ಮವನ್ನು ಧರಿಸಿದನು. ಆಗ ಸಮ್ಯಗ್‌ದೃಷ್ಟಿಯಾದ ಆ ತರು ಣಿಯ ತಂದೆಯು ವಿಚಾರ ಮಾಡುತ್ತಾನೆ. " ಅವನು ಮಿಥ್ಯಾಧರ್ಮದ ತ್ಯಾಗವನ್ನು ಮಾಡಿ ಜೈನಧರ್ಮವನ್ನು ಅಂಗೀಕರಿಸಿದ್ದಾನೆ. ಹೀಗಿರುವಾಗ ಅವನಿಗ ಹೆಣ್ಣು ಕೊಡಲು ಅಡ್ಡಿ ಇಲ್ಲ. ಎಂದು ವಿಚಾರ ಮಾಡಿ ತನ್ನ ಮಗಳ ಮದುವೆಯನ್ನು ಅವನೊಡನೆ ಮಾಡಿದನು. ಆದರ ನಂತರ ಆ ತರುಣ ಮತ್ತು ಅವನ ತಂದೆಯು ಪುನಃ ಮಿಥ್ಯಾಧರ್ಮವನ್ನು ಹಿಡಿದರು. ಆಗ ಆ ತರುಣಿಗೆ ಮತ್ತು ಅವಳ ತಂದೆಗೆ ಬಹಳ ದುಃಖವಾಯ್ತು. ಅವಳು ಗಂಡನ ಮನೆಗೆ ಬಂದರೂ ಅಲ್ಲಿ " ಜೈನಧರ್ಮದಂತೆಯೇ ಆಚರಿಸತೊಡ ಗಿದಳು. ತನ್ನ ಧರ್ಮವನ್ನು ಬಿಡಲಿಲ್ಲ. ಇದನ್ನು ನೋಡಿ ಗಂಡನ ಮನೆ ಯವರೆಲ್ಲರೂ, ಗಂಡನು ಮತ್ತು ಅವಳ ಸವತಿಯೂ ಅವಳೊಡನೆ ಮತ್ಸರ ಮಾಡತೊಡಗಿದರು. ಅವಳಿಗೆ ಅವಳ ಧರ್ಮವನ್ನು ಬಿಡಲು ಬಹಳ ಆಗ್ರಹ ಮಾಡಿದರು. ಆದರೆ ಏನೂ ಉಪಯೋಗವಾಗಲಿಲ್ಲ. ಆಗ " ಇವಳು ಬಹಳ ಹಟಗ್ರಾಹಿಯಾಗಿದ್ದಾಳೆ, ನಮ್ಮ ಮಾತು ಕೇಳುವುದಿಲ್ಲ. ಆದುದ ರಿಂದ ಇವಳನ್ನು ಕೊಂದು ಹಾಕಬೇಕು. " ಎಂದು ದುಷ್ಟ ವಿಚಾರ ಮಾಡಿ ಅವಳ ಗಂಡನು ಒಂದು ಗಡಿಗೆಯಲ್ಲಿ ಒಂದು ವಿಷಧರ ಸರ್ಪವನ್ನು ಹಾಕಿ ಅವಳು ಮಲಗುವ ಸ್ಥಾನದಲ್ಲಿಟ್ಟನು. ಮತ್ತು ಕಪಟಭಾವದಿಂದ ಅವಳಿಗೆ ಈ ಪ್ರಕಾರ ಹೇಳಿದನು. ಪ್ರಿಯೇ, ನೀನು ಬಹಳ ದಿವಸದಿಂದ ಹೂವಿನ ಮಾಲೆಯನ್ನು ಕೇಳುತ್ತಿದ್ದಿಯೇ, ಅದನ್ನು ತಂದು ಈ ಗಡಿಗೆಯಲ್ಲಿ ಹಾಕಿ ಟ್ಟಿದ್ದೇನೆ. ನೀನು ತೆಗೆದುಕೋ ಎಂದನು, ಆಗ ಆ ಸಾಧ್ವಿಯು ಪತಿದೇವನು ನನ್ನ ಮೇಲೆ ಪ್ರಸನ್ನನಾಗಿದ್ದಾನೆ. ಜಿನೇಶ್ವರನ ಕೃಪೆಯಾಗಿದೆ " ಎಂದು ಹೇಳಿ ಆ ಗಡಿಗೆಯ ಸಮೀಪಕ್ಕೆ ಹೋದಳು.

ರಕ್ತೇಕ್ಷಣಂ ಸಮದ ಕೋಕಿಲ ಕಂಠನೀಲಂ
ಕ್ರೋಧೋದ್ಧತಂ ಫಣಿನಮುತ್ಫಣಮಾಪತಂತಂ,
ಆಕ್ರಾಮತಿ ಕ್ರಮಯುಗೇನ ನಿರಸ್ತಶಂಕಃ
ತ್ವನ್ನಾಮನಾಗದಮನೀ ಹೃದಿ ಯಸ್ಯ ಪುಂಸಃ ||

ಭಕ್ತಾಮರಸ್ತೋತ್ರ.

ಆ ಸಮ್ಯಗ್‌ದೃಷ್ಟಿ ತರುಣಿಯು ಈ ಸ್ತೋತ್ರವನ್ನು ಭಕ್ತಿಯಿಂದ ಉಚ್ಚರಿಸುತ್ತಾ ಆ ಗಡಿಗೆಯೊಳಗೆ ಕೈ ಹಾಕಿದಳು, ಭಗವನ್! ರಕ್ತದಂತೆ ಕೆಂಪಾಗಿರುವ ಕೋಕಿಲೆ ಪಕ್ಷಿಯು ಕಂಠದಂತೆ ಕಪ್ಪಾಗಿರುವ, ಮತ್ತು ಫಣೆಯನ್ನು ತೆಗೆದು ಕ್ರೋಧಾಂಧನಾಗಿರುವ ಸರ್ಪವಿದ್ದರೂ ಯಾರಲ್ಲಿ ತಮ್ಮ ಭಕ್ತಿರೂಪೀ ನಾಗದಮನಿ ಎಂಬ ಔಷಧಿಯು ಇವೆಯೋ ಅವರು ಆ ಸರ್ಪವನ್ನು ದಾಟಿ ಹೋಗಬಹದು. ಈ ಭಕ್ತಿಯಿಂದ ಆ ತರುಣಿಯು ಆ ಗಡಿಗೆಯಲ್ಲಿ ನಿರ್ಭಯವಾಗಿ ಕೈ ಹಾಕಲು ಅದರೊಳಗಿದ್ದ ಸರ್ಪವು ಅನೇಕ ಜಾತಿಯ ಉತ್ತಮ ಹೂ ಗಳಿಂದ ಗುಂಫಿತವಾದ ಮಾಲೆಯಾಗಿ ಪರಿಣಮಿಸಿತು. ಅತ್ಯಂತ ಸುಗಂಧಯುಕ್ತವಾದ ಆ ಹೂಮಾಲೆಯನ್ನು ನೋಡಿ ಪತಿ, ಸವತಿ, ಅತ್ತೆ ಮೊದಲಾದವರೆಲ್ಲರೂ ಆಶ್ಚರ್ಯದಿಂದ ಸ್ತಂಭಿತರಾದರು. ಅವಳ ಆ ಹೂ ಮಾಲೆಯನ್ನು ಪತಿಯ ಕಡೆ ತೆಗೆದು ಕೊಂಡು ಹೋಗಿ ಪತಿರಾಜ! ಇದು ತಮ್ಮ ಕಂಠದಲ್ಲಿ ಶೋಭಿಸುವುದು ಎಂದು ಹೇಳಿ ಪತಿಯ ಕಂಠಕ್ಕೆ ಹಾಕಲು ಅದು ಸರ್ಪವಾಗಿ ಪರಿಣಮಿಸಿತು. ಮತ್ತು ಅದು ಪತಿಗೂ ಸವತಿಗೂ ಕಚ್ಚಲಾಗಿ ಅವರು ಮೂರ್ಛಿತರಾದರು.

ಆಗ ಅತ್ತೆಯು ರಾಜನಕಡೆ ಹೋಗಿ ಹೇಳಿದಳು. ‹ ಜೈನರ ಅಹಿಂಸಾ ಧರ್ಮವನ್ನು ಪಾಲಿಸುವ ಮತ್ತು ಎಲ್ಲಾ ಧರ್ಮವನ್ನು ಧಿಕ್ಕರಿಸಿ ತನ್ನ ಧರ್ಮವನ್ನೇ ಶ್ರೇಷ್ಠವೆಂದು ತಿಳಿಯುವ ನನ್ನ ಸೊಸೆಯು ತನ್ನ ಪತಿ

ಮತ್ತು ಸವತಿಯನ್ನು ಕೊಂದು ಹಾಕಿದ್ದಾಳೆ. ಇದು ಎಂಥಹ ಅಹಿಂಸಾ ಧರ್ಮ ? ಎಂದು ಕೇಳಿದಳು.

ಆಗ ರಾಜನು, ಜೈನಧರ್ಮವು ದಯಾಮಯ ಧರ್ಮವಾಗಿರುವುದರಿಂದ ಇದರ ಸತ್ಯಾಸತ್ಯತೆಯನ್ನು ತಿಳಿದು ಕೊಳ್ಳಬೇಕೆಂಬ ಇಚ್ಛೆಯಿಂದ ಅವಳೊಡನೆ ಬಂದನು. ಅಲ್ಲಿ ಬಂದು ನೋಡಲು ನಿಜವಾಗಿಯೂ ಇಬ್ಬರೂ ಸತ್ತು ಬಿದ್ದಿದ್ದಾರೆ. ಸರ್ಪವೂ ಅಲ್ಲಿಯೇ ಇದೆ. ರಾಜನಿಗೆ ನಿಜವಾದ ಸ್ಥಿತಿ ತಿಳಿಯದೆ ಸುಮ್ಮನಾದನು.

ಆ ಸಮ್ಯಗ್‌ದೃಷ್ಟಿ ತರುಣಿಯು ಕಣ್ಣು ಮುಚ್ಚಿ ಣಮೋಕಾರ ಮಂತ್ರ ಹೇಳತೊಡಗಿದಳು. ಮಂತ್ರ ಪ್ರಭಾವದಿಂದ ದೇವಿಯು ಪ್ರಸನ್ನಳಾಗಿ ಹೇಳತೊಡಗಿದಳು. ಬಾಲೇ ! ನೀನು ಹೆದರಬೇಡ. ಅವರ ಮೇಲೆ ಜಿನಗಂಧೋದಕವನ್ನು ಹಾಕು ಅಂದರೆ ಅವರು ಚೇತರಿಸಿಕೊಳ್ಳುವರು. ಹಾಗೆಯೇ ಅವಳು ಭಕ್ತಿಪೂರ್ವಕ ಅಭಿಷೇಕವನ್ನು ಮಾಡಿ ಗಂಧೋದಕವನ್ನು ಅವರ ಮೇಲೆ ಹಾಕಿದಳು. ಪತಿ ಮತ್ತು ಸವತಿಯು ಇಬ್ಬರೂ ಎದ್ದು ಕೂತರು. ಇದನ್ನು ನೋಡಿ ರಾಜನೂ ಆಶ್ಚರ್ಯಚಕಿತನಾದನು. ಮೊದಲಿನ ಎಲ್ಲಾ ಘಟನೆಗಳನ್ನು ದೇವಿಯು ವರ್ಣಿಸಿದಳು. ಇದನ್ನು ಕೇಳಿ ಎಲ್ಲರೂ ಜೈನಧರ್ಮವನ್ನು ಪ್ರಶಂಸಿದರು. ಈ ಸಾಧ್ವಿಯು ಧನ್ಯಳಾಗಿದ್ದಾಳೆ. ಇವಳ ಭಕ್ತಿಯು ಪ್ರಶಂಸನೀಯವಾಗಿದೆ ಎಂದು ಹೇಳಿ ರಾಜನು ಅವಳನ್ನು ಗೌರವಿಸಿದನು.

ಅವರೆಲ್ಲರೂ ಅವಳಿಗೆ ಹೀಗೆಂದರು “ ದೇವೀ ! ನೀನು ನಮ್ಮೆಲ್ಲರನ್ನು ಕ್ಷಮಿಸು. ಕಪಟ ಪರಿಣಾಮದಿಂದ ನಿನ್ನನ್ನು ನಾವು ವಿನಾಕಾರಣ ಮೋಸಗೊಳಿಸಿದೆವು. ನಾವು ಈಗ ಮಿಥ್ಯಾಧರ್ಮವನ್ನು ಬಿಟ್ಟು ಪ್ರಸಿದ್ಧವಾದ ಜೈನಧರ್ಮವನ್ನು ಸ್ವೀಕರಿಸುತ್ತೇವೆ. ಎಂದು ಹೇಳಿ ರಾಜನು ಮೊದಲಾಗಿ ಎಲ್ಲರೂ ಜೈನಧರ್ಮವನ್ನು ಸ್ವೀಕರಿಸಿ ಮಿಥ್ಯಾಧರ್ಮವನ್ನು ಬಿಟ್ಟರು.

ಅವಳ ಪತಿಯು ಹೇಳತೊಡಗಿದನು. ದೇವಿ ! ನೀನು ಸಮ್ಯಗ್ ದೃಷ್ಟಿ ಜಿನಭಕ್ತಳಾಗಿದ್ದೀ. ಆದುದರಿಂದ ನಿನ್ನನ್ನು ಶ್ರೇಷ್ಠಳೆಂದು ತಿಳಿಯುತ್ತೇನೆ. ಆಗ ಆ ಸಾಧ್ವಿಯು ಹೇಳುತ್ತಾಳೆ.

‘ ಪತಿದೇವ ! ಯಾವ ಸಮಯದಲ್ಲಿ ತಮ್ಮ ಪ್ರಾಣವನ್ನು ತೆಗೆದುಕೊಂಡ ಆರೋಪವು ನನ್ನ ಮೇಲೆ ಬಂದಿತ್ತೋ ಅದೇ ಸಮಯದಲ್ಲಿ ನಾನು ಈ ಸಂಕಟದಿಂದ ಮುಕ್ತಳಾದರೆ ಜಿನದೀಕ್ಷೆಯನ್ನು ತೆಗೆದುಕೊಳ್ಳುವೆನೆಂದು ಪ್ರತಿಜ್ಞೆ ಮಾಡಿರುವೆನು. ಆದುದರಿಂದ ಈಗ ನಾನು ಆರ್ಯಿಕೆಯ ದೀಕ್ಷೆಯನ್ನು ತೆಗೆದುಕೊಳ್ಳುವೆನು, ಎಂದಳು.

ಅವಳ ಈ ಮಾತನ್ನು ಕೇಳಿ ರಾಜನು ಮೊದಲಾಗಿ ಅವಳ ಪತಿ, ಅತ್ತೆ ಮೊದಲಾದವರೂ ಎಲ್ಲರೂ ವಿರಕ್ತರಾಗಿ ದೀಕ್ಷಿತರಾದರು. ಮತ್ತು ಆತ್ಮಕಲ್ಯಾಣವನ್ನು ಮಾಡಿಕೊಂಡರು. ಆದುದರಿಂದ ಭವ್ಯಾತ್ಮರೇ ! ನಿಷ್ಕಪಟ ಸಮ್ಯಕ್ತ್ವದಿಂದ ಕೂಡಿದ ಆರ್ಜವ ಧರ್ಮವನ್ನು ಪಾಲಿಸುವುದರಿಂದ ಅವಳ ಕೀರ್ತಿಯು ದಿಗಂತವ್ಯಾಪ್ತವಾಯ್ತು. ಆದುದರಿಂದ ನೀವೂ ಆರ್ಜವ ಧರ್ಮವನ್ನು ಧರಿಸಿರಿ. ಅದರಿಂದ ಆತ್ಮಕಲ್ಯಾಣವಾಗುವುದು. ಇದು ಆಚಾರ್ಯರ ವಚನವಾಗಿದೆ.

ಈ ಪ್ರಕಾರ ಆರ್ಜವ ಧರ್ಮದ ವರ್ಣನೆಯು ಮಾಡಲಾಗಿದೆ.

ಇತಿ ಆರ್ಜವಧರ್ಮಃ ಸಮಾಪ್ತಃ

# ಉತ್ತಮ ಶೌಚಧರ್ಮಾಯ ನಮಃ

## ಮಂಗಲಾಚರಣೆ.

ಶೇಷಾನಪಿ ತೀರ್ಥಕರಾನನಂತಸಿದ್ಧಾನಹಂ ನಮಾಮಿ ಸಮಂ
ಧರ್ಮಾಚಾರ್ಯಾಧ್ಯಾಪಕ ಸಾಧುವಿಶಿಷ್ಟಾನ್ ಮುನೀಶ್ವರಾನ್
ವಂದೇ ||

ಪಂಚಾಧ್ಯಾಯೀ,

ವಸ್ತು ಸ್ವರೂಪವನ್ನು ಪ್ರಕಟಿಸುವಂತಹ ೨೩ ತೀರ್ಥಂಕರರನ್ನು, ಅನಂತಾನಂತ ಸಿದ್ಧರನ್ನು, ಆಚಾರ್ಯ ಸಮೂಹವನ್ನು, ಉಪಾಧ್ಯಾಯ ಮತ್ತು ಸರ್ವಸಾಧುಗಳನ್ನು ಮನ ವಚನ ಕಾಯದ ವಿಶುದ್ಧಿಯಿಂದ ಮತ್ತು ಅತ್ಯಂತ ಭಕ್ತಿಯಿಂದ ನಾನು ಆತ್ಮಸಿದ್ಧಿಗೋಸ್ಕರವಾಗಿ ವಂದಿಸುತ್ತೇನೆ,

ಪ್ರಕರ್ಷಪ್ರಾಪ್ತಲೋಭಾನ್ನಿವೃತ್ತಿಃ ಶೌಚಂ ||

ಸರ್ವಾರ್ಥಸಿದ್ಧಿ.

ಶೌಚವೆಂದರೆ ಶುಚಿತೆ ಅಥವಾ ಪವಿತ್ರತೆ ಎಂದರ್ಥ. ಬಾಹ್ಯ ಶರೀರ ಗಳ ಪವಿತ್ರತೆಯು ಸ್ನಾನದಿಂದಾಗುತ್ತದೆ. ಆದರೆ ಈ ದೇಹವು ಸಪ್ತಧಾತು ಮಯ ಮಲಮೂತ್ರಾದಿಗಳಿಂದ ತುಂಬಿರುವುದರಿಂದ ಅದನ್ನು ನೀರಿನಿಂದ ತೊಳೆದರೆ ಹೇಗೆ ಸ್ವಚ್ಛವಾಗುವುದು, ಮಲದಿಂದ ತುಂಬಿದ ಗಡಿಗೆಯು ನೀರಿನಿಂದ ತೊಳೆದರೆ ಸ್ವಚ್ಛವಾಗಲಾರದು. ಅದನ್ನು ಶುದ್ಧವೆಂದು ತಿಳಿ ಯುವುದು ಶುದ್ಧ ತಪ್ಪು. ಹಾಗೆಯೇ ಶರೀರವು ತೊಳೆದರೆ ಸ್ವಚ್ಛವಾಗ ಲಾರದು. ಆತ್ಮ ಪರಿಣಾಮವನ್ನು ಉಜ್ವಲವಾಗಿ ಮಾಡುವುದರಿಂದ ಶೌಚ ಧರ್ಮವು ಪ್ರಾಪ್ತವಾಗುವುದು.

ರಾಗಕೆ ರೋಷಕಾಗಿ ಲಲನಾದಿ ವಿಯೋಗದೊಳುಗ್ರಯುದ್ಧದೊಳ್
ನೀಗಿದೆನಂಗಕೋಟಿಗಳನಂತದರಿಂ ಭವರೋಗಿಯಾದೆನಾ–
ರೋಗದ ಮೂಲಮಂ ಸುಡುವ ಘೋರತಪಂತಳೆದೊಂದು
ಕಾಯಮಂ
ತ್ಯಾಗಿಸಲಂಜುತಿರ್ದಪೆನಲಾ ಧೃತಿದೋರಪರಾಜಿತೇಶ್ವರಾ ॥

ಶತಕತ್ರಯ

ಪರಮಾತ್ಮನ್ ! ರಾಗಕ್ಕಾಗಿ, ರೋಷಕ್ಕಾಗಿ, ಪ್ರಿಯ ಸ್ತ್ರೀಯರ ವಿಯೋಗದ ದೆಶೆಯಿಂದ, ಘೋರ ಯುದ್ಧಕ್ಕೋಸ್ಕರ ಅನಂತಕೋಟಿ ಶರೀರಗಳನ್ನು ಉಪಯೋಗಿಸಿದ್ದೇನೆ. ಆದುದರಿಂದಲೇ ಭವರೋಗಿಯಾಗಿದ್ದೇನೆ. ಆದರೆ ಈ ರೋಗವನ್ನು ಬೇರಿನಿಂದಲೇ ನಾಶ ಮಾಡುವುದಕ್ಕೆ ಒಂದು ಶರೀರವನ್ನು ಕೂಡ ಕೊಡಲಿಲ್ಲ ಅದಕ್ಕೆ ಅಂಜುತ್ತಿರುವೆನು. ಧೈರ್ಯವನ್ನು ಕೊಡಿರಿ. ಮನವೆಂಬ ಪಾತ್ರವನ್ನು ಅತಿ ಚಾತುರ್ಯದಿಂದ ತೊಳೆಯಬೇಕು ಹೇಗೆ ಒಂದು ಸಣ್ಣ ಉಪ್ಪಿನ ಕಣದಿಂದಲೂ ಮಧುರವಾದ ಹಾಲು ಕೆಟ್ಟು ಹೋಗುತ್ತದೆಯೋ ಹಾಗೆಯೇ ಮಿಥ್ಯಾತ್ವವೆಂಬ ಉಪ್ಪಿನ ತೀಕ್ಷ್ಣವಾದ ಕಣದಿಂದ ಉತ್ತಮ ಶೌಚಧರ್ಮವು ನಾಶವನ್ನು ಹೊಂದುತ್ತದೆ. ಆದುದರಿಂದ ಭವ್ಯರೇ ! ಭಾವನೆಯನ್ನು ಪವಿತ್ರವನ್ನಾಗಿ ಮಾಡಿರಿ. ಕೆಟ್ಟ ಭಾವನೆಯನ್ನು ತೊಳೆಯುವುದೇ ನಿಜವಾದ ಸ್ನಾನವಾಗಿದೆ.

ಸ್ನಾನ ಮಾಡಿದರೇನು ನಿಜ ಸುಜ್ಞಾನ ಶುದ್ಧಿ ಇಲ್ಲಾ.

ಹೀಗೆ ಕನ್ನಡದಲ್ಲಿ ಗಾದೆ ಇದೆ. ಅಂತಃಕರಣಶುದ್ಧಿ ಇಲ್ಲದೆ ಬಾಹ್ಯ ಶರೀರವನ್ನು ಎಷ್ಟು ತೊಳೆದರೂ, ಅತ್ತರ ಸೆಂಟ್, ಗುಲಾಬ ಮೊದಲಾದ ಸುಗಂಧ ದ್ರವ್ಯಗಳ ಲೇಪನೆ ಮಾಡಿದರೂ ಅದಕ್ಕೆ ಪವಿತ್ರತೆಯು ಬರುವುದಿಲ್ಲ. ಗಲನ ಮತ್ತು ಪೂರಣ ಇದು ಶರೀರದ ಸ್ವಭಾವ ಧರ್ಮವಾಗಿದೆ.

ಜೋ ಸ್ವಾಭಾವಿಕ ಆಗರ
ಅಶುಚಿ ಪಣಾಚೆ ನಸೇಚಿ ಸಂದೇಹ
ಪರಿ ರತ್ನತ್ರಯ ಯೋಗೇ
ಜ್ಯಾನೀ ಕೇಲಾ ಪವಿತ್ರ ಶೋ ಗೇಹ ||

ರತ್ನಕರಂಡ.

ಶರೀರವು ಸ್ವಭಾವತಃ ಅಪವಿತ್ರ ಭಂಡಾರವಾಗಿದೆ. ಆದರೂ ರತ್ನತ್ರಯದ ಕಾರಣದಿಂದ ಜ್ಞಾನಿಗಳು ಅದನ್ನು ಪವಿತ್ರವೆಂದು ಹೇಳಿದ್ದಾರೆ. ಆತ್ಮಸ್ವರೂಪದಲ್ಲಿ ಸ್ಥಿರವಾಗಿದ್ದು ಶರೀರದ ವಿಷಯದಲ್ಲಿ ವಿರಕ್ತಭಾವವನ್ನು ಇಡುವುದು ಇದಕ್ಕೆ ಉತ್ತಮ ಶೌಚವೆಂದು ಹೇಳಿದ್ದಾರೆ.

ಮನಸ್ಸನ್ನು ಪವಿತ್ರ ಮಾಡದಿದ್ದರೆ ಮನಸ್ಸಿನಲ್ಲಿ ಶೌಚ ಧರ್ಮವು ಇರಲಾರದು. 'ಮಲಂ ಗಾಲಯತಿ ಇತಿ ಮಂಗಲಂ' ಮನಸ್ಸಿನಲ್ಲಿ ಬರುವ ಪರಭಾವ ವಿಕಾರಗಳನ್ನು ಜ್ಞಾನದಿಂದ ತೆಗೆದು ಹಾಕುವುದು ಮತ್ತು ಮನಸ್ಸನ್ನು ಪವಿತ್ರವನ್ನಾಗಿ ಮಾಡುವುದು ಇದಕ್ಕೆ ಶೌಚ ಧರ್ಮವೆಂದು ಹೇಳಲಾಗಿದೆ. ಹೇಗೆ ಬೇಸಾಯಗಾರನು ಕಳಕಡ್ಡಿಗಳನ್ನು ತೆಗೆದು ಭೂಮಿಯನ್ನು ಸ್ವಚ್ಛ ಮಾಡಿ ನಂತರ ಧಾನ್ಯವನ್ನು ಬಿತ್ತುತ್ತಾನೆಯೋ, ಹಾಗೆಯೇ ಅನಾದಿಕಾಲದಿಂದ ಈ ಮನಸ್ಸೆಂಬ ಪಾತ್ರದಲ್ಲಿ ರಾಗದ್ವೇಷಾದಿ ವಿಕಾರಗಳಿಂದ ಮಿಥ್ಯಾತ್ವವೆಂಬ ಧತ್ತೂರದ ಬೀಜವನ್ನಿಟ್ಟು ಆ ಪಾತ್ರವು ಮಲಿನವಾಗಿದೆ. ಅದನ್ನು ಜ್ಞಾನಿಗಳು ರತ್ನತ್ರಯವೆಂಬ ನೀರಿನಿಂದ ತೊಳೆದು ಸ್ವಚ್ಛಮಾಡಿ ನಂತರ ಆ ಸ್ವಚ್ಛವಾದ ಪಾತ್ರದಲ್ಲಿ ಶೌಚಧರ್ಮವನ್ನಿಡುತ್ತಾರೆ. ಈ ಧರ್ಮದ ಪ್ರಭಾವದಿಂದ ಸತ್ಪುರುಷರು ವಿಕಾರಗಳನ್ನು ಜಯಿಸುತ್ತಾರೆ. ಈ ಶರೀರದಲ್ಲಿ ತ್ರಿಲೋಕ ಪೂಜ್ಯನಾದ, ಅನಂತ ಗುಣಗಳ ಭಂಡಾರನಾದ ಪವಿತ್ರ ಆತ್ಮನ ನಿವಾಸವಿದೆ. ಆ ಆತ್ಮನನ್ನು ತಿಳಿಯದೆ ಈ ಜೀವನು ದುಃಖಿಯಾಗಿದ್ದಾನೆ.

ಆನಂದರೂಪಂ ಪರಮಾತ್ಮ ತತ್ವಂ
ಸಮಸ್ತ ಸಂಕಲ್ಪವಿಕಲ್ಪಮುಕ್ತಂ
ಸ್ವಭಾವ ಲೀನಾ ನಿವಸಂತಿ ನಿತ್ಯಂ
ಜಾನಾತಿ ಯೋಗೀ ಸ್ವಯಮೇವ ತತ್ವಂ ||

ಪರಮಾನಂದ ಸ್ತೋತ್ರ

ಆತ್ಮ ಸ್ವರೂಪದಲ್ಲಿ ಲೀನನಾಗಿರುವ ಜೀವಾತ್ಮನು ಸಮಸ್ತ ಸಂಕಲ್ಪ ವಿಕಲ್ಪಗಳೆಂಬ ವಿಕಾರಗಳನ್ನು ಭೇದವಿಜ್ಞಾನದ ಬಲದಿಂದ ನಷ್ಟ ಮಾಡು ವನು. ಅವನು ಆನಂದ ರೂಪವಾದ ಪರಮಾತ್ಮ ತತ್ವದಲ್ಲಿ ಸದಾ ತನ್ಮಯ ನಾಗಿರುತ್ತಾನೆ. ಇಂಥಹ ಮಹಾತ್ಮನ ಹೃದಯದಲ್ಲಿಯೇ ಶೌಚಧರ್ಮವು ಇರುವುದು. ಇಂಥಹ ಪವಿತ್ರವಾದ ಶೌಚಧರ್ಮದ ಪ್ರಭಾವದಿಂದ ಎಂಥಹ ವಿಘ್ನ ಸಂಕಟ ಉಪಸರ್ಗಗಳು ಬಂದರೂ ಅವು ದೂರವಾಗುವವು.

ಒಂದು ಸಾರಿ ಒಬ್ಬ ಸಮ್ಯಗ್ಜ್ಞಾನಿಯು ಸದಾಚಾರಿಯು ನ್ಯಾಯ ದಿಂದ ವರ್ತಿಸಿ ಉದಾಸೀನ ಭಾವದಿಂದ ಸಂಸಾರ ಮಾಡುತ್ತಿದ್ದನು. ಅಂದರೆ ಸಂಸಾರದ ವಿಷಯದಲ್ಲಿ ಯಾವಾಗಲೂ ವಿರಕ್ತಭಾವವು ಇರುತ್ತಿತ್ತು ಆದುದರಿಂದ ‘ ಆನಂದಂ ಪರಮಂ ಸುಖಂ ’ ಎಂಬ ಮಂತ್ರವನ್ನು ಅನು ಭವ ಮಾಡುತ್ತಾ ಆನಂದವೇ ಪರಮ ಸುಖದ ಕಾರಣವಾಗಿದೆ ಎಂದು ಅನ್ನುತ್ತಿದ್ದನು. ಆದುದರಿಂದಲೇ ಅವನಿಗೆ ಸಂಸಾರದ ಯಾವ ಭೋಗ ಸಾಮಗ್ರಿಯೂ ಅನುಭವಿಸಲು ಸಿಕ್ಕುತ್ತಿತ್ತು. ಯಾವ ವಿಷಯದಲ್ಲಿಯೂ ಅವನಿಗೆ ಕಮ್ಮಿ ಇರಲಿಲ್ಲ. ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯದ ಉದಯ ದಿಂದ ವಿಪುಲ ಭೋಗಗಳನ್ನು ಭೋಗಿಸಿಯೂ ಅವುಗಳಲ್ಲಿ ಅನುರಾಗವ ನ್ನಿಡುತ್ತಿರಲಿಲ್ಲ. ಮತ್ತು ಎಲ್ಲಾ ವ್ಯವಹಾರದಲ್ಲಿ ಅಹಂಕಾರವನ್ನು ಬಿಟ್ಟು ನಿಗರ್ವವೃತ್ತಿಯಿಂದ ನಡೆಯುತ್ತಿದ್ದನು.

ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ
ಸದಸಿ ವಾಕ್ಪಟುತಾ ಯುಧಿ ವಿಕ್ರಮಃ
ಯಶಸಿ ಚಾಭಿರುಚಿರ್ವ್ಯಸನಂ ಶ್ರುತಾ
ಪ್ರಕೃತಿಸಿದ್ಧಮಿದಂ ಹಿ ಮಹಾತ್ಮನಾಂ ॥

ಧರ್ಮನೀತಿಸಾರ ಚಿಂತಾಮಣಿ

ಇಂಥಹ ಮಹಾತ್ಮರ ಮೇಲೆ ವಿಪತ್ತಿಯು ಬಂದರೂ ಅವರು ಧೈರ್ಯದಿಂದ ಚ್ಯುತರಾಗುವುದಿಲ್ಲ. ಅಭ್ಯುದಯವು ಪ್ರಾಪ್ತಿಯಾದರೂ ಗರ್ವಿಷ್ಟರಾಗುವುದಿಲ್ಲ. ಸಭೆಯಲ್ಲಿ ಮಾತಾಡುವ ಚಾತುರ್ಯ ಅವರಲ್ಲಿ ರುತ್ತದೆ. ಯುದ್ಧರಂಗದಲ್ಲಿ ಪರಾಕ್ರಮ, ಕೀರ್ತಿಯ ಕಾರ್ಯದಲ್ಲಿ ಅಭಿರುಚಿ ಶಾಸ್ತ್ರ ಅಭ್ಯಾಸದ ವ್ಯಸನ, ಇದೆಲ್ಲಾ ಇಂಥಹ ಮಹಾತ್ಮರ ಸ್ವಭಾವ ಧರ್ಮವಾಗಿದೆ. ಇಂಥಹ ಸ್ವಭಾವದಿಂದ ಯುಕ್ತನಾಗಿ ಆ ಮಹಾತ್ಮನು ತನ್ನ ಸಮಯವನ್ನು ಕಳೆಯುತ್ತಿದ್ದನು, ಅವನ ಕೀರ್ತಿಯೂ ಎಲ್ಲೆಡೆಯ ಲ್ಲಿಯೂ ಹಬ್ಬಿತು. ಅವನ ಕೀರ್ತಿಯನ್ನು ಕೇಳಿ ಒಬ್ಬ ಮಿಥ್ಯಾದೃಷ್ಟಿ ಗರ್ವಿಷ್ಟನು ‘ ನನ್ನಿಂದ ಹೆಚ್ಚಾದ ಗುಣ ಅವನಲ್ಲಿ ಏನಿದೆ ? ಮೂರ್ಖರು ವ್ಯರ್ಥವಾಗಿ ಅವನ ಗುಣವರ್ಣನೆಯನ್ನು ಮಾಡುತ್ತಾರೆ. ನಾನು ಈಗಲೇ ಸರ್ವ ಸಂಪತ್ತಿಯನ್ನು ಅಪಹರಿಸಿ ತರುತ್ತೇನೆ. ಬಹಳ ಗುಣವಂತನಿದ್ದರೆ ನನ್ನ ಕಡೆಯಿಂದ ಅವನು ಅವನ ಸಂಪತ್ತಿಯನ್ನು ಹಿಂದೆ ಹೇಗೆ ತೆಗೆದು ಕೊಂಡು ಹೋಗುವನು ? ಎಂದು ನೋಡುತ್ತೇನೆ. ಎಂದು ವಿಚಾರ ಮಾಡಿ ವಿದ್ಯೆಯ ಸಾಮರ್ಥ್ಯದಿಂದ ಅವನ ಎಲ್ಲಾ ರತ್ನಭಂಡಾರಗ ಳನ್ನು ಎತ್ತಿ ತಂದನು, ಮತ್ತು ತನ್ನ ಭಂಡಾರದ ಸಮೀಪ ಇಟ್ಟನು.

ನೋಡಿ, ಪುಣ್ಯದ ಚಮತ್ಕಾರ ಹೇಗಿದೆ, ಇತ್ತ ಸಮ್ಯಗ್ದೃಷ್ಟಿಯು ವಿಚಾರ ಮಾಡುತ್ತಿದ್ದಾನೆ. ಆ ಧನವು ಹೋದರೆ ಹೋಗಲಿ, ಅದು ಪರ ಕೀಯ ವಸ್ತು. ಅವನದ್ದು ಇತ್ತು. ಅವನ್ನು ತೆಗೆದುಕೊಂಡು ಹೋದನು.

ಆದರೆ ನನ್ನ ಆತ್ಮ ಧನವೆಂಬ ಧನವು ನನ್ನದಾಗಿದೆ. ಅದು ಅನಂತ ಗುಣದ ಭಂಡಾರವಾಗಿದೆ. ನನ್ನ ಹತ್ತಿರವೇ ಇದೆ. ಎಂದು ವಿಚಾರ ಮಾಡಿ ರತ್ನ ತ್ರಯ ಸ್ವರೂಪವಾದ ಆತ್ಮಧನನಲ್ಲಿ ಸ್ಥಿರನಾಗಿದ್ದನು.

ಸ ನಾ ಮನೋಜ್ಞಃ ಸ ವಿಭುಃ ಸ ವೀರಃ
ಶ್ರೀಮಾನ್ ಸ ದಾನೀ ಬಲವಾನ್ ಸ ಧೀರಃ
ಜ್ಞಾನೀ ಸ ಯೋಗ್ಯೋ ವಿಮಲಃ ಸರಾಜಾ
ಭಕ್ತ್ಯಾ ಸದಾ ಯಸ್ಯ ಕರೋತಿ ಧರ್ಮಂ ॥

ಸುಭಾಷಿತಾವಲಿ.

ಧನದ ಲೋಭವು ಬಹಳ ಕೆಟ್ಟದಾಗಿದೆ. ಆದರೆ ಆ ಆತ್ಮವಿಜ್ಞಾನಿಯ ಧನದ ಭಂಡಾರವನ್ನು ಅಪಹರಿಸಿ ತೆಗೆದುಕೊಂಡು ಹೋದರೂ ಅವನ ಮನಸ್ಸಿನಲ್ಲಿ ಸ್ವಲ್ಪವೂ ಸಂಕಲ್ಪ ವಿಕಲ್ಪಗಳಾಗಲಿಲ್ಲ. ಅವನ ಮನಸ್ಸಿಗೆ ಸ್ವಲ್ಪ ಸ್ಪರ್ಶವೂ ಆಗಲಿಲ್ಲ. ಯಾವನು ಭಕ್ತಿಪೂರ್ವಕ ಯಾವಾಗಲೂ ಧರ್ಮಕಾರ್ಯದಲ್ಲಿ ಸ್ಥಿರನಾಗಿರುತ್ತಾನೆಯೋ ಅವನೇ ಮನೋಜ್ಞ, ಸ್ವಾಭಿಮಾನೀ, ವೀರ, ಮತ್ತು ಜ್ಞಾನಿಯೂಗಿರುತ್ತಾನೆ. ಅವನೇ ದಾನೀ, ಬಲಶಾಲೀ, ಧೈರ್ಯಶಾಲಿ, ಸದ್ಗುಣೀ ಮತ್ತು ಪವಿತ್ರನಾಗಿರುತ್ತಾನೆ.

ಆ ಮಿಥ್ಯಾದೃಷ್ಟಿಯು ಮಾತ್ರ ನಾನು ಅವನ ಭಂಡಾರವನ್ನು ಅಪಹರಿಸಿ ತಂದಿದ್ದೇನೆಂದು ಆನಂದ ಪಡುತ್ತಿದ್ದನು. ಇಷ್ಟರಲ್ಲಿ ಸಮ್ಯಗ್ ದೃಷ್ಟಿಯ ಪುಣ್ಯದ ಉದಯದಿಂದ ಒಬ್ಬ ದೇವತೆಯು ಅವನ ಭಂಡಾರ ವನ್ನು ಪೂರ್ವವತ್ ಅಲ್ಲಿಯೇ ತಂದು ಇಟ್ಟಿತು. ಮತ್ತು ಮಿಥ್ಯಾದೃಷ್ಟಿಯ ಖಜಾನೆಗೆ ಬೆಂಕಿ ಕೊಟ್ಟಿತು. ಇದನ್ನು ನೋಡಿ ಆ ಮಿಥ್ಯಾದೃಷ್ಟಿಯು ಅನೇಕ ಸಂಕಲ್ಪ ವಿಕಲ್ಪಗಳಿಂದ ಆಕ್ರೋಶ ಮಾಡಿ ಅನೇಕ ಕರ್ಮಗಳನ್ನು ಕಟ್ಟಿಕೊಂಡನು. ಮತ್ತು ಪುನಃ ವಿಚಾರ ಮಾಡತೊಡಗಿದನು. :ಇದರಿಂದ ನನ್ನ ಅಪಮಾನವಾಗಿದೆ. ಆದುದರಿಂದ ಇನ್ನು ಯಾವ ಪ್ರಕಾರ ಅವನಿಗೆ

ತೊಂದರೆ ಕೊಡಲಿ ' ಎಂದು ಆ ಸಮ್ಯಗ್ದೃಷ್ಟಿಯನ್ನು ವಿದ್ಯೆಯ ಬಲದಿಂದ ಎತ್ತಿ ತಂದು ಆ ಸುಡುತ್ತಿರುವ ಖಜಾನೆಯ ಬೆಂಕಿಯಲ್ಲಿ ಹಾಕಿದನು. ಆದರೂ ಅವನು ಧ್ಯಾನಸ್ಥನಾಗಿಯೇ ಇದ್ದನು. ' ಅಗ್ನಿಯು ನನಗೇನು ಮಾಡುತ್ತದೆ. ಜಡವಾದ ಶರೀರವನ್ನು ಅದು ಸುಡಬಹುದು. ಆತ್ಮನನ್ನು ಅದು ಸುಡಲು ಸಾಧ್ಯವಿಲ್ಲವೆಂದು ವಿಚಾರ ಮಾಡಿ ಚಿದಾನಂದ ಚಿದ್ರೂಪವಾದ ಆತ್ಮ ಸ್ವಭಾವದಲ್ಲಿ ಸ್ಥಿರನಾಗಿದ್ದನು.

**ಪರಮ ಕಲ್ಯಾಣ ಭಾಜನ ಮೆ ಮೇ ಅಮೃತ ಸ್ವಾದ ಪಾವೂಂಗಾ**
**ಮಿಟಾಕರ ಆಧಿ ಅರು ವ್ಯಾಧಿ ಮೇ ಆನಂದಹಿಯ ಮನಾವೂಂಗಾ**
**ಜಗತ್ ಜಂಜಾಲಕೋ ತಜಕರ ಮುಝೆ ರಹನಾ ಹೈ ನಿರ್ದ್ವಂದೀ**
**ಮೇ ಸಂಕಟ ಅಗ್ನಿಕೋ ಸಮಜಲ ಅಬ ಖೂಬಹೀ ಬುಝಾ**
**ವೂಂಗಾ ||**

ಅಧ್ಯಾತ್ಮಪದ ಸಂಗ್ರಹ.

ಈ ಪ್ರಕಾರ ಧ್ಯಾನ ಮಾಡುತ್ತಾ ಆತ್ಮಸ್ವರೂಪದಲ್ಲಿ ಸ್ಥಿರನಾಗಿದ್ದನು. ಅವನ ಧ್ಯಾನದ ಪ್ರಭಾವದಿಂದ ಅಗ್ನಿಯ ಸಂತಾಪವು ಅವನಿಗಾಗದೆ ತತ್ಕ್ಷಣ ದೇವತೆಯು ಅವನನ್ನು ರತ್ನಮಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಮಂಜುಳ ಸ್ವರದಿಂದ ಅವನನ್ನು ಸ್ತುತಿಸಿತು. ಇದನ್ನೆಲ್ಲಾ ನೋಡಿ ಎಲ್ಲರೂ ' ಈ ಸಮ್ಯಗ್ದೃಷ್ಟಿಯು ಧನ್ಯನಾಗಿದ್ದಾನೆ. ಧರ್ಮಾತ್ಮನು ' ಈ ಪ್ರಕಾರ ಜಯಘೋಷ ಮಾಡಿದರು. ಅವನ ಕೀರ್ತಿಯೂ ಎಲ್ಲಾ ದಿಕ್ಕುಗಳಲ್ಲಿಯೂ ಹಬ್ಬಿತು. ದೇವತೆಗಳು ಆ ಮಿಥ್ಯಾದೃಷ್ಟಿಯನ್ನು ಎತ್ತಿ ಅಗ್ನಿಯಲ್ಲಿ ಹಾಕಿದರು. ಆಗ ಅವನು ಬಹಳ ಕಾತರನಾಗಿ ಬೊಬ್ಬೆ ಹೊಡೆದು ' ಎಲೇ ಧರ್ಮಾತ್ಮನೇ ! ನನ್ನನ್ನು ರಕ್ಷಿಸು. ಎಂದನು. ಇದನ್ನು ಕೇಳಿ ದಯಾಳುವಾದ ಸಮ್ಯಗ್ದೃಷ್ಟಿಯು ದೇವತೆಗಳಿಗೆ ಅವನನ್ನು ರಕ್ಷಿಸಲು ಆಜ್ಞೆಯನ್ನಿತ್ತನು, ಆಜ್ಞೆಯಂತೆ ದೇವತೆಗಳು ಅವನನು

ಅಗ್ನಿಯ ತಾಪದಿಂದ ಬಿಡಿಸಿವರು. ನೋಡಿ, ದುಷ್ಟರ ದುರ್ಗುಣ ಮತ್ತು ದುಷ್ಕೃತ್ಯವು ಸಜ್ಜನರ ಕೀರ್ತಿಗೆ ಕಾರಣವಾಗುತ್ತದೆ.

ತೋ ಖಲ ಸುಖಾಂತ ರಾಹೋ
ಸಜ್ಜನ ತೇಣೇಚಿ ಹೋತಿ ವಿಖ್ಯಾತ
ಘೇವುನಿ ಆಶ್ರಯ ತ್ಯಾಂಚಾ
ಭವಸಾಗರಿ ಜೀವ ತರುನ ಜಾತಾತ ॥

ದುಷ್ಟರ ಕಾರಣದಿಂದ ಸಜ್ಜನರು ಪ್ರಸಿದ್ಧರಾಗುತ್ತಾರೆ. ಸಜ್ಜನರ ಆಶ್ರಯದಿಂದ ಎಲ್ಲರೂ ಈ ಸಂಸಾರ ಸಮುದ್ರವನ್ನು ದಾಟಿ ಹೋಗುತ್ತಾರೆ. ಆದುದರಿಂದ ದುಷ್ಟರು ಸಜ್ಜನರ ಕರ್ಮ ನಿರ್ಜರೆಗೆ ಕಾರಣರಾಗುತ್ತಾರೆ. ಮತ್ತು ದುಷ್ಟರಿಂದ ಸಜ್ಜನರ ಕೀರ್ತಿಯು ಬೆಳೆಯುತ್ತದೆ. ಆದುದರಿಂದ ದುಷ್ಟರು ಬದುಕಿರಲಿ. ಮತ್ತು ಸಜ್ಜನರ ಕರ್ಮ ನಿರ್ಜರೆಯನ್ನು ಮಾಡಿಸಲಿ.

ಆ ಮಿಥ್ಯಾದೃಷ್ಟಿಯು ಧನಹೀನ, ಮಾನಹೀನನಾಗಿ ಅತ್ಯಂತ ದೀನವಾಣಿಯಿಂದ ' ಇನ್ನಾದರೂ ನನಗೆ ಏನು ಗತಿ ಎಂಬುದನ್ನು ಹೇಳಿ ನನ್ನ ರಕ್ಷಣೆಯನ್ನು ಮಾಡಿರಿ ' ಎಂದನು. ಆಗ ಆ ಸಮ್ಯಗ್‌ದೃಷ್ಟಿಯು ಹೇಳುತ್ತಾನೆ.

ನಿನಗೆ ಏನು ಬೇಕು ? ಹೇಳು. ಚಿಂತಿತ ಪದಾರ್ಥವನ್ನು ಕೊಡುವ ಚಿಂತಾಮಣಿ ರತ್ನವನ್ನು ಕೊಡುವೆನು. ತೆಗೆದುಕೋ, ಇನ್ನು ಅಧರ್ಮವನ್ನು ಬಿಟ್ಟು ಮನಸ್ಸನ್ನು ಪವಿತ್ರವನ್ನಾಗಿ ಮಾಡು. ಮತ್ತು ಆ ಮನಸ್ಸಿನಲ್ಲಿ ಶೌಚಧರ್ಮವನ್ನು ಧಾರಣೆ ಮಾಡಿಕೊ " ಎಂದು ಅವನಿಗೆ ನಾನಾ ವಿಧದಿಂದ ಉಪದೇಶವನ್ನು ಕೊಟ್ಟನು. ಅವನು ಸ್ವಯಂ ಸಂಸಾರದಿಂದ ವಿರಕ್ತನಾದನು. ಸಂಸಾರದಿಂದ ವಿರಕ್ತನಾಗಿ ಭೇದವಿಜ್ಞಾನದ ಬಲದಿಂದ ಮೋಕ್ಷವನ್ನು ಪಡೆದುಕೊಂಡನು. ಆತ್ಮಧರ್ಮದ ಶಕ್ತಿಯು ಎಷ್ಟು ಅಪಾರವಾಗಿದೆ? ನೋಡಿರಿ.

ಆದ್ದರಿಂದ ಭವ್ಯರೇ ! ನೀವೂ ವಿಚಾರ ಮಾಡಿ ಶೌಚಧರ್ಮವನ್ನು ಧರಿಸಿ ಆತ್ಮಶುದ್ಧಿಯನ್ನು ಮಾಡಿ ಕೊಳ್ಳಿರಿ. ಎಲ್ಲಾ ಉಪಾಧಿಗಳಿಗೆ ಕಾರಣವಾದ ಲೋಭವನ್ನು ತ್ಯಜಿಸಿರಿ. ನೀವು ಸುಖಿಗಳಾಗಿರಿ. ಈ ಮಿಥ್ಯಾ ದೃಷ್ಟಿ ಜೀವಾತ್ಮನು ಯಥಾರ್ಥ ಸುಖವನ್ನು ತಿಳಿಯದೆ ಅನಾದಿಕಾಲದಿಂದ ಪರವಸ್ತುಗಳಲ್ಲಿ ಮೋಹರಾಗವನ್ನು ಮಾಡಿ ಸಂಸಾರ ಎಂಬ ಸಮುದ್ರದಲ್ಲಿ ಬಿದ್ದು ದುಃಖವನ್ನು ಅನುಭವಿಸುತ್ತಿದ್ದಾನೆ. ಎಲ್ಲಾ ಧರ್ಮಗಳನ್ನು ನಾಶ ಮಾಡುವುದೇ ಮಿಥ್ಯಾತ್ವವಾಗಿದೆ. ಇದು ಆತ್ಮನನ್ನು ತನ್ನ ಸುಖ ಸ್ವಭಾವದಿಂದ ವಂಚಿತನನ್ನಾಗಿ ಮಾಡುತ್ತದೆ.

ಮಿಥ್ಯಾತ್ವಂ ಸರ್ವದಾ ಹೇಯಂ
ಧರ್ಮಂ ವರ್ಧಯತಾ ಸತಾ
ವಿರೋಧೋ ಹಿ ತಯೋರ್ಬಾಢಂ
ಮೃತ್ಯು ಜೀವಿತಯೋರಿವ॥

ಎಲೇ ಜೀವನೇ ! ನಿನಗೆ ಸುಖದ ಅಪೇಕ್ಷೆ ಇದ್ದರೆ ಸುಖವನ್ನು ನಷ್ಟ ಮಾಡುವ ಮಿಥ್ಯಾತ್ವವನ್ನು ಮೂಲದಿಂದಲೇ ನಷ್ಟ ಮಾಡು. ಮತ್ತು ಅಲ್ಲಿ ಉತ್ತಮ ಶೌಚವೆಂಬ ಸದ್ಧರ್ಮದ ಬೀಜವನ್ನು ಬಿತ್ತು. ಹೀಗೆ ಮಾಡದಿದ್ದರೆ ಸುಖವು ಲಭಿಸಲಾರದು. ಮಿಥ್ಯಾತ್ವವನ್ನು ತ್ಯಾಗ ಮಾಡದೆ ಈ ಅಜ್ಞಾನೀ ಜೀವನು ಹಿಂಸಾದಿ ಪಾಪ ಕರ್ಮಗಳಿಂದ ಅನೇಕ ದುಃಖಗಳನ್ನು ಅನುಭವಿಸುತ್ತಿರುವನು.

ಒಂದು ಕಡೆಯಲ್ಲಿ ಈ ಪ್ರಕಾರದ ಘಟನೆಯ ಉಲ್ಲೇಖವಿದೆ. ಒಬ್ಬ ಮುನಿಗಳು ಹಾದಿಯಿಂದ ಹೋಗುತ್ತಿದ್ದರು. ದಾರಿಯಲ್ಲಿಯೇ ಸೂರ್ಯಾಸ್ತವಾಯಿತು. ಮುಂದೆ ಹೋಗದೆ ಅಲ್ಲಿಯೇ ಧ್ಯಾನಸ್ತರಾಗಿ ಕುಳಿತುಕೊಂಡರು. ಇದನ್ನು ನೋಡಿ ಒಬ್ಬ ಒಕ್ಕಲಿಗತಿ ಹೇಳತೊಡಗಿದಳು ಇದು ನನ್ನ ಭೂಮಿಯಾಗಿದೆ. ಇಲ್ಲಿ ಏಕೆ ಕೂತು ಕೊಂಡಿರಿ ? ಆದರೂ

ಮುನಿಗಳು ಧ್ಯಾನಸ್ಥರಾಗಿಯೇ ಇದ್ದರು. ಇದರಿಂದ ಸಿಟ್ಟಿಗೆ ಬಂದು ಅವಳು ಮುನಿಗಳ ನಿಂದೆ ಮಾಡಿ ಅವರನ್ನು ಸುಡುವ ಉದ್ದೇಶದಿಂದ ಬೆಂಕಿಯನ್ನು ಹತ್ತಿಸಿದಳು. ಆದರೂ ಮುನಿಗಳು ತಮ್ಮ ಧರ್ಮದಿಂದ ವಿಚಲಿತರಾಗಲಿಲ್ಲ. ಹನ್ನೆರಡು ಅನುಪ್ರೇಕ್ಷೆಗಳ ಚಿಂತನೆಯನ್ನು ಮಾಡಿದರು.

**ದೇಹ ನ ಅಪುಲಾ ಬಸೆ ಖರೋಖರ ಸಾಂಗ ಮಜಾತವ ಕೋಣ**
**ಲಕ್ಷ್ಮೀ ಚಂಚಲ ಬಾಂಧವ ಅಸತೀ ಮಜೆ ಉಘಡ ಹೇ ಜಾಣ॥**

ಬಾರಾ ಅನುಪ್ರೇಕ್ಷಾ.

ಈ ಶರೀರವೇ ನನ್ನದಲ್ಲ, ಹೀಗಿರುವಾಗ ಬೇರೆಯವರು ನಿನ್ನವರು ಹೇಗೆ ಆಗುತ್ತಾರೆ. ಲಕ್ಷ್ಮೀ, ಬಾಂಧವರು, ವೈಭವ, ಇವೆಲ್ಲಾ ಚಂಚಲವಾಗಿವೆ.

ಎಂಬ ಶುಭ ಚಿಂತನೆಯಿಂದ ಶರೀರ ತ್ಯಾಗ ಮಾಡಿ ಸ್ವರ್ಗದಲ್ಲಿ ಉತ್ತಮ ಸುಖವನ್ನು ಪ್ರಾಪ್ತ ಮಾಡಿದರು. ಆ ಒಕ್ಕಲಿಗಿತಿಯಾದ ಧನಶ್ರೀಯು ಮುನಿಗಳನ್ನು ಸುಟ್ಟು ಆ ಪಾಪದಿಂದ ನರಕಕ್ಕೆ ಹೋದಳು. ಆ ಮುನಿಗಳು ಸ್ವಧರ್ಮದಿಂದ ಚ್ಯುತರಾಗದಿರುವುದರಿಂದ ಸ್ವರ್ಗಕ್ಕೆ ಹೋದರು. ಭವ್ಯರೇ ! ಅಹಿಂಸಾ ಧರ್ಮವನ್ನು ಪರಿಪಾಲಿಸಿರಿ. ಅಹಿಂಸಾ ಧರ್ಮದ ಪಾಲನೆಯಿಂದ ನೀಚನೂ ಉಚ್ಚನಾಗುತ್ತಾನೆ.

**ಘೋರ ಅಹಿಂಸಾಣುವ್ರತ ಧಾರಣ ಕೇಲ್ಯಾ ಮುಳೇಚ ಚಿರಕಾಲ**
**ಜಾತೀಚಾ ಚಾಂಡಾಳ ಹಿ ಪೂಜ್ಯ ಜಗೀ ಹೊ ಪರಂತು**
**ಯಮಪಾಲ॥**

ರತ್ನಕರಂಡ.

ಜಾತಿಯಿಂದ ಚಾಂಡಾಲನಾದ ಯಮಪಾಲನೂ ಚತುರ್ದಶಿಯ ದಿವಸ ಹಿಂಸೆಯನ್ನು ಮಾಡುವುದಿಲ್ಲವೆಂಬ ವ್ರತದಿಂದ ಲೋಕದಲ್ಲಿ ಪ್ರಸಿದ್ಧನಾದನು. ಆ ಪ್ರಕಾರ ನೀವೂ ಮನಸ್ಸನ್ನು ಪವಿತ್ರ ಮಾಡಿ ಮನಸ್ಸಿನಲ್ಲಿ ಶೌಚಧರ್ಮವನ್ನು ಧರಿಸಿರಿ. ಈ ಧರ್ಮವು ಪರಂಪರೆಯಿಂದ ಮುಕ್ತಿಯನ್ನು ಕೊಡುವುದಾಗಿದೆ. ಅದನು ಪರಿಪಾಲಿಸಿ ಮುಕ್ತಿಯನ್ನು ಪಡೆಯಿರಿ.

ಎಲೇ ಜೀವಾತ್ಮನೇ ! ಧರ್ಮದಿಂದ ಎಲ್ಲಾ ವಿಘ್ನಗಳೂ ದೂರವಾಗುತ್ತವೆ. ಆದುದರಿಂದ ನೀನು ಮನಸ್ಸನ್ನು ಪವಿತ್ರ ಮಾಡು. ಆ ಮನಸ್ಸಿನಲ್ಲಿ ಉತ್ತಮ ಶೌಚಧರ್ಮವನ್ನು ಧರಿಸು.

ಧರ್ಮೇಣ ಹನ್ಯತೇ ಶತ್ರುರ್ಹನ್ಯತೇ ವೈ ತಥಾ ಗ್ರಹಃ ।
ಧರ್ಮೇಣ ಹನ್ಯತೇ ವ್ಯಾಧಿರ್ಯತೋ ಧರ್ಮಸ್ತತೋ ಜಯಃ ॥

ಸುಭಾಷಿತರತ್ನಾವಳಿ.

ನೋಡಿ. ಒಂದು ಕಡೆಯಲ್ಲಿ ಹೀಗೆ ಘಟನೆಯಾಗಿದೆ.

ಒಬ್ಬ ಸಮ್ಯಗ್‌ದೃಷ್ಟಿ ಗೃಹಸ್ಥನು ತನ್ನ ಆತ್ಮ ಚಿಂತನೆಯಲ್ಲಿ ಸ್ಥಿರವಾಗಿದ್ದನು. ಆ ಸಮಯದಲ್ಲಿ ಒಬ್ಬ ಮಿಥ್ಯಾದೃಷ್ಟಿಯು ಅವನನ್ನು ಧ್ಯಾನದಿಂದ ವಿಚಲಿತನನ್ನಾಗಿ ಮಾಡಲು ಪ್ರಯತ್ನಿಸಿದನು. ಪೂರ್ವಜನ್ಮದ ವೈರವಿದ್ದಕಾರಣ ಅವನನ್ನು ಎತ್ತಿ ನೆಲಮಾಳಿಗೆಯಲ್ಲಿ ಹಾಕಿ ಬಿಟ್ಟನು. ಮತ್ತು ಅಲ್ಲಿ ಒಬ್ಬ ಕಾವಲುಗಾರನನ್ನು ಕುಳ್ಳಿರಿಸಿದನು. ಈ ಸ್ಥಿತಿಯಲ್ಲಿಯೂ ಆ ಸಮ್ಯಗ್‌ದೃಷ್ಟಿಯು ಮನಸ್ಸನ್ನು ಸ್ಥಿರ ಮಾಡಿ ಆತ್ಮಚಿಂತನೆಯಲ್ಲಿ ಮಗ್ನನಾದನು.

ಧರ್ಮಪ್ರಸಾದಾತ್ಸಕಲಾಶ್ಚ ಜೀವಾಃ
ಸ್ವರಾಜ್ಯ ಲಕ್ಷ್ಮೀಂ ಚ ಕ್ರಮೇಣ ಲಬ್ಧ್ವಾ
ಸಂಸಾರಕೂಪಾದ್ಧಿ ತರಂತಿ ಶೀಘ್ರಂ
ಧರ್ಮಸ್ಯ ಲೋಕೇ ಮಹಿಮಾಹ್ಯಚಿಂತ್ಯಾ

ಬೋಧಾಮೃತಸಾರ.

ಈ ಸಂಸಾರದಲ್ಲಿ ಎಲ್ಲಾ ಪ್ರಾಣಿಗಳಿಗೆ ಈ ಧರ್ಮವೇ ಶ್ರೇಷ್ಠ ವೈಭವನ್ನು ಕೊಡುವುದಾಗಿದೆ. ಧರ್ಮದಿಂದ ಎಲ್ಲಾ ವೈಭವಗಳು ತನ್ನಷ್ಟಕ್ಕೆ ತಾನೇ ಬರುತ್ತವೆ. ಧರ್ಮದಿಂದಲೇ ಚಕ್ರವರ್ತಿ ತೀರ್ಥಂಕರ ದೇವೇಂದ್ರಾದಿಗಳ ಸರ್ವ ವೈಭವವೂ ಪ್ರಾಪ್ತವಾಗುತ್ತದೆ. ಈ ಧರ್ಮವನ್ನು ಹೃದ

ಯದಲ್ಲಿ ಧರಿಸಿದರೆ ಮುಕ್ತಿಯೆಂಬ ಲಕ್ಷ್ಮಿಯೂ ವರಿಸುತ್ತಾಳೆ. ಮತ್ತು ಎಲ್ಲಾ ದುಃಖಗಳೂ ದೂರವಾಗುತ್ತವೆ.

ನಾನು ಅಚಿಂತ್ಯ ನಿರಂಜನ ಸ್ವರೂಪಿಯಾಗಿದ್ದೇನೆ. ಹೀಗೆ ವಿಚಾರ ಮಾಡಿ ಅವನು ತನ್ನ ಆತ್ಮ ಸ್ವರೂಪದಲ್ಲಿ ಸ್ಥಿರವಾಗಿದ್ದನು. ಆ ಧ್ಯಾನದ ಸಾಮರ್ಥ್ಯದಿಂದ ಆ ನೆಲಮಾಳಿಗೆಯು ಭೂಮಿಯ ಹಾಗೆ ಆಯ್ತು. ಅಲ್ಲಿ ತನ್ನಿಂದ ತಾನೇ ಸಿಂಹಾಸನವು ಸಿದ್ಧವಾಯಿತು. ಅದರಲ್ಲಿ ಅವನನ್ನು ಕುಳ್ಳಿರಿಸಿ ದೇವತೆಗಳು ಸ್ತುತಿಸಿದರು. ಇದನ್ನು ನೋಡಿ ಮಿಥ್ಯಾದೃಷ್ಟಿಯು ಆಶ್ಚರ್ಯಚಕಿತನಾದನು. ಮತ್ತು ಆ ಸಮ್ಯಗ್ದೃಷ್ಟಿಗೆ ನಿವೇದಿಸಿದನು. ಭದ್ರ ! ನನ್ನ ಅಪರಾಧವಾಯಿತು. ಕ್ಷಮಿಸಬೇಕು. ನಾನು ಇಂಥಹ ಪಾಪ ಬುದ್ಧಿಯನ್ನು ಎಂದೂ ಮಾಡಲಾರೆನು. ನನ್ನ ಹೃದಯವನ್ನು ಪವಿತ್ರ ಮಾಡಿ ಉತ್ತಮ ಶೌಚ ಧರ್ಮವನ್ನು ಧರಿಸುವೆನು. ಆ ಪ್ರಕಾರ ವರ್ತಿಸಿ ತನ್ನ ಮುಂದಿನ ಗತಿಯನ್ನು ಸುಧಾರಿಸಿ ಕೊಂಡು ಆತ್ಮಕಲ್ಯಾಣವನ್ನು ಮಾಡಿಕೊಂಡನು.

ಆದುದರಿಂದ ಭವ್ಯರೇ ! ಒಬ್ಬ ಜೀವನು ತನ್ನ ಧರ್ಮದಲ್ಲಿ ದೃಢವಾಗಿದ್ದು ತನ್ನ ಆತ್ಮಕಲ್ಯಾಣವನ್ನು ಮಾಡಿಕೊಂಡನು. ದೇವತೆಗಳಿಂದಲೂ ವಂದ್ಯನಾದನು. ಮತ್ತು ಬೇರೆಯವರ ಮನಸ್ಸಿನಲ್ಲಿಯೂ ಇದ್ದ ವೈರವನ್ನು ದೂರ ಮಾಡಿದನು. ಈ ನಿಜವಾದ ಧರ್ಮದಲ್ಲಿ ಎಷ್ಟು ದೊಡ್ಡ ಶಕ್ತಿ ಇದೆ. ಇದನ್ನು ವಿಚಾರ ಮಾಡಿ ನಿಮ್ಮ ಮನಸ್ಸಿನಲ್ಲಿರುವ ಪಾಪವಾಸನೆಯನ್ನು ದೂರ ಮಾಡಿ ಇಹಪರಗಳಲ್ಲಿ ಸುಖವನ್ನು ಕೊಡುವ ಶೌಚ ಧರ್ಮವನ್ನು ಧರಿಸಿರಿ. ಮತ್ತು ತಮ್ಮ ಆತ್ಮಶುದ್ಧಿಯನ್ನು ಮಾಡಿಕೊಳ್ಳಿರಿ.

ದರ್ಶನ ಜ್ಞಾನಗುಣ ಕಾರಣೆ ಸಮಯ ಸಮಯ ವೇ ಚಾರ ।
ವಿವಿಧ ಬಂಧ ಪೈದಾ ಕರೇ ಜ್ಞಾನೀ ಬಂಧ ನ ಧಾರ ॥

ಸಮಯಸಾರ.

ಕರ್ಮಬಂಧಕ್ಕೆ ಕಾರಣವಾಗಿರುವುದರಿಂದ ಮಿಥ್ಯಾತ್ವ ಅವಿರತಿ, ಪ್ರಮಾದ, ಕಷಾಯ ಯೋಗ ಇವುಗಳು ಆಶ್ರವರೂಪವಾಗಿವೆ. ಮತ್ತು ಇವುಗಳಿಂದ ಕರ್ಮಬಂಧವಾಗುತ್ತದೆ. ಆ ಕರ್ಮದ ಮತ್ತು ನನ್ನ ಯಾವ ಪ್ರಕಾರವಾಗಿಯೂ ಸಂಬಂಧವಿಲ್ಲ. ಕರ್ಮಗಳಂತೂ ಜಡರೂಪವಾಗಿವೆ. ಕರ್ಮವು ಆತ್ಮನ ಅನಂತಗುಣಗಳನ್ನು ಅವರೋಧ ಮಾಡುತ್ತದೆ. ಇದನ್ನು ತಿಳಿದು ಜ್ಞಾನಿಗಳು ರಾಗದ್ವೇಷವನ್ನು ಬಿಟ್ಟು ತನ್ನ ಆತ್ಮ ಸ್ವರೂಪದಲ್ಲಿ ಸ್ಥಿರವಾಗಿರುತ್ತಾರೆ. ಅವರೇ ಶೌಚಧರ್ಮವನ್ನು ಅನುಸರಿಸಲಿಕ್ಕೆ ಅಧಿಕಾರಿಗಳಾಗುತ್ತಾರೆ. ಲೋಭದ ತ್ಯಾಗವನ್ನು ಮಾಡದೆ ಶೌಚಧರ್ಮವು ಪ್ರಾಪ್ತವಾಗಲಾರದು. ಲೋಭದಿಂದ ಹೃದಯವು ಅಪವಿತ್ರವಾಗುತ್ತದೆ.

ಅತಿ ಲೋಭದಿಂದ ಒಬ್ಬ ಬಾಲಕನ ಸ್ಥಿತಿ ಏನಾಯಿತೆಂಬ ವಿಷಯವನ್ನು ಈ ಕೆಳಗಿನ ಘಟನೆಯಲ್ಲಿ ನೋಡಿರಿ.

ಒಬ್ಬ ವಿದ್ಯಾರ್ಥಿಯು ಎಲ್ಲಾ ವಿದ್ಯೆಗಳ ಅಧ್ಯಯನವನ್ನು ಮಾಡಿ ತನ್ನ ಮನೆಗೆ ಬಂದನು. ತಾಯಿ–ತಂದೆಗಳಿಗೆ ನಮಸ್ಕಾರ ಮಾಡಿದನು. ತಂದೆಯು ಎಲ್ಲಾ ವಿದ್ಯೆಯಲ್ಲಿ ನಿಪುಣನಾದ ಮಗನನ್ನು ಕುರಿತು, ವತ್ಸ! ನೀನು ಎಲ್ಲಾ ವಿದ್ಯೆಗಳಲ್ಲಿ ಪ್ರವೀಣನಾಗಿದ್ದೀ, ಹಾಗಾದರೆ ಪಾಪದ ಅಪ್ಪ ಯಾರು ಹೇಳು ಎಂದನು.

**ಲೋಭ ಮೂಲಾನಿ ಪಾಪಾನಿ ವ್ಯಾಧಯೋ ರಸಮೂಲಕಾಃ ||**

ಈ ಪ್ರಶ್ನೆಯ ಉತ್ತರ ಕೊಡಲು ಅವನಿಂದ ಸಾಧ್ಯವಾಗಲಿಲ್ಲ. ಅದರ ಉತ್ತರವನ್ನು ಕೇಳಿ ತಿಳಿದುಕೊಳ್ಳಲಿಕ್ಕೆ ತನ್ನ ಗುರುಗಳ ಕಡೆ ಹೊರಟನು. ದಾರಿಯಲ್ಲಿ ಅವನಿಗೆ ಅವನ ತಂದೆಯ ಮಿತ್ರನೊಬ್ಬನು ಸಿಕ್ಕಿದನು. ಆವನು ಆ ವಿದ್ವಾಂಸನನ್ನು ಕೇಳುತ್ತಿದ್ದಾನೆ, 'ನೀನು ಎಲ್ಲಿ ಹೊರಟದ್ದೀಯೋ? ಆಗ ಅವನು 'ನನ್ನ ತಂದೆಯು ಪ್ರಶ್ನೆ ಮಾಡಿದ್ದಾನೆ, ಪಾಪದ ಅಪ್ಪನು ಯಾರು ? ಅದರ ಉತ್ತರ ಕೊಡಲು ಸಾಧ್ಯವಾಗಲಿಲ್ಲ.

ಅದನ್ನು ಕೇಳಲಿಕ್ಕೆ ನಾನು ಗುರುಗಳ ಸಮೀಪಕ್ಕೆ ಹೋಗುತ್ತಿದ್ದೇನೆ. ಅದನ್ನು ಕೇಳಿ ಅವರು ಹೇಳಿದರು. ನಾನು ಈ ಪ್ರಶ್ನೆಯ ಉತ್ತರ ಹೇಳು ತ್ತೇನೆ. ಇಷ್ಟು ದೂರ ಹೋಗುವ ಕಾರಣವಿಲ್ಲ. ಮೊದಲು ನೀನು ನಮ್ಮ ಮನೆಗೆ ಬಂದು ಊಟ ಮಾಡು ಎಂದನು. ಇದನ್ನು ಕೇಳಿ ಅವನು "ಛೇ! ಛೆ, ನಾನು ಬಂದು ನಿಮ್ಮಲ್ಲಿ ಊಟ ಮಾಡಲು ಸಾಧ್ಯವಿಲ್ಲ. ಕಾರಣ ನಿಮ್ಮ ಜಾತಿಯು ಹೀನ ಜಾತಿಯಾಗಿದೆ. ಆಗ ಆ ಗೃಹಸ್ಥನು "ನೀನು ಅವಶ್ಯ ಅವಶ್ಯ ಬರಲೇ ಬೇಕು. ನಾನು ನಿನಗೆ ಒಂದು ಸಾವಿರ ರೂಪ್ಯಾ ಕೊಡುತ್ತೇನೆ. ನೀನು ಅವಶ್ಯ ಊಟ ಮಾಡಬೇಕೆಂದನು" ಒಂದು ಸಾವಿರದ ಹೆಸರು ಕೇಳಿದ ಕೂಡಲೇ ಅವನು ಊಟ ಮಾಡಲು ಸಿದ್ಧನಾದನು. ಆಗ ಆ ಗೃಹಸ್ಥನು "ಒಂದು ಸಾವಿರ ರೂಪ್ಯಾಯಿಯ ಲೋಭದಿಂದ ಜಾತಿಭ್ರಷ್ಟನಾಗಲು ಸಿದ್ಧ ಮಾಡಿ, ಇದೇ ಪಾಪದ ಅಪ್ಪ, ಲೋಭ. ಇದನ್ನು ಕೇಳಿ ಅವನು ಲಜ್ಜಿತನಾಗಿ ಹಿಂದೆ ಮನೆಗೆ ಬಂದನು. ಅಲ್ಲಿ ಬಂದು ತನ್ನ ತಂದೆಯೊಡನೆ "ಇಷ್ಟೆಲ್ಲಾ ಶಾಸ್ತ್ರಗಳನ್ನು ಓದಿದರೂ ನನಗೆ ಯಥಾರ್ಥವಾದ ತತ್ವಜ್ಞಾನವಾಗಲಿಲ್ಲ. ಆತ್ಮಜ್ಞಾನವಿಲ್ಲದೆ ಎಷ್ಟು ವಿದ್ಯೆಯನ್ನು ಕಲಿತರೂ ವ್ಯರ್ಥ.

**ಅನೇಕ ಸಂಶಯೋಚ್ಛೇದಿ ಪರೋಕ್ಷಾರ್ಥಸ್ಯ ದರ್ಶಕಂ ।**
**ಸರ್ವಸ್ಯಲೋಚನಂ ಶಾಸ್ತ್ರಂ ಯಸ್ಯ ನಾಸ್ತ್ಯಂಧ ಏವ ಸಃ ॥**

ಅನೇಕ ಪ್ರಕಾರದ ಸಂಶಯಗಳನ್ನು ದೂರ ಮಾಡುವ ಪರೋಕ್ಷ ಅಥವಾ ಪ್ರತ್ಯಕ್ಷರೂಪದಲ್ಲಿ ಮಾಡಿದ ಶಂಕೆಗಳನ್ನು ನಿವಾರಿಸಲು ಸಮರ್ಥ ವಾದ ಶಾಸ್ತ್ರವೆಂಬ ಕಣ್ಣು ಯಾರಿಗೆ ಇಲ್ಲವೋ ಅವರು ನಿಜವಾಗಿಯೂ ಕುರುಡರೆಂದು ತಿಳಿಯಬೇಕು. ಆದುದರಿಂದ ಆ ಹುಡುಗನು ಯಾವಾ ಗಲೂ ಶಾಸ್ತ್ರದ ವಿಷಯದಲ್ಲಿ ವಿಚಾರ ಮಾಡತೊಡಗಿದನು. ಅವನು ತನ್ನ ತಂದೆಗೆ ಹೇಳಿದನು. 'ಪಿತಾಜೀ, ಇನ್ನು ಮುಂದೆ ನನಗೆ ಕೋಟಿ ರೂಪ್ಯಾಗ ಳನ್ನು ಕೊಟ್ಟರೂ ನಾನು ಪರಜಾತಿಯವರಲ್ಲಿ ಅನ್ನಗ್ರಹಣ ಮಾಡಲಾರೆನು

ಭಕ್ಷ್ಯ-ಅಭಕ್ಷ್ಯವ ವಿಚಾರ ನೀತಿಯಿಂದ ವರ್ಣಿಸುವೆನು. ಭಕ್ಷ್ಯ ಅಭಕ್ಷ್ಯದ ವಿಚಾರ ಮಾಡಿ ಪ್ರವೃತ್ತಿಯನ್ನು ಮಾಡುವುದು ಜೈನಸಿದ್ಧಾಂತದ ಮುಖ್ಯ ತತ್ವವಾಗಿದೆ.

ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಪಿಬೇಜ್ಜಲಂ ।
ಶಾಸ್ತ್ರಪೂತಂ ವದೇದ್ವಾಕ್ಯಂ ಮನಃಪೂತಂ ಸಮಾಚರೇತ್ ॥

ಧರ್ಮನೀತಿ-ಚಿಂತಾಮಣಿ.

ನಾವು ನಡೆಯುತ್ತಿರುವಾಗ ಕೆಳಗೆ ಯಾವ ಪ್ರಾಣಿಗಳಿಗೂ ಬಾಧೆಯಾಗಬಾರದೆಂಬ ಉದ್ದೇಶವನ್ನಿಟ್ಟು ಪ್ರಮಾದವನ್ನು ಬಿಟ್ಟು ಕೆಳಗೆ ನೋಡಿ ನಡೆಯಬೇಕು. ನವೀನ ದಪ್ಪವಾದ ವಸ್ತ್ರದಿಂದ ನೀರನ್ನು ಸೋಸಿ ಕುಡಿಯಬೇಕು. ಶಾಸ್ತ್ರಕ್ಕೆ ಅನುಸಾರವಾಗಿ ನಿರ್ದೋಷ ವಚನವನ್ನು ಮಾತಾಡಬೇಕು. ಮನಸ್ಸನ್ನು ಪವಿತ್ರವನ್ನಾಗಿ ಮಾಡಿ ವ್ಯವಹಾರವನ್ನು ಮಾಡಬೇಕು.

ಅತೀತೇಷ್ವನಪೇಕ್ಷಾ ಯೇ ಪ್ರಾಪ್ತೇಷ್ವರ್ಥೇಷು ನಿರ್ಮಮಾಃ ।
ಶೌಚಮೇವ ಪರಂ ತೇಷಾಂ ಯೇಷಾಂ ನೋತ್ಪದ್ಯತೇ ಸ್ಪೃಹಾ ॥

ಯಾರು ಹಿಂದು ಮುಂದಿನ ವಿಷಯಗಳಲ್ಲಿ ಆಶೆಯನ್ನು ಬಿಟ್ಟಿರುತ್ತಾರೆಯೋ, ವರ್ತಮಾನದಲ್ಲಿ ಪ್ರಾಪ್ತವಾದ ವಿಷಯಗಳಲ್ಲಿ ನಿಸ್ಪೃಹರಾಗಿರುತ್ತಾರೆಯೋ, ಯಾರಿಗೆ ಯಾವ ವಿಷಯದಲ್ಲಿಯೂ ಆಶೆ ಇರುವುದಿಲ್ಲವೋ, ಅವರ ಹೃದಯದಲ್ಲಿಯೇ ಶೌಚಧರ್ಮದ ನಿವಾಸವಿರುತ್ತದೆ. ಅವರು ಪಾಪಭೀರುಗಳಾಗಿರುತ್ತಾರೆ, ಯೋಗ್ಯಾಯೋಗ್ಯ ವಿಷಯಗಳ ವಿಚಾರವನ್ನು ಮಾಡಿ ಪ್ರವೃತ್ತಿ ಮಾಡುವವರಿಗೆ ಭೋಜನದ ವಿಷಯದಲ್ಲಿ ಅರುಚಿ ಇರುತ್ತದೆ. ಅತಿ ಲಂಪಟತನದಿಂದ ಊಟ ಮಾಡುವವರಿಗೆ ಯೋಗ್ಯಾಯೋಗ್ಯದ ವಿಚಾರವಿರುವುದಿಲ್ಲ. ಅವರು ತ್ಯಾಜ್ಯ ವಸ್ತುಗಳನ್ನು ತಿಂದು ಹೀನಾಚಾರಿಗಳಾಗುತ್ತಾರೆ.

ಕುಕ್ಷೇಶ್ಚ ಶೋಭಾ ವಿಧಿಯುಕ್ತಭೋಜನಂ,
ಹಸ್ತಸ್ಯ ಶೋಭಾ ಸತ್ಪಾತ್ರದಾನಂ,
ರಸನಾ ಶೋಭಾ ಜಿನತೀರ್ಥಗಾನಂ,
ಚರಣಸ್ಯ ಶೋಭಾ ಜಿನತೀರ್ಥಯಾತ್ರಾ ||

ಯಾವುದು ಹೇಯವಾಗಿದೆ. ಯಾವುದು ಉಪಾದೇಯವಾಗಿದೆ. ಯಾವುದು ಭಕ್ಷ್ಯ, ಯಾವುದು ಅಭಕ್ಷ್ಯ ಮೊದಲಾದ ವಿಚಾರಗಳನ್ನು ಮಾಡಿ ವಿಧಿಯುಕ್ತ ಭೋಜನವನ್ನು ಮಾಡುವುದು ಇದು ಹೊಟ್ಟೆಗೆ ಭೂಷಣ, ಸತ್ಪಾತ್ರದಾನವನ್ನು ಮಾಡುವುದು ಕೈಗೆ ಭೂಷಣ. ಜಿನೇಶ್ವರನ ಸ್ತುತಿಯನ್ನು ಮಾಡುವುದು ನಾಲಿಗೆಯ ಭೂಷಣ. ತೀರ್ಥಯಾತ್ರೆಯನ್ನು ಮಾಡುವುದು ಇದು ಕಾಲಿಗೆ ಭೂಷಣ. ಈ ಪ್ರಕಾರ ಅವನು ವಿಚಾರ ಮಾಡಿ ಯೋಗ್ಯ ವ್ಯವಹಾರ ಮಾಡತೊಡಗಿದನು.

ಈ ಪ್ರಕಾರ ಆ ಹುಡುಗನ ಬುದ್ಧಿಯಲ್ಲಿ ಪರಿವರ್ತನೆಯಾದ ವಿಷಯವನ್ನು ನೋಡಿ ತಾಯಿತಂದೆಗಳಿಗೆ ಬಹಳ ಸಂತೋಷವಾಯಿತು. ಆದುದರಿಂದ ಭವ್ಯರೇ! ನೀವು ಯಾವಾಗಲೂ ವಿಚಾರ ಮಾಡಿರಿ. ನಿಮ್ಮ ಪರಂಪರೆ ಏನು ? ಜಾತಿ ಏನು ? ಧರ್ಮವೇನು ! ಎಲ್ಲಾ ವಿಚಾರ ಮಾಡಿ ವರ್ತಿಸಿರಿ, ಜಾತಿ ಧರ್ಮ ಕುಲವನ್ನು ಬಿಡಬೇಡಿರಿ. ತಂದೆ ತಾಯಿಗಳ ಆಜ್ಞೆಯನ್ನು ಪರಿಪಾಲಿಸಿ ಲೋಭವನ್ನು ಬಿಟ್ಟು ಕಷಾಯದ ಉಪಶಮನವನ್ನು ಮಾಡಿ ವರ್ತಿಸುವ ಮಕ್ಕಳು ಶ್ರೇಷ್ಟರಾದವರು. ಹೀಗೆ ವರ್ತಿಸಿದ್ದರಿಂದ ಅವನ ಕೀರ್ತಿಯು ಈ ಲೋಕದಲ್ಲಿಯೂ ಎಲ್ಲೆಡೆಯಲ್ಲಿಯೂ ಹಬ್ಬಿ ಪರಲೋಕದಲ್ಲಿಯೂ ಅವನು ತನ್ನ ನಿರ್ಮಲ ಚಾರಿತ್ರದಿಂದ ಆತ್ಮಸಿದ್ಧಿಯನ್ನು ಮಾಡಿಕೊಂಡನು.

ಸಂಸಾರದ ಅನೇಕ ಭೋಗ ಸಾಮಗ್ರಿಗಳನ್ನು ಭೋಗಿಸುತ್ತಿದ್ದರೂ ಜ್ಞಾನಿಗಳು ಬಂಧರಹಿತರಾಗುತ್ತಾರೆ. ಇಷ್ಟೇ ಅಲ್ಲ ಪೂರ್ವಜನ್ಮದಲ್ಲಿ ಅರ್ಜಿ

ಸಿದ ಕರ್ಮಗಳ ನಿರ್ಜರೆಯನ್ನು ಅವರು ಮಾಡುತ್ತಾರೆ ಸಮ್ಯಗ್‌ದೃಷ್ಟಿ ಗಳು ಯಾವಾಗಲೂ ಸ್ವ ಮತ್ತು ಪರರ ವಿಚಾರ ಮಾಡುತ್ತಿರುತ್ತಾರೆ.

**ಪುದ್ಗಲಕರ್ಮ ಸರಾಗ ಹೈ ಪಾಕ ಉದಯಸೇ ಆಯ**
**ಮಮ ಸ್ವಭಾವ ಸೋ ಹೈ ನಹೀ, ಸೋ ಇಕಜ್ಞಾಯಕ ಭಾವ**

ರಾಗದ್ವೇಷಗಳು ಪುದ್ಗಲ ಕರ್ಮದ ವಿಕಾರಗಳು ನನ್ನ ಸ್ವಭಾವವು ಅದರಿಂದ ಭಿನ್ನವಾಗಿದೆ. ಇದನ್ನು ತಿಳಿದು ಭೇದವಿಜ್ಞಾನಿಯು ಅವುಗಳ ಕಾರಣದಿಂದ ಸುಖದುಃಖದ ಅನುಭವವನ್ನು ಮಾಡುವುದಿಲ್ಲ. ಯಾವಾಗಲೂ ಆನಂದದಲ್ಲಿಯೇ ಇರುತ್ತಾನೆ. ಶಾಸ್ತ್ರಸ್ವಾಧ್ಯಾಯ, ತತ್ವಜ್ಞಾನ ಚಿಂತನೆ ಇಲ್ಲದೆ, ಅದನ್ನು ತಿಳಿಯದೆ, ಮನಸ್ಸಿನ ಸ್ಥಿರತೆಯಾಗಲಾರದು ಮತ್ತು ತತ್ವಜ್ಞಾನದಲ್ಲಿ ಬುದ್ಧಿಯು ಸ್ಥಿರವಾಗಲಾರದು. ಮನಸ್ಸಿನ ದೃಢ ನಿಶ್ಚಯವಿಲ್ಲದೆ ಯಾವ ಶಾಸ್ತ್ರವನ್ನು ಓದಿದರೂ ಪ್ರಯೋಜನವಿಲ್ಲ, ಯಥಾರ್ಥ ಶ್ರದ್ಧೆಯು ಎಷ್ಟರ ವರೆಗೆ ಇಲ್ಲವೋ ಅಷ್ಟರ ವರೆಗೆ ಸಮ್ಯಗ್ದರ್ಶನವಾಗಲಾರದು.

**ಶಕ್ತಿಮಾನಪ್ಯಶಕ್ತೋಽಸೌ ಧನವಾನಪಿ ನಿರ್ಧನಃ ।**
**ಶ್ರುತವಾನಪಿ ಮೂರ್ಖಶ್ಚ ಯೋ ಧರ್ಮವಿಮುಖೋ ನರಃ ॥**

ಸುಭಾಷಿತ.

ನಿಜವಾದ ಧರ್ಮವನ್ನು ಬಿಟ್ಟು ಆಚರಿಸುವ ಮನುಷ್ಯನು ಶಕ್ತಿವಂತನಾದಾಗ್ಯೂ ಅಶಕ್ತನು, ಧನವಂತನಾದಾಗ್ಯೂ ನಿರ್ಧನನು, ಶಾಸ್ತ್ರ ಸಂಪನ್ನನಾದಾಗ್ಯೂ ಮೂರ್ಖನು. ಆದುದರಿಂದ ಭವ್ಯರೇ ! ನೀವು ಧರ್ಮಾಚರಣೆಯನ್ನು ಮಾಡಿ ತನ್ನ ಆತ್ಮನನ್ನು ರಾಗದ್ವೇಷಾದಿ ವಿಕಾರಗಳಿಂದ ಬಿಡಿಸಿರಿ. ಮೋಕ್ಷ ಸುಖಕ್ಕೆ ಕಾರಣವಾದ ಶ್ರೇಷ್ಠ ಅಹಿಂಸಾದಿ ಧರ್ಮಗಳನ್ನು ಪರಿಪಾಲಿಸಿರಿ.

ಅನವರತಮಹಿಂಸಾಯಾ ಶಿವಸುಖಲಕ್ಷ್ಮೀ ನಿಬಂಧನೇ ಧರ್ಮೇ
ಸರ್ವೇಷ್ವಪಿ ಚ ಸಧರ್ಮಿಷು ಪರಮಂ ವಾತ್ಸಲ್ಯಮವಲಂಬ್ಯಂ ||

ಅಹಿಂಸಾದಿ ಧರ್ಮಗಳನ್ನು ನೀವು ಆಚರಿಸಿರಿ. ಮತ್ತು ಎಲ್ಲಾ ಪ್ರಾಣಿಗಳ ಮೇಲೆ ವಾತ್ಸಲ್ಯಭಾವವನ್ನಿಡಿರಿ. ಹೀಗೆ ವರ್ತಿಸುವುದರಿಂದ ಎಲ್ಲಾ ಸಂಕಟಗಳು ತನ್ನಿಂದ ತಾನೇ ದೂರವಾಗುವವು. ಒಂದು ಕಡೆಯಲ್ಲಿ ಈ ಪ್ರಕಾರದ ಘಟನೆ ಇದೆ. ನೋಡಿ.

ವಾರಿಷೇಣ ರಾಜಕುಮಾರನು ರಾಜ್ಯಭೋಗಗಳನ್ನು ಭೋಗಿಸುತ್ತಿದ್ದರೂ ಧರ್ಮದಲ್ಲಿ ವಿಶೇಷವಾಗಿ ಅನುರಕ್ತನಾಗಿದ್ದನು. ಅಷ್ಟಮಿ ಚತುರ್ದಶಿಯ ದಿನ ಮನಸ್ಸಿನಲ್ಲಿ ನಿಶ್ಚಯ ಧರ್ಮವನ್ನು ದೃಢ ಮಾಡುವುದಕ್ಕೋಸ್ಕರವಾಗಿ ಸ್ಮಶಾನಭೂಮಿಯಲ್ಲಿ ಹೋಗಿ ಧ್ಯಾನ ಮಾಡುತ್ತಿದ್ದನು. ಒಬ್ಬ ಕಳ್ಳನು ಒಂದು ರತ್ನಹಾರವನ್ನು ಕಳ್ಳತನ ಮಾಡಿ ಓಡಿ ಹೋಗುತ್ತಿದ್ದನು. ಅವನನ್ನು ಹಿಡಿಯಲಿಕ್ಕೆ ರಾಜದೂತರು ಹಿಂಬಾಲಿಸುತ್ತಿದ್ದರು. ಅವರನ್ನು ನೋಡಿ ಕಳ್ಳನು ಭಯದಿಂದ ಆ ರತ್ನಹಾರವನ್ನು ವಾರಿಷೇಣನ ಕಂಠದಲ್ಲಿ ಹಾಕಿ ಓಡಿ ಹೋದನು. ಈ ಸಮಾಚಾರವು ಶ್ರೇಣಿಕನಿಗೆ ಗೊತ್ತಾಯಿತು. ರಾಜಕುಮಾರನು ರತ್ನಹಾರವನ್ನು ಕದ್ದುಕೊಂಡು ಆ ಅಪರಾಧವನ್ನು ಮರೆಮಾಚುವದಕ್ಕೋಸ್ಕರವಾಗಿ ಧ್ಯಾನದ ನೆಪಮಾಡಿ ನಿಂತಿರುತ್ತಾನೆಂದು ಜನರು ರಾಜನಿಗೆ ಹೋಗಿ ಹೇಳಿದರು. ಇದನ್ನು ಕೇಳಿ ರಾಜನು ತನ್ನ ಪುತ್ರನ ಶಿರಚ್ಛೇದವನ್ನು ಮಾಡಲು ಆಜ್ಞೆಯನ್ನಿತ್ತನು. ನ್ಯಾಯಶೀಲರಾದ ರಾಜರು ತನ್ನ ಮಗನೂ ಅಪರಾಧ ಮಾಡಿದರೆ ಉಚಿತ ದಂಡವನ್ನು ಕೊಡುತ್ತಾರೆ.

ಕೋತವಾಲನು ರಾಜನ ಆಜ್ಞೆಯಂತೆ ಶಿರಚ್ಛೇದ ಮಾಡಲುದ್ಯುಕ್ತನಾದನು. ಆದರೆ ರಾಜಕುಮಾರನು ನಿರ್ದೋಷಿಯಾಗಿದ್ದರಿಂದ ಆ ಶಸ್ತ್ರದಿಂದ ಅವನ ಶಿರಚ್ಛೇದವಾಗದೆ ಆ ಶಸ್ತ್ರವು ಅನೇಕ ಉತ್ತಮೋತ್ತಮ ಹೂಗಳಿಂದ ಗುಂಫಿತವಾದ ಹೂ ಮಾಲೆಯಾಗಿ ಪರಿಣಮಿಸಿತು. ಲೋಕದಲ್ಲಿ ಧರ್ಮದ ಮಹಿಮೆಯು ಅಚಿಂತ್ಯವಾಗಿದೆ.

ಧರ್ಮೇಣ ಹನ್ಯತೆ ಶತ್ರುರ್ಹನ್ಯತೇ ವೈ ತಥಾ ಗ್ರಹಃ ।
ಧರ್ಮೇಣ ಹನ್ಯತೇ ವ್ಯಾಧಿರ್ಯತೋ ಧರ್ಮಸ್ತತೋಜಯಃ ॥

ಧರ್ಮದ ಮಹಿಮೆಯಿಂದ ಶತ್ರುಗಳೂ ಮಿತ್ರರಾಗುತ್ತಾರೆ. ಅಶುಭ ಕರ್ಮವು ನಾಶವಾಗುತ್ತದೆ. ಅನೇಕ ರೋಗಗಳು ದೂರವಾಗುತ್ತವೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಎಲ್ಲಾ ವಿಧದಿಂದಲೂ ವಿಜಯವು ನಿಶ್ಚಯವಾಗಿರುತ್ತದೆ. ಆದುದರಿಂದ ಭವ್ಯರೇ ! ಆ ವಾರಿಷೇಣ ರಾಜಕುಮಾರನು ತನ್ನ ಧರ್ಮದಲ್ಲಿ ಸ್ಥಿರನಾಗಿದ್ದರಿಂದ ಅವನ ಮೇಲೆ ಬಂದ ಸಂಕಟವು ದೂರವಾಯಿತು. ಶಾಸನದೇವತೆಯು ಪ್ರಕಟವಾಗಿ ಹೇಳಿತು. ವಾರಿಷೇಣಕುಮಾರ ! ನೀನು ಮತ್ತು ನಿನ್ನ ಅಚೌರ್ಯ ವ್ರತವು ಧನ್ಯವಾಗಿದೆ.

ಬನವಿ ಅಚೌರ್ಯಾಣುವ್ರತ ಧನ್ಯ ಜಗೀ ವಾರಿಷೇಣ ಯುವರಾಜಾ
ಜಾಯಿ ನ ಪಲಹಿ ತ್ಯಜುನೀ ಕೀರ್ತಿದೇವತಾ ಗಣೂನ ನವರಾಜ್ಯ

ರತ್ನಕರಂಡ.

ಈ ಪ್ರಕಾರ ವಾರಿಷೇಣ ಕುಮಾರನ ಸ್ತುತಿ ಮಾಡಹತ್ತಿತು. ಇದನ್ನು ನೋಡಿ ರಾಜದೂತರು ಎಲ್ಲಾ ಸಮಾಚಾರವನ್ನು ರಾಜನಿಗೆ ಹೇಳಿದರು. ರಾಜನೂ ತನ್ನ ಅವಿವೇಕಕ್ಕೆ ಕ್ಷಮೆಯನ್ನು ಬೇಡಿದನು. ಆಗ ರಾಜಪುತ್ರನು ' ಪೂಜ್ಯರೇ ! ತಮ್ಮ ಯಾವ ಅಪರಾಧವೂ ಇಲ್ಲ. ನನ್ನ ಅಶುಭ ಕರ್ಮದ ಉದಯದಿಂದ ಈ ಪ್ರಕಾರ ಅನುಭವಿಸಬೇಕಾಯ್ತು. ಅವನ ವಿನಯವನ್ನು ನೋಡಿ ಎಲ್ಲರೂ ಜಯಜಯಕಾರ ಮಾಡಿದರು. ವಾರಿಷೇಣನು ಸಂಸಾರದ ವಿಷಯದಲ್ಲಿ ವಿರಕ್ತನಾಗಿ ಈ ಪ್ರಕಾರ ವಿಚಾರ ಮಾಡುತ್ತಿದ್ದಾನೆ.

ಕ್ಷಣಂ ಚಿತ್ತಂ ಕ್ಷಣಂ ವಿತ್ತಂ ಕ್ಷಣಂ ಜೀವತಿ ಮಾನವಃ ।
ಯಮಸ್ಯ ಕರುಣಾ ನಾಸ್ತಿ ಧರ್ಮಸ್ಯ ತ್ವರಿತಾ ಗತಿಃ ॥

ಸುಭಾಷಿತಾವಲಿ.

ಮನುಷ್ಯನ ಮನಸ್ಸು ಚಂಚಲವಾಗಿದೆ. ಅವನ ಧನ ವೈಭವಗಳು ಕ್ಷಣಿಕವಾಗಿವೆ. ಯಮದೇವನಿಗೆ ಕರುಣೆ ಇಲ್ಲ. ಯಾವಾಗ ಯಾರನ್ನು ತೆಗೆದುಕೊಂಡು ಹೋಗುತ್ತಾನೆಂಬ ನಿಯಮವಿಲ್ಲ. ಆದುದರಿಂದ ಧರ್ಮಾ

ಚರಣೆಯಲ್ಲಿ ವಿಳಂಬ ಮಾಡಬೇಡಿರಿ. ಈ ಪ್ರಕಾರವ ವಿಚಾರ ಮಾಡಿ ವಾರಿಷೇಣ ರಾಜಕುಮಾರನು ಸಂಸಾರ ವೈಭವದ ತ್ಯಾಗವನ್ನು ಮಾಡಿ ಜಿನದೀಕ್ಷೆಯನ್ನು ಪಡೆದನು. ಮತ್ತು ಆತ್ಮಶುದ್ಧಿಯನ್ನು ಮಾಡಿಕೊಂಡನು. ಆದುದರಿಂದ ಭವ್ಯರೇ! ನೀವೂ ವಿಚಾರ ಮಾಡಿರಿ. ಧರ್ಮವೇ ಜೀವನಿಗೆ ಇಹಪರದಲ್ಲಿ ಸುಖವನ್ನು ಕೊಡುವುದಾಗಿದೆ. ಎಲ್ಲರೂ ಸುಖವನ್ನು ಬಯಸುತ್ತಾರೆ. ದುಃಖಕ್ಕೆ ಭಯಪಡುತ್ತಾರೆ. ಆದರೆ ಧರ್ಮವಿಲ್ಲದೆ ಸುಖವು ಲಭಿಸಲಾರದು.

**ಸುಖಾರ್ಥಾ ಸರ್ವಭೂತಾನಾಂ ಮತಾಃ ಸರ್ವಾ ಪ್ರವೃತ್ತಯಃ ।**
**ಸುಖಂ ಚ ನ ವಿನಾಧರ್ಮಾತ್ತಸ್ಮಾದ್ಧರ್ಮಪರೋ ಭವೇತ್ ॥**

ಸುಭಾಷಿತ.

ಆತ್ಮನನ್ನು ಕರ್ಮದಿಂದ ಬಿಡುಗಡೆ ಮಾಡಿಸುವುದು ಧರ್ಮವಾಗಿದೆ.

**ಕಾಮಕ್ರೋಧಮದಾದಿಷು ಚಲಯಿತು ಮುದಿತೇಷು ವರ್ತ್ಮನೋ ನ್ಯಾಯಾತ್ ।**
**ಶ್ರುತಮಾತ್ಮನಃ ಪರಸ್ಯ ಚ ಯುಕ್ತ್ಯಾ ಸ್ಥಿತಿಕರಣಮಪಿ ಕಾರ್ಯಂ**

ಸುಭಾಷಿತಾವಲಿ

ಕಾಮ, ಕ್ರೋಧ, ಮದ ಮತ್ತು ಲೋಭಾದಿಕ ಪರಭಾವಗಳನ್ನು ಬಿಡುವುದು ಆತ್ಮನ ಧರ್ಮವಾಗಿದೆ. ತನ್ನ ಆತ್ಮಾನುಭವದಲ್ಲಿ ಇದ್ದು ಕರ್ಮದ ಉದಯದಿಂದ ಆಗುವ ವಿಕಾರಗಳನ್ನು ಜಯಿಸುವುದು ಇದು ಆತ್ಮಧರ್ಮವಾಗಿದೆ.

**ಆಪ ಆಪನೆ ರೂಪಕೋ ಜಾನೇ ತೋ ಶಿವ ಹೋಯ**
**ಪರಮೇ ಆಪನೀ ಕಲ್ಪನಾ ಕರೇ ಭ್ರಮೆ ಜಗ ಸೋಯ**

ಭಾವದೀಪಿಕಾ.

ತನ್ನ ಸ್ವರೂಪವನ್ನು ತಿಳಿದರೆ ಸಂಸಾರದಿಂದ ಮುಕ್ತಿಯಾಗುವದು. ಪರಸುಖದಲ್ಲಿ ಆತ್ಮಸುಖದ ಕಲ್ಪನೆಯನ್ನು ಮಾಡಿದರೆ ಸಂಸಾರದ ವೃದ್ಧಿಯಾಗುವುದು.

ಪ್ರಾನೀ ಅತಮರೂಪ ಅನೂಪ ಹೈ ಪರತೇ ಭಿನ್ನ ತ್ರಿಕಾಲ
ಯಹ ಸಬ ಕರ್ಮ ಉಪಾಧಿ ಹೈ ರಾಗದ್ವೇಷ ಭ್ರಮಜಾಲ
ಕಹಾಂ ಭಯೋ ಕಾಯಿ ಲಗೀ ಆತಮದರಪನಮಾಹಿ
ಊಪರಲೀ ಊಪರ ರಹೈ ಅಂತರ ಪೈಠೀ ನಾಹಿ

ಅಧ್ಯಾತ್ಮಪದಸಂಗ್ರಹ.

ಎಲೇ ಜೀವಾತ್ಮನೇ ! ತನ್ನ ಆತ್ಮನ ಸ್ವರೂಪವು ಅನುಪಮವಾಗಿದೆ. ಈ ಜಡ ಶರೀರದಿಂದ ಅದು ಭಿನ್ನವಾಗಿದೆ. ಜ್ಞಾನವೆಂಬ ಕನ್ನಡಿಯನ್ನು ಕೈಯಲ್ಲಿ ತೆಗೆದುಕೊಂಡು ನೋಡಲು ಆತ್ಮನು ಜ್ಞಾನರೂಪದಿಂದ ಕಾಣುತ್ತಾನೆ, ಚಿದ್ರೂಪ ಸ್ವರೂಪದಿಂದ ಕೂಡಿದ ಪರಮಾತ್ಮನು ತನ್ನಲ್ಲಿ ಇದ್ದರೂ ವಿಚಾರ ಮಾಡಲಾರದೆ ನಾವು ಹೊರಗೆ ಹುಡುಕುತ್ತಿದ್ದೇವೆ. ಈ ಪ್ರಕಾರ ವಿಚಾರ ಮಾಡಿ ಪರಭಾವಗಳ ತ್ಯಾಗವನ್ನು ಮಾಡಿ ತನ್ನ ಸ್ವರೂಪದಲ್ಲಿ ಸ್ಥಿರವಾಗಿದ್ದು ಉದಯದಲ್ಲಿ ಬರುವ ಕರ್ಮಗಳನ್ನು ಭವ್ಯರು ಜಯಿಸುತ್ತಾರೆ, ಉದಯದಲ್ಲಿ ಬರುತ್ತಿರುವ ಕರ್ಮಗಳು ನನ್ನ ಸ್ವರೂಪವಾಗಿಲ್ಲ. ಅವು ಜಡರೂಪವಾಗಿವೆ. ಆ ಪುದ್ಗಲಗಳು ಕರ್ಮಬಂಧಕ್ಕೆ ಕಾರಣವಾಗಿವೆ. ನಾನು ನಿಮಿತ್ತರೂಪನಾಗಿಲ್ಲ. ಆ ನಿಮಿತ್ತಗಳನ್ನೇ ನನ್ನ ಸ್ವಭಾವವೆಂದು ತಿಳಿದು ಈ ಸಂಸಾರದ ವಿಷಯದಲ್ಲಿ ರಾಗದ್ವೇಷವನ್ನು ಮಾಡಿಕೊಂಡು ಅನಾದಿಕಾಲದಿಂದ ಬಂದಿರುತ್ತೇನೆ. ಅದರಿಂದ ಅಶುಭ ಕರ್ಮಗಳ ಬಂಧವಾಗುತ್ತಿದೆ. ಅಶುಭ ಕರ್ಮಗಳನ್ನು ಬಿಟ್ಟು ಶುಭಕರ್ಮಗಳನ್ನು ಮಾಡುವುದು ಪುಣ್ಯಬಂಧಕ್ಕೆ ಕಾರಣವಾಗಿದೆ. ಈ ಸಮ್ಯಕ್ತ್ವರೂಪವಾದ ಪುಣ್ಯಕರ್ಮವು ಪರಭವದಲ್ಲಿಯೂ ಆತ್ಮನೊಡನೆ ಬಂದು ಅವನಿಗೆ ಸುಖವನ್ನು ಕೊಡುತ್ತದೆ. ಆದುದರಿಂದ ಸಮ್ಯಕ್ತ್ವಸಹಿತವಾದ ಪುಣ್ಯ ಕರ್ಮವನ್ನು ಬೆಳೆಸಬೇಕು. ಯಾವಾಗಲೂ ಪುಣ್ಯಕ್ರಿಯೆಗಳನ್ನು ಮಾಡುತ್ತಿರಬೇಕು. ತೊಂದರೆಗಳು ಬಂದರೂ ಬಿಡಬಾರದು. ಒಂದು ಕಡೆಯಲ್ಲಿ ಈ ಪ್ರಕಾರ ಘಟನೆಯಾಯ್ತು. ನೋಡಿರಿ.

ಒಬ್ಬ ಮುನಿಗಳು ಆಹಾರಕ್ಕೋಸ್ಕರ ಒಬ್ಬ ಶ್ರಾವಕನ ಮನೆಗೆ ಬಂದಿದ್ದರು. ಅವರ ಕಣ್ಣಿನಲ್ಲಿ ಒಂದು ಕಸವು ಹೋಗಿದ್ದರಿಂದ ಅವರ ಕಣ್ಣಿನಿಂದ ನೀರು ಸುರಿಯುತ್ತಿತ್ತು, ಅದನ್ನು ನೋಡಿ ಒಬ್ಬ ಹೆಂಗಸು ಆ ಗುರುಗಳ ಹತ್ತಿರ ವಿನಯದಿಂದ ಹೇಳಿದಳು. ಪೂಜ್ಯರೇ ! ನಾನು ತಮಗೆ ತೊಂದರೆಯಾಗದಂತೆ ಆ ಕಣ್ಣಿನ ಕಸವನ್ನು ತೆಗೆಯಲೇ ? ಮುನಿಗಳು ಶರೀರದ ವಿಷಯದಲ್ಲಿ ಉದಾಸೀನರಾಗಿದ್ದರಿಂದ ಏನೂ ಉತ್ತರ ಕೊಡಲಿಲ್ಲ. ಆ ಹೆಂಗಸು ದಯಾ ಪರಿಣಾಮದಿಂದ ತನ್ನ ನಾಲಿಗೆಯಿಂದ ಆ ಕಸವನ್ನು ತೆಗೆದಳು, ಇದನ್ನು ಅವಳ ಅತ್ತೆ ನೋಡಿದಳು. ಅವಳು ದ್ವೇಷ ಬುದ್ಧಿಯಿಂದ ಹೇಳಿದಳು. ' ನೀನು ಮಹಾ ಪಾಪಿಯಾಗಿದ್ದೀಯೇ, ನೀತಿಭ್ರಷ್ಟಳಾಗಿದ್ದೀಯೇ, ಕುಲ ಕಲಂಕಿನಿಯಾಗಿದ್ದೀಯೇ, ಆದುದರಿಂದ ನೀನು ನನ್ನ ಮನೆಯಲ್ಲಿರಬಾರದು. ಎಂದು ಹೇಳಿ ಅವಳನ್ನು ಮನೆಯಿಂದ ಹೊರಡಿಸಿದಳು ಆದರೆ ಆ ಸ್ತ್ರೀಯು ಮಹಾ ಸುದ್ಗುಣೀ, ಶೀಲವತೀ, ನಿರ್ದೋಷಿ, ಸಾಧ್ವಿಯಾಗಿದ್ದಳು. ಶೀಲವೇ ಅವಳ ಆಭೂಷಣವಾಗಿದ್ದಿತು

ದುಗ್ಧೇನ ಹೀನಾ ನ ಚ ಭಾತಿ ಧೇನುಃ
ಶೀಲೇನ ಹೀನೋ ನ ನರೋ ನ ನಾರೀ ||

ಹಾಲಿಲ್ಲದಿದ್ದರೆ ಆಕಳಿಗೆ ಶೋಭೆ ಇಲ್ಲ. ಅದೇ ಪ್ರಕಾರ ರೂಪವಂತರಾಗಿದ್ದಾಗ್ಯೂ ಶೀಲವಿಲ್ಲದಿದ್ದರೆ ಸ್ತ್ರೀ-ಪುರುಷರಿಗೆ ಶೋಭೆ ಇಲ್ಲ. ಆ ಸ್ತ್ರೀಯು ನಿರ್ದೋಷಳಾಗಿದ್ದು ಶೀಲವತಿಯಾಗಿದ್ದರಿಂದ ಅವಳಿಗೆ ಮನಸ್ಸಿನಲ್ಲಿ ಅತಿ ವೇದನೆಯಾಯಿತು, ಈ ಕಲಂಕವು ದೂರವಾಗದೆ ನಾನು ಅನ್ನ ಜಲ ತೆಗೆದುಕೊಳ್ಳಲಾರನೆಂದು ದೃಢ ಪ್ರತಿಜ್ಞೆಯನ್ನು ಮಾಡಿದಳು. ಹೀಗೆ ನಿಶ್ಚಯ ಮಾಡಿ ಭಗವಂತನ ಸ್ತುತಿ ಸ್ತೋತ್ರಗಳನ್ನು ಮಾಡುತ್ತಾ ಕುಳಿತುಕೊಂಡಳು.

ಭಗವನ್ ! ನನ್ನ ಪಾಪಪುಣ್ಯಗಳ ವಿಚಾರವನ್ನು ನೀನು ಕೇವಲ ಜ್ಞಾನದಿಂದ ತಿಳಿದು ಕೊಂಡಿದ್ದೀಯೇ, ಆದುದರಿಂದ ನನ್ನನ್ನು ಈ ಸಂಕಟದಿಂದ ಪಾರ ಮಾಡು.

ತ್ವಂ ವಿಶ್ವದೃಶ್ವಾ ಸಕಲೈರದೃಶ್ಯೋ
ವಿದ್ವಾನಶೇಷಂ, ನಿಖಿಲೈರವೇದ್ಯಃ
ವಕ್ತುಂ ಕಿಯಾನ್ ಕೀದೃಶ ಇತ್ಯಶಕ್ಯಃ
ಸ್ತುತಿಸ್ತತೋಽಶಕ್ತಿಕಥಾ ತವಾಸ್ತು

ಏಕೀಭಾವ.

ಭಗವನ್ ! ಲೋಕವನ್ನೆಲ್ಲಾ ನೋಡುತ್ತಿರುವ ನೀನು ಸ್ವಯಂ ಅದೃಶ್ಯನಾದಾಗ್ಯೂ ಲೋಕದ ಎಲ್ಲಾ ವಿಷಯಗಳ ಜ್ಞಾನವು ನಿನಗಿದೆ. ಆದರೆ ನಿನ್ನನ್ನು ಯಾರೂ ತಿಳಿಯುವುದಿಲ್ಲ. ನಿನ್ನನ್ನು ವರ್ಣಿಸಲು ನಾನು ಅಸಮರ್ಥಳಾಗಿದ್ದೇನೆ. ಆದುದರಿಂದ ಸ್ತುತಿ ಮಾಡುವುದಕ್ಕೂ ಶಕ್ತಿ ಇಲ್ಲ ಎಂದು ಮಾಡಿದ ಅವಳ ಭಕ್ತಿಯಿಂದ ಶಾಸನದೇವತೆಯು ಪ್ರಸನ್ನವಾಗಿ ಹೇಳಿತು. ದೇವೀ ! ನೀನು ಹೆದರಬೇಡ. ನಿನ್ನ ಶೀಲದ ಮಹಿಮೆಯಿಂದ ಎಲ್ಲಾ ತೊಂದರೆಗಳೂ ದೂರವಾಗುವವು. ಎಂದು ಹೇಳಿ ಆ ನಗರದ ಕೋಟೆಯ ಬಾಗಿಲನ್ನು ಬಂದು ಮಾಡಿದವು. ಇದನ್ನು ನೋಡಿ ರಾಜಾ ಮೊದ ಲಾದವರು ಬಾಗಿಲು ತೆಗೆಯಲಿಕ್ಕೆ ಪ್ರಯತ್ನಮಾಡಿದರು.ಎಲ್ಲರ ಪ್ರಯತ್ನವೂ ವ್ಯರ್ಥವಾಯಿತು. ಆ ಸಮಯದಲ್ಲಿ ಆಕಾಶವಾಣಿಯಾಯ್ತು. ಈ ನಗರ ದಲ್ಲಿ ಯಾರಾದರೂ ಶೀಲವಂತರಿದ್ದರೆ ಅವರು ಸಾರಣಿಯಲ್ಲಿ ನೀರನ್ನು ತೆಗೆದುಕೊಂಡು ಈ ಬಾಗಿಲಿಗೆ ಸೇಚಿಸಿದರೆ ಬಾಗಿಲು ತೆರೆಯಲ್ಪಡುವುದು. ರಾಜನು ಊರಿನಲ್ಲಿ ಡಂಗುರವನ್ನು ಹೊಡಿಸಿದನು. ಯಾರಾದರೂ ಈ ಕೋಟೆಯ ಬಾಗಿಲನ್ನು ತೆಗೆದರೆ ಅವರಿಗೆ ಒಂದು ಲಕ್ಷ ರೂಪ್ಯಾ ಕೊಡಲಾ ಗುವುದೆಂದು. ಇದನ್ನು ಕೇಳಿ ಧನಲೋಭದಿಂದ ಅನೇಕರು ಪ್ರಯತ್ನಿಸಿದರು ಆದರೆ ಯಾರಿಂದಲೂ ಬಾಗಿಲು ತೆಗೆಯಲಾಗಲಿಲ್ಲ. ನಂತರ ರಾಜನು ಕೇಳುತ್ತಾನೆ. ಇನ್ನು ಯಾರಾದರೂ ಉಳಿದರೋ ಎಂದು. ಯಾಕಂದರೆ ಅತ್ತೆಯ ಭಯದಿಂದ ಆ ಸ್ತ್ರೀಯು ಇದಕ್ಕೆ ಪ್ರಯತ್ನಿಸಲಿಲ್ಲ. ನಂತರ ಅವಳು ಸಾರಣಿಯನ್ನು ತೆಗೆದುಕೊಂಡು ಅದರಲ್ಲಿ ನೀರು ತುಂಬಿ ಆ ಬಾಗಿ ಲಿಗೆ ಸೇಚಿಸಲು ಬಾಗಿಲು ತೆರೆಯಿತು.

**ಹೋ ವಂದನೀಯ ಸಾಧ್ವೀ ನೀಲೀ ಶೀಲವ್ರತಾಮುಳೇ ಖಾಸ**

ಒಬ್ಬ ಸಾಧ್ವೀ ನೀಲಾವತೀಬಾಯಿಯು ನಿರ್ದೋಷ ಶೀಲವ್ರತವನ್ನು ಪರಿಪಾಲನೆ ಮಾಡಿ ದೇವತೆಗಳಿಂದಲೂ ವಂದನೀಯಳಾದಳು. ಭವ್ಯ ಜೀವರೇ ! ನಿರಂತರ ರತ್ನತ್ರಯರೂಪವಾದ ಆತ್ಮಸ್ವರೂಪವನ್ನು ಧ್ಯಾನಿಸಿರಿ.

**ಅಪ್ರಾದುರ್ಭಾವ: ಖಲು ರಾಗಾದೀನಾಂ ಭವತ್ಯಹಿಂಸೇತಿ ।**
**ತೇಷಾಮೇವೋತ್ಪತ್ತಿ ರ್ಹಿಂಸೇತಿ ಜಿನಾಗಮಸ್ಯ ಸಂಕ್ಷೇಪಃ ॥**

ಪುರುಷಾರ್ಥಸಿಧ್ಯುಪಾಯ.

ನಿಶ್ಚಯ ದೃಷ್ಟಿಯಿಂದ ವಿಚಾರ ಮಾಡಿದರೆ ಬೇರೆ ವಸ್ತುಗಳ ವಿಷಯದಲ್ಲಿ ರಾಗಭಾವ ಉತ್ಪನ್ನವಾಗುವದಕ್ಕೆ ಹಿಂಸೆ ಎಂದು ಹೇಳಲಾಗಿದೆ. ರಾಗ ಭಾವವೇ ಹಿಂಸೆ ಎಂದು ಆಚಾರ್ಯರು ಹೇಳುತ್ತಾರೆ. ರಾಗಭಾವದಿಂದ ತನಗೆ ಇಷ್ಟವಾದ ವಸ್ತುಗಳಲ್ಲಿ ಪ್ರೇಮ ಮತ್ತು ಅಸುಂದರ ಅನಿಷ್ಟ ವಸ್ತುಗಳ ಮೇಲೆ ದ್ವೇಷವು ಉಂಟಾಗಿ ಕರ್ಮಬಂಧಕ್ಕೆ ಕಾರಣವಾಗುತ್ತದೆ. ಆದುದರಿಂದ ಪರಿಣಾಮದಲ್ಲಿ ರಾಗಪರಿಣತಿಯನ್ನು ಉತ್ಪನ್ನವಾಗಲು ಬಿಡದಿರುವುದೇ ಪರಿಗ್ರಹ ಪರಿಮಾಣವೆಂಬ ಐದನೆಯ ಅಹಿಂಸಾ ವ್ರತವಾಗಿರುತ್ತದೆ. ಆ ಅಹಿಂಸಾವ್ರತವನ್ನು ನೀವು ಪರಿಪಾಲಿಸಿರಿ. ಪೂರ್ವದಲ್ಲಿ ಅರ್ಜಿಸಿದ ಕರ್ಮಗಳ ನಿರ್ಜರೆಯನ್ನು ಮಾಡಿ ತನ್ನ ಸ್ವರೂಪದಲ್ಲಿ ದೃಢವಾಗಿರಿ. ಅನೇಕ ಅಶುಭ ಕರ್ಮಗಳನ್ನು ನಾಶ ಮಾಡುವುದಕ್ಕೆ ಧರ್ಮವು ಸಮರ್ಥವಾಗಿದೆ.

**ವಿನ ಇಚ್ಛಾ ಶುಚಿ ತಪ ಕರೇ ಲಖೇ ಆಪ ಗುಣ ಆಪ**
**ನಿಶ್ಚಯ ಪಾವೇ ಪರಮಪದ, ಫಿರ ನ ತಪೇ ಭವತಾಪ**

ಭಾವದೀಪಿಕಾ.

ಇಚ್ಛೆಯಿಲ್ಲದೆ ತಪಸ್ಸು ಮಾಡಿದರೆ ನಿಮ್ಮ ಕಲ್ಯಾಣವಾದೀತು. ಮತ್ತು ನಿಶ್ಚಯವಾಗಿ ಮುಕ್ತಿಯು ದೊರೆದೀತು. ನಂತರ ಸಂಸಾರದ ದುಃಖವು

ನಿಮಗೆ ಆಗಲಾರದು ಈ ಸಂಸಾರವೆಂಬ ಸಂತಾಪದಿಂದ ಬೇಗ ಬಿಡುಗಡೆ
ಯಾಗಲು ಜೈನಾಗಮದಲ್ಲಿ ಈ ಉಪಾಯವು ಹೇಳಲಾಗಿದೆ

ಅವಿರತ ಯೇಗ ಕಷಾಯ ಭ್ರಮ ಜಡ ಚೇತನ ದ್ವಯಮಾಹಿ
ವಿವಿಧ ಭೇದ ಜೋ ಜೀವ ಹೈ ತೇ ಅನನ್ಯ ಪರಿಣಾಮ ||

ಸಮಯಸಾರ.

ಮೋಹನೀಯ ಕರ್ಮದ ಭೇದವಾದ ಅವಿರತಿ ಯೋಗ ಮತ್ತು ಕಷಾಯಗಳು ನನಗೆ ಅನಂತಕಾಲದ ವರೆಗೆ ಸಂಸಾರದಲ್ಲಿ ಭ್ರಮಣ ಮಾಡುವುದಕ್ಕೆ ಕಾರಣವಾದ ಕರ್ಮಬಂಧಕ್ಕೆ ಕಾರಣವಾಗಿದೆ. ಈ ಮೋಹ ನೀಯ ಕರ್ಮದ ಭ್ರಾಂತಿ ಜಾಲವನ್ನು ತನ್ನ ಆತ್ಮ ಶಕ್ತಿಯಿಂದ ಕತ್ತರಿಸಿ ಹಾಕುವದು ಈ ಜೀವನ ಪುರುಷಾರ್ಥವಾಗಿದೆ. ಈ ಪುರುಷಾರ್ಥವಿಲ್ಲದ ಜನ್ಮವು ವ್ಯರ್ಥವ

ಧರ್ಮಾರ್ಥಕಾಮಮೋಕ್ಷಾಣಾಂ ಯಸ್ಯೈಕೋಪಿ ನ ವಿದ್ಯತೇ
ಅಜಾಗಲಸ್ತನಸ್ಯೇವ ತಸ್ಯ ಜನ್ಮ ನಿರರ್ಥಕಂ ||

ಜೈನಾಗಮದಲ್ಲಿ ನಾಲ್ಕು ಪುರುಷಾರ್ಥಗಳನ್ನು ಹೇಳಿದ್ದಾರೆ. ಧರ್ಮ ಅರ್ಥ ಕಾಮ ಮೋಕ್ಷ ಈ ನಾಲ್ಕು ಪುರುಷಾರ್ಥಗಳಲ್ಲಿ ಒಂದನ್ನೂ ಸಾಧಿಸ ದಿರುವವರ ಜನ್ಮವು ಆಡಿನ ಕಂಠದಲ್ಲಿರುವ ಮೊಲೆಗಳಂತೆ ವ್ಯರ್ಥವಾಗಿದೆ. ಆದುದರಿಂದ ನೀವು ಪುರುಷಾರ್ಥವನ್ನು ಬಿಡಬೇಡಿರಿ. ಪುರುಷಾರ್ಥವು ದೈವವಿಲ್ಲದೆ ಫಲ ಕೊಡಲಾರದು

ಯಥಾ ಬೀಜಂ ವಿನಾಕ್ಷೇತ್ರಮುಪ್ತಂ ಭವತಿ ನಿಷ್ಫಲಂ
ತಥಾ ಪುರುಷಕಾರೇಣ ವಿನಾದೈವಂ ನ ಸಿಧ್ಯತಿ ||

ಸುಭಾಷಿತರತ್ನಾವಳಿ

ಬೀಜವಿಲ್ಲದೆ ಭೂಮಿಯು ಫಲ ಕೊಡಲಾರದು. ಹಾಗೆಯೇ ದೈವವು ಪ್ರಯತ್ನವಿಲ್ಲದೆ ಫಲ ಕೊಡಲಾರದು. ಆದ್ದರಿಂದ ನೀವು ಪ್ರಯತ್ನಪೂರ್ವಕ ಈ ಆತ್ಮನನ್ನು ಪಂಚಪಾಪಗಳಿಂದ ಬಿಡಿಸಿರಿ.

ಜಯಕುಮಾರ ರಾಜನು ಪರಿಗ್ರಹ ಪ್ರಮಾಣವೆಂಬ ಅಹಿಂಸಾವ್ರತವನ್ನು ಪರಿಪಾಲಿಸಿ ಆತ್ಮಶುದ್ಧಿಯನ್ನು ಮಾಡಿಕೊಂಡನು. ಒಂದು ದಿವಸ ರಾಜಾ ಜಯಕುಮಾರನು ತನ್ನ ಹೆಂಡತಿಯಾದ ಸುಲೋಚನೆಯೊಡನೆ ವನಕ್ರೀಡೆಗೆ ಹೋಗಿದ್ದನು ಅಲ್ಲಿ ವನಕ್ರೀಡೆ ಮಾಡಿ ಒಂದು ಲತಾ ಮಂಟಪದಲ್ಲಿ ಇಬ್ಬರೂ ಕೂತುಕೊಂಡಿರುವಾಗ ಅವನ ವ್ರತದ ಪರೀಕ್ಷೆಯನ್ನು ಮಾಡುವದಕ್ಕೋಸ್ಕರವಾಗಿ ದೇವತೆಗಳು ರತ್ನಗಳನ್ನು ಹಾಕಿದರು. ಆದರೆ ಅದನ್ನು ನೋಡಿ ಜಯಕುಮಾರನ ಮನಸ್ಸಿನಲ್ಲಿ ಸ್ವಲ್ಪವೂ ರಾಗಭಾವ ಅಥವಾ ಆಸಕ್ತಿಯು ಉಂಟಾಗಲಿಲ್ಲ. ಅದನ್ನು ಅವನು ಕಾಡಿನಲ್ಲಿರುವ ಕಲ್ಲುಗಳೆಂದು ತಿಳಿದನು. ಅವನ ಈ ನಿಸ್ಪೃಹ ಭಾವನೆಯನ್ನು ನೋಡಿ ದೇವತೆಗಳು ಅವನನ್ನು ಸ್ತುತಿಸಿದರು.

**ಪರಿಮಿತ ಪರಿಗ್ರಹವ್ರತ ಬನನೀ ಪೂಜಾರ್ಹ ಜಯಕುಮಾರಾಸ**

ಪರಿಗ್ರಹ ಪರಿಮಾಣ ವ್ರತವನ್ನು ಪಾಲಿಸಿದ್ದರಿಂದ ಜಯಕುಮಾರನು ದೇವತೆಗಳಿಗೂ ಜಗತ್ತಿಗೂ ವಂದನೀಯನಾದನು. ಅವನ ಕೀರ್ತಿಯು ಅಜರಾಮರವಾಗಿ ಪರಿಣಮಿಸಿತ.

ಆದುದರಿಂದ ಭವ್ಯರೇ! ನೀವು ಅನೇಕ ಪಾಪಗಳನ್ನು ಉತ್ಪನ್ನ ಮಾಡುವಂಥ ಲೋಭನನ್ನು ಪರಿತ್ಯಜಿಸಿರಿ. ಮತ್ತು ಪರಂಪರೆಯಿಂದ ನಿತ್ಯ ಸುಖವನ್ನು ಕೊಡುವ ಶೌಚ ಧರ್ಮವನ್ನು ನಿಮ್ಮ ಹೃದಯದಲ್ಲಿ ಧರಿಸಿರಿ ಇದು ಆಚಾರ್ಯರ ವಚನವಾಗಿದೆ, ಹೀಗೆ ಶೌಚಧರ್ಮದ ವಿಷಯದಲ್ಲಿ ಸಂಕ್ಷೇಪವಾಗಿ ವಿವೇಚಿಸಲಾಗಿದೆ.

ಇತಿ ಶೌಚಧರ್ಮ ಸಮಾಪ್ತ

# ಉತ್ತಮ ಸತ್ಯಧರ್ಮಾಯ ನಮಃ

## ಮಂಗಲಾಚರಣೆ.

ಶ್ರುತಸ್ಕಂಧನಭಶ್ಚಂದ್ರಂ ಸಂಯಮಶ್ರೀ ವಿಶೇಷಕಂ ।
ಇಂದ್ರಭೂತಿಂ ನಮಸ್ಯಾಮಿ ಯೋಗೀಂದ್ರಂ ಜ್ಞಾನಸಿದ್ಧಯೇ॥
ಜ್ಞಾನಾರ್ಣವ.

ಭಗವಾನ್ ಮಹಾವೀರ ಸ್ವಾಮಿಯ ದಿವ್ಯಧ್ವನಿಯನ್ನು ಕೇಳಿ ಗೌತಮ ಗಣಧರರು ದ್ವಾದಶಾಂಗ ಶಾಸ್ತ್ರಗಳನ್ನು ರಚಿಸಿದರು. ಮತ್ತು ಸ್ವಯಂ ಸಂಯಮವನ್ನು ಪಾಲಿಸಿ ಧ್ಯಾನವನ್ನು ಧರಿಸಿ ಮುಕ್ತಿಗೆ ಹೋದರು. ಆದುದರಿಂದ ಜಗತ್ತಿಗೆ ಧ್ಯಾನದ ಮಾರ್ಗವು ತಿಳಿಯಿತು. ಆದುದರಿಂದ ಧ್ಯಾನದ ಸಿದ್ಧಿಗೋಸ್ಕರವಾಗಿ ಗ್ರಂಥಾರಂಭದಲ್ಲಿ ಅವರಿಗೆ ನಮಸ್ಕಾರ ಮಾಡುವುದು ಉಚಿತವಾಗಿದೆ. ಆದುದರಿಂದ ನಾವು ಅವರಿಗೆ ನಮಸ್ಕಾರ ಮಾಡುತ್ತೇವೆ. ಗಣಧರರು ಭಗವಂತನ ದಿವ್ಯಧ್ವನಿಯ ಉಪದೇಶವನ್ನು ಜಗತ್ತಿಗೆ ಮಾಡಿದರು ಎಂದು ಅವರಿಗೆ ಲೋಕದ ಗುರುಗಳೆಂದು ಹೇಳಿದ್ದಾರೆ.

# ಉತ್ತಮ ಸತ್ಯಧರ್ಮಾಯ ನಮಃ

ಸತ್ಸು ಪ್ರಶಸ್ತೇಷು ಜನೇಷು ಸಾಧು ವಚನಂ ಸತ್ಯಮಿತ್ಯುಚ್ಯತೇ ॥
ಸರ್ವಾರ್ಥಸಿದ್ಧಿ.

ಸತ್ಯ ವಚನವೇ ಧರ್ಮವಾಗಿದೆ. ಧರ್ಮದ ಮೂಲವಾದ ದಯಾ ಧರ್ಮಕ್ಕೆ ಸತ್ಯವೇ ಕಾರಣವಾಗಿದೆ. ಅದು ಅನೇಕ ದೋಷಗಳನ್ನು ದೂರ ಮಾಡುತ್ತದೆ. ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಸುಖವನ್ನು ಕೊಡುತ್ತದೆ. ಸತ್ಯವಂತನ ಮೇಲೆ ಎಲ್ಲರೂ ವಿಶ್ವಾಸವನ್ನು ಇಡುತ್ತಾರೆ. ಎಲ್ಲಾ ಧರ್ಮಗಳಲ್ಲಿ ಸತ್ಯಧರ್ಮವು ಮುಖ್ಯವಾಗಿದೆ. ಸಂಸಾರಸಮುದ್ರದಿಂದ

ದಾಟಿ ಹೋಗಲು ಸತ್ಯಧರ್ಮವು ಹಡಗಿನಂತಿದೆ. ಎಲ್ಲಾ ವಿಧಾನಗಳಲ್ಲಿ ಸತ್ಯಧರ್ಮವು ಶ್ರೇಷ್ಟವಾಗಿದೆ. ಸತ್ಯವು ಎಲ್ಲಾ ಸುಖಕ್ಕೆ ಕಾರಣವಾಗಿದೆ. ಸತ್ಯದಿಂದಲೇ ಮನುಷ್ಯ ಜನ್ಮಕ್ಕೆ ಶೋಭೆ ಇದೆ. ಸತ್ಯಧರ್ಮದಿಂದಲೇ ಎಲ್ಲಾ ಗುಣಗಳ ಸಮೂಹಕ್ಕೂ ಮಹಿಮೆಯು ಪ್ರಾಪ್ತವಾಗುತ್ತದೆ. ಸತ್ಯದ ಪ್ರಭಾವದಿಂದ ದೇವತೆಗಳೂ ವಶರಾಗಿ ಸೇವೆಯನ್ನು ಮಾಡುತ್ತಾರೆ.

ದೇವಾ ಸರ್ವೇ ವಶಂ ಯಾಂತಿ ಭಜಂತಿ ಯತ್ಪದಂ ನೃಪಾ

ಪ್ರಶ್ನೋತ್ತರ ಮಾಣಿಕ್ಯಮಾಲಾ

ಸತ್ಯದಿಂದ ವರ್ತಿಸುವವರಿಗೆ ಮತ್ತು ಸತ್ಯ ಮಾತಾಡುವವರಿಗೆ ದೇವತೆಗಳೂ ಅಧೀನರಾಗುತ್ತಾರೆ. ರಾಜರು ಅವರ ಪಾದದ ಸೇವೆಯನು ಮಾಡುತ್ತಾರೆ. ಸತ್ಯವಂತರಿಗೇನೇ ಅಣುವ್ರತ ಮಹಾವ್ರತಗಳು ಪ್ರಾಪ್ತ ವಾಗುತ್ತವೆ. ಸತ್ಯದಿಂದಲೇ ಎಲ್ಲಾ ಆಪತ್ತಿಗಳು ದೂರವಾಗುತ್ತವೆ. ಆದು ದರಿಂದ ತನ್ನ ಮತ್ತು ಇತರರ ಹಿತವನ್ನು ಮಾಡುವ ಮಾತುಗಳನ್ನೇ ಮಾತಾಡಿರಿ, ಬೇರೆಯವರಿಗೆ ದುಃಖವನ್ನುಂಟು ಮಾಡುವ ಮಾತನ್ನು ಮಾತಾಡಬೇಡಿರಿ.

ಸರ್ವಸ್ಯಾಪಿ ಪ್ರಿಯಹಿತವಚೋ ಭಾವನಾಚಾತ್ಮತತ್ವೇ ।
ಸಂಪದ್ಯಂತಾಂ ಮಮ ಭವಭವೇ ಯಾವದೇತೇಪವರ್ಗಃ ॥

ದಶಭಕ್ತಿ.

ಎಲ್ಲಾ ಜೀವಗಳೊಡನೆ ತನ್ನ ಮತ್ತು ಇತರರ ಹಿತವಾಗುವಂತೆ ಮಾತಾಡಿರಿ. ಈ ಸತ್ಯ ವಚನವು ನಿಮಗೆ ಭವಾಂತರದಲ್ಲಿ ಮುಕ್ತಿಯನ್ನು ಕೊಡುವುದಾಗಿದೆ. ಬೇರೆ ಪ್ರಾಣಿಗಳಿಗೆ ಬಾಧೆಯಾಗುವಂತೆ ಮಾತಾಡ ಬೇಡಿರಿ. ಅಹಂಕಾರವನ್ನು ಬಿಟ್ಟು ಮಾತಾಡಿರಿ. ತನ್ನ ವಚನವನ್ನು ಹಾಳು ಮಾಡಬೇಡಿರಿ, ಈ ಜೀವನಿಗೆ ಅನೇಕ ಭವಗಳಲ್ಲಿ ಮಾತಾಡುವ ಶಕ್ತಿಯನ್ನು ಕೊಡುವ ವಚನವರ್ಗಣೆಯು ಪ್ರಾಪ್ತಿಯಾಗಲಿಲ್ಲ. ವಚನ ವರ್ಗಣೆಯ ಪ್ರಾಪ್ತಿಯು ಕರ್ಮದ ಕ್ಷಯೋಪಶಮದಿಂದ ಆಗುತ್ತದೆ.

ಯಾರಿಗೆ ನಾಲಿಗೆಯು ಪ್ರಾಪ್ತವಾಗಿದೆಯೋ ಅವರು ಅದನ್ನು ಸಾರ್ಥಕ ಗೊಳಿಸುವುದಕ್ಕೋಸ್ಕರವಾಗಿ ಕೋಮಲ ವಚನಗಳನ್ನು ಮಾತಾಡಬೇಕು.

ವಚನೇ ಕಾ ದರಿದ್ರತಾ.

ನೀವು ಕಪಟರಹಿತವಾಗಿ ಮಧುರ ವಚನವನ್ನು ಮಾತಾಡಿರಿ. ಒಳ್ಳೆಯ ಮಾತನ್ನು ಮಾತಾಡುವುದರಲ್ಲಿ ಏನೂ ಖರ್ಚಾಗುವುದಿಲ್ಲ. ಸಕ್ಕರೆಯ ಹಾಗೆ ಸಿಹಿಯಾಗಿರುವ ಅಕ್ಕರೆಯ ಮಾತುಗಳನ್ನು ಮಾತಾಡಿರಿ, ಸಕ್ಕರೆಗೆ ಖರ್ಚು ಇದೆ. ಆದರೆ ಸಿಹಿಯಾದ ಮಾತುಗಳನ್ನು ಆಡಲಿಕ್ಕೆ ಏನೂ ಖರ್ಚು ಇಲ್ಲ. ಪರಮಾತ್ಮನ ಅಸ್ತಿತ್ವವನ್ನು ಹೇಳುವ ಆಸ್ತಿಕ ಮಾತನ್ನು ಮಾತಾಡಿರಿ. ನಾಸ್ತಿಕರಂತೆ ಪಾಪ ಪುಣ್ಯ ಸ್ವರ್ಗಮೋಕ್ಷಗಳನ್ನು ಅಪಹರಿಸುವ ನಾಸ್ತಿಕ ಮಾತುಗಳನ್ನು ಮಾತಾಡಬೇಡಿರಿ. ಇದು ಪರಮಾತ್ಮನ ಉಪದೇಶವಾಗಿದೆ

**ಲೋಕದ ವಾರ್ತೆಯೊಳ್ ಬದಿರನಾತ್ಮಹಿತಂ ಪೊರಗಾದ ಮಾತಿನೊಳ್ ।**
**ಮೂಕತೆ ತನ್ನ ದೇಹ ಪರದೇಹದ ನೋಟದೊಳಂಧಕಂ ಪ್ರಮಾ-**
**ದೈಕತೆಕಂಡುರಾಗಿಸಿದೊಡಂ ಸುಡು ಮಾಂಸ ವಿಕಾರ ಮೆಂದುನೆ-**
**ಯ್ಗೋಕರಿಪಾತನಂತಕನನಂಜಿಸನೇಯಪರಾಜಿತೇಶ್ವರಾ ॥**

ಶತಕತ್ರಯ.

ಉತ್ತಮ ಸತ್ಯ ಧರ್ಮವನ್ನು ಪರಿಪಾಲಿಸುವ ಧರ್ಮಾತ್ಮನು ಲೋಕದ ಸಮಾಚಾರದಲ್ಲಿ ಕಿವುಡನೂ, ಆತ್ಮಹಿತಕರವಲ್ಲದ ಮಾತಿನಲ್ಲಿ ಮೂಕನೂ, ತನ್ನ ಶರೀರ ಬೇರೆಯವರ ಶರೀರ ಇವುಗಳ ನೋಟದಲ್ಲಿ ಕುರುಡನೂ, ಪ್ರಮಾದದಿಂದಲೇ ನೋಡಿ ಪ್ರೀತಿಸಿದರೂ ಈ ಶರೀರವು ಮಾಂಸಮಯವಾದುದು. ಇದನ್ನು ಸುಡು ಎಂದು ಶರೀರಕ್ಕೆ ಜುಗುಪ್ಸೆ ಪಡುವವನು, ಯಮನನ್ನು ಬೆದರಿಸುವುದಿಲ್ಲವೇ ? ಅವಶ್ಯವಾಗಿಯೂ ಬೆದರಿಸುವನು, ಅಂದರೆ ಮರಣವನ್ನು ಜಯಿಸುವನು.

ಈ ಜೀವನು ಅನಂತಕಾಲದವರೆಗೆ ನಿಗೋದ ಪರ್ಯಾಯದಲ್ಲಿದ್ದನು. ಆಗ ಅವನಿಗೆ ವಚನರೂಪವಾದ ನೋಕರ್ಮವರ್ಗಣೆಗಳು ದೊರೆಯಲಿಲ್ಲ. ಹಾಗೆಯೇ ಪೃಥ್ವೀ, ಅಪ್, ತೇಜ, ವಾಯು ಮತ್ತು ವನಸ್ಪತಿ ಕಾಯ, ಈ ಏಕೇಂದ್ರಿಯಗಳಲ್ಲಿ ಅನಂತಕಾಲ ಕಳೆದನು. ಅಲ್ಲಿಯೂ ಮಾತಾಡುವ ಶಕ್ತಿಯು ಪ್ರಾಪ್ತವಾಗಲಿಲ್ಲ. ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಈ ಅವಸ್ಥೆಯಲ್ಲಿ ನಾಲಗೆಯು ಪ್ರಾಪ್ತವಾಗಿತ್ತು. ಆದರೆ ಅಕ್ಷರರೂಪವಾದ ವಚನವನ್ನು ಉಚ್ಚರಿಸಲು ಶಕ್ತಿ ಪ್ರಾಪ್ತವಾಗಲಿಲ್ಲ. ಕೇವಲ ಮನುಷ್ಯ ಪರ್ಯಾಯದಲ್ಲಿಯೇ ವಚನರೂಪದಿಂದ ಮಾತಾಡಲು ಶಕ್ತಿಯು ಪ್ರಾಪ್ತವಾಯಿತು.

ತಾಸ ಭ್ರಮಣಕೀ ಹೈ ಬಹುಕಥಾ
ಪೈ ಕಛು ಕಹಾಂ ಕಹೀಮುನಿ ಯಥಾ
ಕಾಲ ಅನಂತ ನಿಗೋದ ಮಝಾರ
ಬೀತ್ಯೋ ಏಕೇಂದ್ರಿಯ ತನಧಾರ

ಛಹಢಾಲಾ

ಮನುಷ್ಯ ಪರ್ಯಾಯದಲ್ಲಿಯೇ ಸರಿಯಾಗಿ ಮಾತಾಡುವ ಶಕ್ತಿಯು ಪ್ರಕಟವಾಗುತ್ತದೆ. ಹೀಗಿರುವಾಗ ಇಂಥಹ ದುರ್ಲಭವಾದ ವಚನವನ್ನು ನಿಂದ್ಯ ವಚನಗಳನ್ನು ಮಾತಾಡಿ ಹಾಳು ಮಾಡುವುದು ದೊಡ್ಡ ಅನರ್ಥವಾಗಿದೆ. ಮನುಷ್ಯ ಜನ್ಮದ ಮಹಿಮೆಯು ಸತ್ಯ ಮಾತಾಡುವುದರಲ್ಲಿದೆ. ಸತ್ಯವಿಲ್ಲದಿದ್ದರೆ ಮನುಷ್ಯನಿಗೆ ಶೋಭೆ ಇಲ್ಲ.

ನೇತ್ರೇಣ ಹಿನಂ ವದನಂ ನ ಭಾತಿ ।
ಸತ್ಯೇನ ಹೀನಾ ನ ಚ ಭಾತಿ ವಾಣೀ ॥

ಹೇಗೆ ಕಣ್ಣಿಲ್ಲದೆ ಮುಖಕ್ಕೆ ಶೋಭೆ ಇಲ್ಲವೋ ಹಾಗೆಯೇ ಸತ್ಯವಿಲ್ಲದೆ ವಚನಕ್ಕೆ ಶೋಭೆ ಇಲ್ಲ. ಆದುದರಿಂದ ಭವ್ಯರೇ ! ಎಂಥಹ ಪ್ರಸಂಗ ಬಂದರೂ ಅಸತ್ಯವನ್ನು ಮಾತನಾಡಬೇಡಿರಿ. ಉತ್ತಮ ಸತ್ಯಧರ್ಮವು

ನಿಮ್ಮ ಕೀರ್ತಿಯನ್ನು ಲೋಕದಲ್ಲಿ ಹಬ್ಬಿಸುತ್ತದೆ. ಸತ್ಯದಿಂದ ಜಯ ಮತ್ತು ಅಸತ್ಯದಿಂದ ಅಪಜಯವು ಹೇಗಾಯ್ತೆಂಬ ವಿಷಯದಲ್ಲಿ ಒಂದು ಘಟನೆಯನ್ನು ತಿಳಿಯಿರಿ.

ಒಂದು ಸಾರಿ ಐದು ಮಿತ್ರರು ಧನಾರ್ಜನೆಗೋಸ್ಕರವಾಗಿ ಪರದೇಶಕ್ಕೆ ಹೋದರು. ಅದರಲ್ಲಿ ನಾಲ್ವರು ದರಿದ್ರರು. ಒಬ್ಬನು ಮಾತ್ರ ಧನಿಕನಾಗಿದ್ದನು. ಅವರೊಳಗೆ ಹೀಗೆ ನಿರ್ಣಯವಾಯಿತು. ವ್ಯಾಪಾರದಲ್ಲಿ ಲಾಭವಾದರೆ ಧನವಂತನಿಗೆ ಅವನ ಹಣದ ಬದಲಾಗಿ ಎರಡು ಭಾಗ-ಉಳಿದವರಿಗೆ ಅವರ ಪರಿಶ್ರಮಕ್ಕಾಗಿ ಒಂದೊಂದು ಭಾಗವೆಂದು ಮಾತಾಡಿಕೊಂಡರು. ಆ ಪ್ರಕಾರ ವ್ಯಾಪಾರ ಮಾಡತೊಡಗಿದರು. ಅವರಿಗೆ ಪುಣ್ಯೋದಯವಿತ್ತೆಂದು ವ್ಯಾಪಾರದಲ್ಲಿ ಕೋಟ್ಯವಧಿ ಲಾಭವಾಯಿತು. ಅವರು ತನ್ನ ಊರಿಗೆ ಹಿಂತಿರುಗಿದರು. ನಿರ್ಣಯವಾದಂತೆ ತನ್ನ ಪಾಲುಗಳನ್ನು ಹಂಚಿಕೊಳ್ಳಲು ಕೂತರು. ಆಗ ಆ ನಾಲ್ವರೂ ದರಿದ್ರರು ಲೋಭದವಶರಾಗಿ ಹೇಳತೊಡಗಿದರು. 'ಈ ಸಂಪತ್ತಿಯು ನಮ್ಮ ನಾಲ್ವರಿದ್ದು, ನಮ್ಮ ಹಣವಿತ್ತು, ಆದುದರಿಂದ ನಮಗೆ ೨ ಭಾಗ. ನಿನ್ನ ಪರಿಶ್ರಮಕ್ಕೆ ನಿನಗೆ ಒಂದು ಭಾಗವೆಂದು. ಆಗ ಆ ಧನವಂತನಾದ ಸಮ್ಯಗ್‌ದೃಷ್ಟಿಯು ವಿಚಾರ ಮಾಡುತ್ತಿದ್ದಾನೆ- ಧನದ ಆಶೆಯಿಂದ ಸತ್ಯಧರ್ಮವನ್ನು ಕೆಡಿಸುವುದು ಯೋಗ್ಯವಲ್ಲ.

ಸಿದ್ಧಮಸ್ತ್ಯಭಿಲಾಷತ್ವಂ ಕಸ್ಯಚಿತ್ ಸರ್ವತಶ್ಚಿತಃ ।
ದೇಶತೋಽಪ್ಯಸ್ಮದಾದೀನಾಂ ರಾಗಾಭಾವಸ್ಯ ದರ್ಶನಾತ್ ॥

ಪಂಚಾಧ್ಯಾಯೀ.

ಸಮ್ಯಗ್‌ದೃಷ್ಟಿ ಜೀವರು ಪಾಪಭೀರುಗಳಾಗಿರುತ್ತಾರೆ. ಅವರಿಗೆ ಇಂದ್ರಿಯ ಸುಖದ ಅಭಿಲಾಷೆ ಇರುವುದಿಲ್ಲ. ಇದು ಲೋಕಪ್ರಸಿದ್ಧವಾಗಿದೆ. ಅವರಿಗೆ ಅನ್ಯಾಯ ಮೂಲಕ ಭೋಗದ ಅಭಿಲಾಷೆಯೂ ಇರುವುದಿಲ್ಲ. ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ಇಂದ್ರಿಯ ವಿಷಯಗ

ಳನ್ನು ಉದಾಸೀನ ಭಾವದಿಂದ ಭೋಗಿಸುತ್ತಿರುತ್ತಾನೆ. ಇರಲಿ. ಆ ಸಮ್ಯಗ್‌ದೃಷ್ಟಿಯು ಧನಿಕನಾಗಿದ್ದು ಆತ್ಮ ಧನದಲ್ಲಿ ಪ್ರೀತಿಯುಳ್ಳವನಾಗಿದ್ದನು. ಆದುದರಿಂದ ಅವನಿಗೆ ಜಡರೂಪವಾದ ರತ್ನ, ಮುತ್ತು ಮೊದಲಾದ ಧನಗಳಲ್ಲಿ ಅಷ್ಟೊಂದು ಪ್ರೀತಿ ಇರಲಿಲ್ಲ. ಆದುದರಿಂದ "ಈ ಧನಗಳನ್ನು ನೀವೇ ತೆಗೆದುಕೊಳ್ಳಿರಿ. ನನಗೆ ಬೇಕಾದಷ್ಟು ಸಂಪತ್ತಿ ಇದೆ" ಎಂದನು. ಮತ್ತು ಆ ಎಲ್ಲಾ ಧನವನ್ನು ಆ ನಾಲ್ಕು ಜನರಿಗೇನೆಯೇ ಕೊಟ್ಟನು. ಮತ್ತು ತಾನು ಆ ಸಂಪತ್ತಿಯಿಂದ ಉದಾಸೀನನಾಗಿದ್ದನು. ಇಷ್ಟು ಸಂಪತ್ತಿ ಹೋದರೂ ಅವನ ಮನಸ್ಸಿನಲ್ಲಿ ಸ್ವಲ್ಪವೂ ಸಂಕ್ಲೇಶ ಪರಿಣಾಮವು ಹುಟ್ಟಲಿಲ್ಲ. ಸಮ್ಯಗ್‌ದೃಷ್ಟಿಗಳ ಪರಿಣಾಮವು ಉದಾರವಾಗಿರುತ್ತದೆ.

ಉದಾರಸ್ಯ ತೃಣಂ ವಿತ್ತಂ ಶೂರಸ್ಯ ಮರಣಂ ತೃಣಂ
ವಿರಕ್ತಸ್ಯ ತೃಣಂ ಭಾರ್ಯಾ ನಿಸ್ಪೃಹಸ್ಯ ತೃಣಂ ಜಗತ್

ಸುಭಾಷಿತಾವಲಿ.

ಉದಾರಿಗಳಿಗೆ ಸಂಪತ್ತಿಯು ಹುಲ್ಲು ಕಡ್ಡಿಯ ಹಾಗೆ ಇರುತ್ತದೆ. ಶೂರರಿಗೆ ಮರಣದ ಚಿಂತೆ ಇರುವುದಿಲ್ಲ. ವಿರಕ್ತನಿಗೆ ಹೆಂಡತಿಯ ಮೇಲೆ ಆಸಕ್ತಿ ಇರುವುದಿಲ್ಲ. ಹಾಗೆಯೇ ನಿಸ್ಪೃಹನಾದ ವ್ಯಕ್ತಿಗೆ ಲೋಕವೆಲ್ಲಾ ಹುಲ್ಲು ಕಡ್ಡಿಯ ಹಾಗೆ ಕಾಣುತ್ತದೆ. ಅವನಿಗೆ ಅದರ ಮೂಲ್ಯವಿಲ್ಲ. ಆ ಪ್ರಕಾರ ಆ ಸಮ್ಯಗ್‌ದೃಷ್ಟಿಯೂ ಸಂಪತ್ತಿ ಹೋದರೂ ನಿಶ್ಚಿಂತನಾಗಿದ್ದನು. ಒಂದು ಸಾರಿ ಅವನ ಮಿತ್ರನೊಬ್ಬನು ಅವನನ್ನು ಕಾಣಲಿಕ್ಕೆ ಬಂದನು. ಮಾತಾಡುವ ಮಧ್ಯದಲ್ಲಿ ಅವನು ಮಿತ್ರನೇ ! ನೀನು ಬಹು ದಿವಸಗಳಿಂದ ಇಲ್ಲಿ ಕಾಣುತ್ತಿರಲಿಲ್ಲ. ಎಲ್ಲಿಯಾದರೂ ಬೇರೆ ಕಡೆಗೆ ಹೋಗಿದ್ದೀಯೋ ? ಎಂದು ಕೇಳಿದನು. ಅದಕ್ಕೆ ಅವನು 'ಮಿತ್ರ ! ನಾನು ಧನಾರ್ಜನೆಗಾಗಿ ಪರದೇಶಕ್ಕೆ ಹೋಗಿದ್ದೆನು. ಎಂದನು. ಆಗ ಮಿತ್ರನು 'ಹಾಗಾದರೆ ಎಷ್ಟು ಧನಸಂಚಯವಾಯ್ತು.' ಎಂದು ಕೇಳಿದನು. ಅದಕ್ಕೆ ಅವನು 'ಧನಾರ್ಜನೆಯೇನೋ ಬಹಳ ಆಯ್ತು. ಆದರೆ ಪೂರ್ವ

ಜನ್ಮದಲ್ಲಿ ಅನ್ಯಾಯದಿಂದ ಧನ ಸಂಚಯ ಮಾಡಿದ್ದೆನೋ ಏನೋ ? ಆ ಪಾಪದ ಉದಯದಿಂದ ಅದು ನನಗೆ ಸಿಗದೆ ಹೋಯಿತು. ನಾಶವಾಗುವುದು ಸಂಪತ್ತಿಯ ಸ್ವಭಾವವಾಗಿದೆ ಎಂದು ಹಾಸ್ಯ ಮುದ್ರೆಯಿಂದ ಹೇಳಿದನು.

ಅಸ್ಥಿರಂ ಜೀವಿತಂ ಲೋಕೆ ಚಾಸ್ಥಿರೇ ಧನಯೌವನೇ ।
ಅಸ್ಥಿರಾಃ ಪುತ್ರದಾರಾಶ್ಚ ಧರ್ಮಕೀರ್ತಿದ್ವಯಂ ಸ್ಥಿರಂ ॥

ಸುಭಾಷಿತಾವಲಿ.

‘ ಆಯುಷ್ಯ, ಧನ, ತಾರುಣ್ಯ, ಪುತ್ರ, ಸ್ತ್ರೀ ಮೊದಲಾದವುಗಳು ಈ ಲೋಕದಲ್ಲಿ ಅಸ್ಥಿರವಾದವುಗಳು. ಧರ್ಮ ಮತ್ತು ಕೀರ್ತಿಯು ಮಾತ್ರ ಸ್ಥಿರವಾದವುಗಳು. ಆದುದರಿಂದ ನಾವು ಧರ್ಮಾರ್ಜನೆಯನ್ನು ಮಾಡಬೇಕು. ಧನಾರ್ಜನೆಯನ್ನು ಮಾಡುವುದರಿಂದೇನು ಪ್ರಯೋಜನವೆಂದು ನಾನು ಆ ವಿಷಯದಲ್ಲಿ ವಿರಕ್ತನಾಗಿದ್ದೇನೆ. ಎಂದನು. ಅದನ್ನು ಕೇಳಿ ಆ ಮಿತ್ರನು ಧನವು ಹೇಗೆ ಹೋಯಿತು ? ಎಂದನು. ಮತ್ತು ವಿಷಯದಲ್ಲಿ ವಿಶೇಷ ವಿಚಾರ ಮಾಡತೊಡಗಿದನು. ಆಗ ಅವನು ಧರ್ಮಾತ್ಮನಾಗಿದ್ದರಿಂದ ಅವನಿಗೆ ಹಿಂದೆ ನಡೆದ ಎಲ್ಲಾ ಘಟನೆಗಳನ್ನು ವಿಸ್ತಾರವಾಗಿ ಆ ಸಮ್ಯಗ್‌ದೃಷ್ಟಿಯು ಹೇಳಿದನು, ಆಗ ಆ ಮಿತ್ರನು ಏನೂ ಅಡ್ಡಿ ಇಲ್ಲ. ಸಂಪತ್ತಿಯು ಹೋದರೆ ಹೋಗಲಿ. ಅದಕ್ಕೋಸ್ಕರವಾಗಿ ನಾವು ವಿಚಾರ ಮಾಡಬೇಕಾಗಿಲ್ಲ. ಆದರೆ ನಾವು ಸತ್ಯ ಧರ್ಮಕ್ಕೋಸ್ಕರವಾಗಿ ವಿಚಾರ ಮಾಡಬೇಕಾಗಿದೆ. ಯಾವ ಪರಿಸ್ಥಿತಿಯಲ್ಲಿಯೂ ಸತ್ಯ ಧರ್ಮದ ರಕ್ಷಣೆಯನ್ನು ಮಾಡಲೇ ಬೇಕಾಗಿದೆ. ಇದು ಕೇವಲಿ ಭಗವಂತನ ಆದೇಶವಾಗಿದೆ. ಅದು ಎಂದೂ ಸುಳ್ಳಾಗಲಾರದು. ಸತ್ಯಕ್ಕೆ ಯಾವಾಗಲೂ ಜಯವಿದೆ. ಅದನ್ನು ಪರೀಕ್ಷಿಸಲೇಬೇಕು ಎಂದು ಹೇಳಿ ಆ ನಾಲ್ಕು ಪಾಲುಗಾರರನ್ನು ಕರೆಯಿಸಿ ಕೊಂಡನು. ಅವರಿಗೆ ಸತ್ಯ ಪರಿಸಿ ಯನ್ನು ಕೇಳಿದನು. ಅವರು ಮಿಥ್ಯಾದೃಷ್ಟಿಗಳು ಆಗಿದ್ದರಿಂದ ಪಾಪಪುಣ್ಯದ ವಿಚಾರವು

ಅವರಿಗೆ ಇರಲಿಲ್ಲ. ಅವರು ಸ್ವಯಂ ಸತ್ಯವನ್ನು ಹೇಳಲಿಲ್ಲ. ಅಷ್ಟೇ ಅಲ್ಲ. ಸಮ್ಯಗ್ದೃಷ್ಟಿಯ ಮೇಲೆ ಅಸತ್ಯದ ದೋಷಾರೋಪಣೆಯನ್ನು ಮಾಡತೊಡಗಿದರು. ಅವನನ್ನು ಅನೇಕ ವಿಧದಿಂದ ನಿಂದಿಸಿದರು. ಮಿಥ್ಯಾದೃಷ್ಟಿಗಳು ಮೋಹಿಗಳಾಗಿ ಸ್ವಾರ್ಥಿಗಳಾಗಿರುತ್ತಾರೆ.

ಅತತ್ವಮಪಿ ಪಶ್ಯಂತಿ ತತ್ವಂ ಮಿಥ್ಯಾತ್ವಮೋಹಿತಾಃ
ಮನ್ಯಂತೇ ತೃಷಿತಾಸ್ತೋಯಂ ಮೃಗಾಹಿ ಮೃಗತೃಷ್ಣಿಕಾಂ ॥

ಧರ್ಮನೀತಿಸಾರ ಚಿಂತಾಮಣಿ

ಮಿಥ್ಯಾದೃಷ್ಟಿಗಳು ಮೋಹಿಗಳೂ ಅಜ್ಞಾನಿಗಳೂ ಆಗಿರುತ್ತಾರೆ. ಅವರಿಗೆ ತತ್ವದ ಮೇಲೆ ವಿಶ್ವಾಸವಿರುವುದಿಲ್ಲ. ಹೇಗೆ ಮೃಗಗಳು ಮೃಗಮರೀಚಿಕೆಯನ್ನು ನೀರೆಂದು ತಿಳಿಯುತ್ತಾರೆಯೋ ಹಾಗೆಯೇ ಈ ಮನುಷ್ಯ ಮೃಗಗಳು ಸಂಸಾರದಲ್ಲಿಯೇ ಪರಮಸುಖವೆಂದು ತಿಳಿಯುತ್ತಾರೆ ಅದಕ್ಕೋಸ್ಕರವಾಗಿ ಎಂಥಹ ಅನ್ಯಾಯವನ್ನೂ ಮಾಡುತ್ತಾರೆ.

ಆ ಮಿಥ್ಯಾದೃಷ್ಟಿಗಳ ಮಾತನ್ನು ಕೇಳಿ ಆ ಮಿತ್ರನು ಹೇಳಿದನು. ' ಇದು ನ್ಯಾಯವಲ್ಲ, ನೀವು ಅನ್ಯಾಯ ಮಾರ್ಗದಿಂದ ವರ್ತಿಸುತ್ತಿದ್ದು ಅಸತ್ಯವನ್ನು ಮಾತಾಡುತ್ತಿದ್ದೀರಿ, ಇದಕ್ಕೋಸ್ಕರವಾಗಿ ನಿಮಗೆ ಯೋಗ್ಯ ಶಾಸನವಾಗಬೇಕಾಗಿದೆ. ಎಂದು ಹೇಳಿ ಎಲ್ಲಾ ವಿಷಯವನ್ನು ರಾಜನಿಗೆ ಹೋಗಿ ತಿಳಿಸಿದನು. ರಾಜನು ಈ ವಿಷಯವನ್ನು ಹೇಗೆ ನಿರ್ಣಯಿಸಬೇಕೆಂದು ವಿಚಾರ ಮಾಡತೊಡಗಿದನು. ಇಷ್ಟರಲ್ಲಿ ಅವನ ಮಂತ್ರಿಯಾದ ಅಭಯಕುಮಾರನು ಅಲ್ಲಿ ಬಂದನು. ಅವನು ನ್ಯಾಯ ನೀತಿಯಿಂದ ರಾಜ್ಯದ ಸಂಚಾಲನೆಯನ್ನು ಮಾಡುತ್ತಿದ್ದನು. ಮತ್ತು ಸೂಕ್ಷ್ಮದೃಷ್ಟಿಯಿಂದ ಎಲ್ಲಾ ವಿಷಯಗಳ ವಿಚಾರ ಮಾಡುತ್ತಿದ್ದನು. ಆ ಐದು ಜನರನ್ನು ರಾಜಸಭೆಯಲ್ಲಿ ಕರೆಯಿಸಿ ಆ ನಾಲ್ಕು ಮಿಥ್ಯಾದೃಷ್ಟಿಗಳನ್ನು ಮತ್ತು ಆ ಸಮ್ಯಗ್ದೃಷ್ಟಿಯನ್ನು ಚೆನ್ನಾಗಿ ದಿಟ್ಟಿಸಿ ನೋಡಿದನು, ಈ ನಾಲ್ವರು ಅಪರಾಧಿಗಳಾಗಿದ್ದಾರೆಂದು ಮನಸ್ಸಿನಲ್ಲಿ ದೃಢಮಾಡಿಕೊಂಡನು. ಬುದ್ಧಿವಂತನೇ ಮಂತ್ರಿಯಾಗಿರಬೇಕು,

न भाति लोके मतिहीन मन्त्री
देवेन हीनं न च चैत्यधाम
नीत्या विहीनो न च भाति राजा
न भाति शूरोऽपि विवेकशून्यः

ಬೋಧಾಮೃತಸಾರ.

ಬುದ್ಧಿವಂತನಾದ ಅಭಯಕುಮಾರನು ಹೇಳಿದನು. ನಿಮ್ಮ ನ್ಯಾಯವು ನಾಳೆ ಮಾಡಲಾಗುವುದು, ನಾಳೆ ೧೨ ಘಂಟೆಗೆ ನೀವು ಇಲ್ಲಿ ಬರುವುದು. ಎಂದನು. ಎರಡನೆಯ ದಿನ ಅವರು ರಾಜಸಭೆಗೆ ಬಂದರು. ಪಂಕ್ತಿಬದ್ಧವಾಗಿ ಅವರನ್ನು ನಿಲ್ಲಿಸಿ ಕಲ್ಲಿದ್ದಲಿನ ಸುಡುತ್ತಿರುವ ಕೆಂಡಗಳನ್ನು ತರಿಸಿದನು. ಇದನ್ನು ನೋಡಿ ಆ ನಾಲ್ವರೂ ಹೆದರಿಕೊಂಡು ವಿಚಾರ ಮಾಡ ಮಾಡತೊಡಗಿದರು. ನಮ್ಮ ಶ್ರೇಣಿಕರಾಜನ ನ್ಯಾಯವು ಒಳ್ಳೆಯದಾಗಿತ್ತು. ಈ ಅಭಯಕುಮಾರನ ನ್ಯಾಯವು ಭಯಂಕರವಾಗಿದೆ. ಆದರೆ ಆ ಸಮ್ಯಗ್‌ದೃಷ್ಟಿಯು ಮಾತ್ರ ಹರ್ಷವಿಷಾದವಿಲ್ಲದೆ ಹಾಗೆಯೇ ಸುಮ್ಮನೆ ನಿಂತಿದ್ದನು. ಮತ್ತು ಕಣ್ಣು ಮುಚ್ಚಿಕೊಂಡು ಭಗವಂತನ ಸ್ತುತಿಯನ್ನು ಮಾಡತೊಡಗಿದನು. ' ಭಗವನ್ ! ನಿಮ್ಮ ದಿವ್ಯವಾಣಿಯ ವಿರುದ್ಧವಾಗಿ ನಾನು ಏನೂ ವರ್ತಿಸಲಿಲ್ಲ. ತಪ್ಪಿ ನಡೆದಿದ್ದರೆ ದಂಡಕ್ಕೆ ಪಾತ್ರನಾಗಿರುವೆನು. ಈಗ ನನ್ನನ್ನು ರಕ್ಷಿಸುವವರು ನೀವೇ ಇದ್ದೀರಿ. ಎಂದು ಸ್ತುತಿಸಿದನು.

ಭಕ್ತಜನಾಂಚಾ ತೊಂ ಕೈವಾರೀ ಅಸಶೀ ವ್ಹಣುನೀಯೇ ಸದಯಾ

ಹೀಗೆ ಭಗವಂತನ ಸ್ತುತಿಯನ್ನು ಮಾಡುತ್ತಾ ಸ್ಥಿರವಾಗಿದ್ದನು. ಇಷ್ಟರಲ್ಲಿ ಆ ಸುಡುತ್ತಿರುವ ಕೆಂಡಗಳನ್ನು ತಂದು ಅವರೆದುರಿನಲ್ಲಿಟ್ಟು ಯಾರು ಸತ್ಯವಂತರಾಗಿದ್ದೀರೋ ಅವರು ಈ ಕೆಂಡಗಳನ್ನು ಕೈಯಲ್ಲಿ ತೆಗೆದುಕೊಳ್ಳಲಿ, ಎಂದನು. ಇದನ್ನು ಕೇಳಿದ ಸಮ್ಯಗ್‌ದೃಷ್ಟಿಯು ಆ ಕೆಂಡಗಳನ್ನು ಕೈಯಲ್ಲಿ ತೆಗೆದುಕೊಂಡನು. ಅವನ ಕೈಯಲ್ಲಿ ಅದು ಭಂಗಾರದ ಅಲಂಕಾರದಂತೆ ಶೋಭಿಸಿತು. ಬೆಂಕಿ ಇದೆ ಎಂಬ ಭಾಸವೂ ಆಗಲಿಲ್ಲ.

ಇದನ್ನು ನೋಡಿ ದೇವತೆಗಳು ಜಯಜಯಕಾರ ಮಾಡಿದರು. ಈ ಸಮ್ಯಗ್ ದೃಷ್ಟಿಯು ಧನ್ಯನಾಗಿದ್ದಾನೆಂದು ಪ್ರಶಂಶಿಸಿದರು.

ಸತ್ಯಾಣುವ್ರತಯೋಗೇ ಝಾಲಾ ಜಗಿ ಕೀರ್ತಿಮಾನ ಧನದೇವ
ತದ್ವ್ಯಶ ವಿಮಲ ಸ್ವಮುಖೇ ಗಾತಿ ಸುಖ ಅಮಿತಮಾನ ಧನದೇವ

ರತ್ನಕರಂಡ.

ಆ ಸಮಯದಲ್ಲಿ ದೇವತೆಗಳು ಜಯ ಜಯಕಾರವನ್ನು ಮಾಡಿ ಪುಷ್ಪವೃಷ್ಟಿ ಮಾಡಿದರು. ಅತ್ಯಂತ ಮಧುರ ಕಂಠದಿಂದ ಅವನನ್ನು ಸ್ತುತಿಸಿದರು. ಇವನ್ನು ನೋಡಿ ರಾಜನೂ, ಎಲ್ಲಾ ಪ್ರಜೆಗಳೂ ಬಹಳ ಪ್ರಸನ್ನರಾದರು ಮತ್ತು ಆ ನಾಲ್ಕು ಜನರ ಕೈಯಲ್ಲಿಟ್ಟ ಕೆಂಡವು ಅವರ ಕೈಯನ್ನು ಸುಟ್ಟು ವಸ್ತ್ರಕ್ಕೂ ಬೆಂಕಿ ಹತ್ತಿತು. ಇದನ್ನು ನೋಡಿ ದೇವತೆಗಳು ಪಾಪಿಷ್ಠರೇ! ಪಾಪಿಷ್ಠರೇ, ಧಿಕ್ಕಾರವಿರಲಿ ಎಂದರು. ಆಗ ಅವರು ನಮ್ಮನ್ನು ರಕ್ಷಿಸಿರಿ ರಕ್ಷಿಸಿರಿ ಎಂದು ಬೊಬ್ಬೆ ಹೊಡೆದರು. ಆಗ ರಾಜನು 'ನಿಮ್ಮ ರಕ್ಷಣೆ ಮಾಡಲಾಗುವುದಿಲ್ಲ. ನೀವು ದಂಡಕ್ಕೆ ಪಾತ್ರರಾಗಿದ್ದೀರಿ' ಎಂದನು. ಮತ್ತು ಅವರ ಮೂಗು ಕತ್ತರಿಸಿ ಕಳುಹಿಸಿದನು. ಇವನ್ನು ನೋಡಿ ಆ ಸಮ್ಯಗ್‌ದೃಷ್ಟಿಗೆ ಮನಸ್ಸಿನಲ್ಲಿ ದಯೆ ಹುಟ್ಟಿತು. ಅವನು ದಯಾಪರಿಣಾಮದಿಂದ 'ರಾಜನ್! ಇವರಿಗೆ ಇನ್ನು ಹೆಚ್ಚು ಕಷ್ಟ ಕೊಡಬೇಡಿರಿ. ಇದೆಲ್ಲಾ ನನ್ನ ಪೂರ್ವಜನ್ಮದ ಕರ್ಮದ ಉದಯವಾದ್ದರಿಂದ ಹೀಗಾಯಿತು, ಎಂದನು.

ಇದನ್ನು ಕೇಳಿ ಅಲ್ಲಿರುವ ಎಲ್ಲರಿಗೂ ಸತ್ಯ ಧರ್ಮದ ಮೇಲೆ ವಿಶೇಷ ವಿಶ್ವಾಸವು ದೃಢವಾಯಿತು, ಆ ನಾಲ್ವರೂ 'ಇನ್ನು ನಾವು ಅಸತ್ಯದಿಂದ ವರ್ತಿಸುವುದಿಲ್ಲ, ಸತ್ಯಧರ್ಮವನ್ನು ಪರಿಪಾಲಿಸುವೆವು.' ಎಂದು ಪ್ರತಿಜ್ಞೆಯನ್ನು ಮಾಡಿ ರಾಜನಿಗೆ ನಮಸ್ಕಾರವನ್ನು ಮಾಡಿದರು, ಅವರು ಸತ್ಯಧರ್ಮವನ್ನು ಗ್ರಹಣೆ ಮಾಡಿದರು.

ಆದುದರಿಂದ ಭವ್ಯರೇ ! ಸತ್ಯಧರ್ಮದ ಮಹಿಮೆಯು ಎಷ್ಟಿದೆ ಎಂಬುದನ್ನು ನೋಡಿರಿ. ಧನದೇವನು ಸತ್ಯ ಧರ್ಮದಿಂದ ಈ ಜಗತ್ತಿನಲ್ಲಿ ಪ್ರಸಿದ್ಧನಾದ, ಮುಂದೆಯೂ ನಿತ್ಯ ಸುಖವನ್ನು ಅರ್ಜಿಸಿದನು. ಇದನ್ನು ವಿಚಾರ ಮಾಡಿ ಯಾವಾಗಲೂ ದುಃಖವನ್ನು ಕೊಡುವ ಅಸತ್ಯ ಅಧರ್ಮವನ್ನು ತ್ಯಜಿಸಿರಿ. ಮತ್ತು ಅತ್ಯಂತ ಸುಖದ ನಿಧಿಯಾದ ಸತ್ಯ ಧರ್ಮವನ್ನು ಹೃದಯ ಪೆಟ್ಟಿಗೆಯಲ್ಲಿ ಧರಿಸಿರಿ. ಇದು ಆಚಾರ್ಯರ ವಚನವಾಗಿದೆ.

ಭವ್ಯರೇ ! ನಾಲ್ಕು ಗತಿಗಳಲ್ಲಿಯೂ ಮನುಷ್ಯ ಗತಿಯು ಶ್ರೇಷ್ಟವಾಗಿದೆ. ಕಣ್ಣು, ಕಿವಿ, ನಾಲಿಗೆ, ಮೂಗು ಈ ಇಂದ್ರಿಯಗಳು ಎಲ್ಲಾ ತಿರ್ಯಂಚ ಪ್ರಾಣಿಗಳಿಗೂ ಇರುತ್ತವೆ. ತಿನ್ನುವುದು, ಉಣ್ಣುವುದು, ಕಾಮಭೋಗಾದಿಗಳನ್ನು ಭೋಗಿಸುವುದು, ಇವೆಲ್ಲ ಪೂರ್ವಜನ್ಮದ ಕರ್ಮಾನುಸಾರವಾಗಿ ಎಲ್ಲರಿಗೂ ಅನುಕೂಲವಾಗುತ್ತವೆ. ಆಭರಣ, ವಸ್ತ್ರ, ಆನೆ, ಕುದುರೆ, ಒಂಟೆ ಮೊದಲಾದುವುಗಳೂ ಸಿಗುತ್ತವೆ. ಆದರೆ ವಚನ ಶಕ್ತಿ, ಶ್ರವಣಶಕ್ತಿ, ಕಲಿಯುವ ಶಕ್ತಿ, ಕಲಿಸುವ ಶಕ್ತಿ, ಹಿತಾಹಿತ ವಿಚಾರ ಇವೆಲ್ಲಾ ಮನುಷ್ಯಗತಿಯಲ್ಲಿಯೇ ದೊರೆಯುತ್ತವೆ. ಜೀವಾತ್ಮನೇ ! ನಾಲ್ಕೂ ಪ್ರಕಾರದ ಸಂಜ್ಞೆಗಳು ಎಲ್ಲಾ ಸಂಸಾರೀ ಪ್ರಾಣಿಗಳಿಗೆ ಇರುತ್ತವೆ.

ಆಹಾರನಿದ್ರಾಭಯ ಮೈಥುನಾನಿ
ಸಂಜ್ಞಾಶ್ಚತಸ್ರೋತ್ರ ವಸಂತಿ ದೇಹೇ ।
ಜ್ಞಾನಂ ನರಾಣಾಮಧಿಕೋ ವಿಶೇಷೋ
ಜ್ಞಾನೇನ ಹೀನಾಃ ಪಶುಭಿಃ ಸಮಾನಾಃ ॥

ಪ್ರಶ್ನೋತ್ತರಮಾಣಿಕ್ಯಮಾಲಾ.

ಆಹಾರ ನಿದ್ರೆ, ಭಯ ಮತ್ತು ಮೈಥುನ ಈ ನಾಲ್ಕು ಸಂಜ್ಞೆಗಳು ಎಲ್ಲಾ ಸಂಸಾರಿ ಪ್ರಾಣಿಗಳಿಗೂ ಇರುತ್ತವೆ. ಆದರೆ ಮನುಷ್ಯರಿಗೆ ಮಾತ್ರ ಜ್ಞಾನ ಹೆಚ್ಚಿಗೆ ಇರುತ್ತದೆ. ಹೆಚ್ಚಾದ ಜ್ಞಾನವನ್ನು ಪಡೆದೂ ಮನುಷ್ಯರು

ಆತ್ಮಕಲ್ಯಾಣವನ್ನು ಮಾಡಿಕೊಳ್ಳುವುದಿಲ್ಲವೋ ಅವರನ್ನು ಪಶುಗಳೆಂದು ತಿಳಿಯಬೇಕು ಭವ್ಯರೇ! ಎಲ್ಲಾ ಜನ್ಮದಲ್ಲಿಯೂ ಶ್ರೇಷ್ಠವಾದ ಮನುಷ್ಯ ಜನ್ಮವನ್ನು ಪಡೆದು ಉಪಕಾರ ಮಾಡುವ ಬುದ್ಧಿಯನ್ನಿಡಿರಿ. ಪರೋಪಕಾರ ಮಾಡಿರಿ. ಶಾಸ್ತ್ರೋಪದೇಶದಿಂದ ವಿಪರೀತವಾಗಿ ನಡೆಯುವವರಿಗೆ ಸನ್ಮಾರ್ಗದ ಬೋಧನೆಯನ್ನು ಕೊಟ್ಟು ಸುಧಾರಿಸಿರಿ.

ಶಾಸ್ತ್ರಾಭ್ಯಾಸೋ ಜಿನಪತಿನುತಿಃ ಸಂಗತಿಃ ಸರ್ವದಾರ್ಯೈಃ।
ಸದ್ವೃತ್ತಾನಾಂ ಗುಣಗಣಕಥಾ ದೋಷವಾದೇ ಚ ಮೌನಂ॥
ದಶಭಕ್ತಿ.

ಯಾವಾಗಲೂ ಕೋಮಲ, ಸತ್ಯ, ಲೋಕಪ್ರಿಯ, ಸರಳ, ಮತ್ತು ನಿಷ್ಕಪಟವಾದ ವಚನವನ್ನು ಮಾತಾಡುವುದರಿಂದ ಪುಣ್ಯಬಂಧವಾಗುತ್ತದೆ. ಯಾವಾಗಲೂ ಸಜ್ಜನರ ಸಂಗತಿಯನ್ನು ಮಾಡಿರಿ. ಗುಣಿ ಜನರ ಮತ್ತು ವ್ರತಿಕರರ ಸಮಾಗಮದಲ್ಲಿ ಯಾವಾಗಲೂ ಇರಬೇಕು. ಗುಣವಂತರ ಕಥೆಗಳನ್ನು ಓದಿರಿ ಮತ್ತು ಕೇಳಿರಿ. ಸಮ್ಯಕ್‌ಚಾರಿತ್ರವನ್ನು ಪಾಲಿಸಿರಿ. ದೋಷಯುಕ್ತವಾದ ವಚನವನ್ನು ಮಾತಾಡಬೇಡಿರಿ. ಬೇರೆಯವರ ನಿಂದೆಯನ್ನು ಮಾಡಬೇಡಿರಿ. ಆ ವಿಷಯದಲ್ಲಿ ಮೌನ ಧಾರಣೆ ಮಾಡಿರಿ. ತನ್ನ ವಚನದಿಂದ ಯಾರಿಗೂ ನೋವಾಗದಂತೆ ವರ್ತಿಸಿರಿ. ಯಾವಾಗಲೂ ತತ್ವಚಿಂತನೆಯನ್ನು ಮಾಡಿರಿ.

ವಚನದಿಂದಲಿ ಪುಣ್ಯ ವಚನದಿಂದಲಿ ಪಾಪ
ವಚನದಿಂದಲಿ ಸ್ವರ್ಗಮೋಕ್ಷಾ-॥

ವಚನದಿಂದ ಪುಣ್ಯವು ಪ್ರಾಪ್ತವಾಗುತ್ತದೆ. ವಚನದಿಂದ ಪಾಪವೂ ಮತ್ತು ವಚನದಿಂದಲೇ ಸ್ವರ್ಗಮೋಕ್ಷಗಳೂ ಪ್ರಾಪ್ತವಾಗುತ್ತವೆ. ಹೀಗೆ ವ್ಯವಹಾರದಲ್ಲಿ ಹೇಳಲಾಗುತ್ತದೆ. ಆದುದರಿಂದ ಸತ್ಯ ಮಾತಾಡುವುದರಿಂದ ಸತ್ಯಾತ್ಮನೆಂದು ಲೋಕದಲ್ಲಿ ಕೀರ್ತಿಯಾಗುತ್ತದೆ. ನೀಚನಾದಾಗ್ಯೂ ಸತ್ಯದಿಂದ ಉಚ್ಚನಾಗುತ್ತಾನೆ. ಈ ವಿಷಯದಲ್ಲಿ ಒಂದು ಘಟನೆ ಇದೆ.

ಒಂದು ಕಾಡಿನಲ್ಲಿ ಒಬ್ಬ ಸಾಧುಗಳು ಧರ್ಮೋಪದೇಶವನ್ನು ಮಾಡುತ್ತಿದ್ದರು. ಅದೇ ಹಾದಿಯಲ್ಲಿ ಒಬ್ಬ ಬೇಡದಂಪತಿಗಳು ಹೋಗುತ್ತಿದ್ದು ಆ ಉಪದೇಶವನ್ನು ಕೇಳಿ ಅಲ್ಲಿ ಬಂದರು. ಆ ಜೀವರಿಗೆ ಕಾಲಲಬ್ಧಿಯು ಪ್ರಾಪ್ತವಾದ್ದರಿಂದ ಆ ಉಪದೇಶವನ್ನು ಕೇಳಲಿಕ್ಕೆ ಅಲ್ಲಿ ಕುಳಿತರು. ಮುನಿಗಳ ಉಪದೇಶವನ್ನು ಕೇಳಿ ಅವರಿಗೆ ಆನಂದವಾಯಿತು. ಅವರು ಮುನಿಗಳ ಎದುರಿನಲ್ಲಿ ಬಂದು 'ಗುರುದೇವ! ನಮಗೆ ಯಾವುದಾದರೊಂದು ಸರಳವಾದ ವ್ರತವನ್ನು ಕೊಡಿರಿ! ಎಂದು ಪ್ರಾರ್ಥಿಸಿದರು. ಅದನ್ನು ಕೇಳಿ ಮುನಿಗಳು 'ಭವ್ಯರೇ! ನೀವು ಮಿಥ್ಯಾತ್ವವನ್ನು ಬಿಡಿರಿ. ಮಿಥ್ಯಾತ್ವಕ್ಕೆ ಸಮಾನವಾದ ಸಂಸಾರದಲ್ಲಿ ಪರಿಭ್ರಮಣೆ ಮಾಡಿಸುವ ಶತ್ರು ಬೇರೆ ಇಲ್ಲ.

**ನ ಮಿಥ್ಯಾತ್ವ ಸಮಃ ಶತ್ರುರ್ನ ಮಿಥ್ಯಾತ್ವಸಮಂ ವಿಷಂ।**
**ನ ಮಿಥ್ಯಾತ್ವಸಮೋ ರೋಗೋ ನ ಮಿಥ್ಯಾತ್ವಸಮಂ ತಮಃ॥**

ಧರ್ಮನೀತಿಸಾರ ಚಿಂತಾಮಣಿ.

ಅಂದರೆ ಮಿಥ್ಯಾತ್ವಕ್ಕೆ ಸಮಾನವಾದ ಶತ್ರು, ವಿಷ, ರೋಗ ಮತ್ತು ಅಂಧಕಾರ ಬೇರೆ ಇಲ್ಲ. ಇದನ್ನು ಕೇಳಿ ಆ ಭಿಲ್ಲ ದಂಪತಿಗಳು ಹೇಳಿದರು. 'ಸ್ವಾಮಿನ್! ಮಿಥ್ಯಾತ್ವವೆಂದರೇನು? ನಮಗೆ ತಿಳಿಸಿ ಹೇಳೋಣವಾಗಲಿ.' ಆಗ ಗುರುಗಳು ಹೇಳುತ್ತಾರೆ.

ಅನಾದಿಕಾಲದಿಂದ ಈ ಜೀವನು ಗೃಹೀತ ಮಿಥ್ಯಾತ್ವದ ಉದಯದಿಂದ ಇಂದ್ರಿಯ ಲಂಪಟದಿಂದ, ಅದೇ ಸುಖವನ್ನು ನಿಜವಾದ ಸುಖವೆಂದು ತಿಳಿದು ೮೪ ಲಕ್ಷ ಯೋನಿಗಳಲ್ಲಿ ತಿರುಗುತ್ತಿದ್ದಾನೆ, ಈ ಮಿಥ್ಯಾತ್ವ ಕರ್ಮದ ಉದಯವು ನಿಮ್ಮನ್ನು ವಂಚಿಸುತ್ತದೆ. ಕುಗುರು, ಕುದೇವ, ಮತ್ತು ಕುಶಾಸ್ತ್ರಗಳ ಮೇಲೆ ಶ್ರದ್ಧೆಯನ್ನಿಡುವುದಕ್ಕೆ ಮಿಥ್ಯಾತ್ವವೆಂದು ಹೆಸರು.

ಈ ಉಪದೇಶವನ್ನು ಕೇಳಿ ಆ ದಂಪತಿಗಳು 'ನಮಗೆ ವ್ರತವನ್ನು ಕೊಡಿರಿ" ಎಂದರು. ಆ ಸಮಯದಲ್ಲಿ ಮುನಿಗಳು ಅವಧಿಜ್ಞಾನದಿಂದ

ಅವರನ್ನು ಭವ್ಯಮಿಥ್ಯಾದೃಷ್ಟಿಗಳೆಂದು ತಿಳಿದು ಪಂಚ ಪಾಪಗಳನ್ನು ತ್ಯಾಗ ಮಾಡಲಿಕ್ಕೆ ಹೇಳಿದರು. ಆಗ ಅವರು ಹೇಳುತ್ತಾರೆ. ' ಗುರುದೇವ ! ನಾವು ಮಹಾ ಪಾಪಿಗಳು. ಪ್ರತಿನಿತ್ಯ ಪಾಪ ಮಾಡಬೇಕಾಗುತ್ತದೆ, ಈ ಪಂಚ ಪಾಪಗಳಲ್ಲಿ ಸುಲಭವಾಗಿ ಬಿಡಲು ಸಾಧ್ಯವಾದ ಒಂದು ವ್ರತವನ್ನು ಕೊಡಿರಿ.

ಹಾಗಾದರೆ ಹಿಂಸೆಯನ್ನು ಬಿಡಿರಿ. ಎಂದರು ಗುರುಗಳು. ಇದು ನಮ್ಮಿಂದ ಸಾಧ್ಯವಿಲ್ಲ ಎಂದು ಉತ್ತರ ಬಂತು.

ಹಾಗಾದರೆ " ಸತ್ಯ ಧರ್ಮವನ್ನು ಪಾಲಿಸಿರಿ " ಎಂದರು ಗುರುಗಳು. ಅದು ಮಾತ್ರ ನಮ್ಮಿಂದ ಸಾಧ್ಯವಿದೆ ಎಂದು ಒಪ್ಪಿದರು. ಆ ಭಿಲ್ಲ ದಂಪತಿಗಳು, ಹಾಗೆಯೇ ನಾವು ಎಂಥಹ ಪಾಪವನ್ನು ಮಾಡಿದರೂ ಸತ್ಯಧರ್ಮವನ್ನು ಬಿಡಲಾರೆವು ಎಂಬ ಪ್ರತಿಜ್ಞೆಯನ್ನು ಮಾಡಿದರು ಮತ್ತು ಆ ವ್ರತವನ್ನು ಬಹಳ ಭಯಭಕ್ತಿಗಳಿಂದ ಪಾಲಿಸತೊಡಗಿದರು.

ಮುಂದೆ ಒಂದು ದಿವಸ ರಾಜನ ಅರಮನೆಯಲ್ಲಿ ಕಳ್ಳತನ ಮಾಡಲು ಹೋಗುವ ಪ್ರಸಂಗ ಬಂತು. ರಾಜನು ಇನ್ನೂ ಮಲಗಲಿಲ್ಲ ಕಳ್ಳನ ರೂಪವನ್ನೇ ಮಾಡಿಕೊಂಡು ಹೊರಗೆ ಬಂದು ಆ ಕಳ್ಳನಿಗೆ ಕೇಳಹತ್ತಿದನು. ಭದ್ರ ! ನೀನು ಯಾರು ? ಅವನು ಉತ್ತರಿಸಿದನು. " ನಾನು ಕಳ್ಳ, ನೀವು ಯಾರು ? '

ರಾಜನಿಗೆ ಆಶ್ಚರ್ಯವಾಯಿತು ಇವನ ಪರೀಕ್ಷೆಯನ್ನು ಮಾಡಬೇಕೆಂದು " ನಾನೂ ಕಳ್ಳ. ನನ್ನನ್ನೂ ನೀವು ಪಾಲುಗಾರನನ್ನಾಗಿ ಮಾಡಿರಿ. " ಎಂದನು.

ಅದನ್ನು ಅವರು ಒಪ್ಪಿ ತನ್ನ ಕಾರ್ಯವನ್ನು ಮುಂದರಿಸಿದರು. ಆ ಕಳ್ಳ ದಂಪತಿಗಳು ಕೆಳಗಿಳಿದು ರಾಜನ ಭಂಡಾರವೆಲ್ಲಿದೆ ಎಂದು ಶೋಧಿಸತೊಡಗಿದರು. ರಾಜನಿಗೆ ಗೊತ್ತಿತ್ತು. ಅವನು ಬಗ್ಗಿ ಕೂತು ಕೊಂಡನು. ಅವನ ಮೇಲೆ ನಿಂತುಕೊಂಡು ರಾಜನು ಹೇಳಿದ ಕಂಭದ ಮೇಲಿದ್ದ

ಕೋಟ್ಯಾಂತರ ಮೌಲ್ಯದ ಮೂರು ರತ್ನಗಳನ್ನು ಆ ಕಳ್ಳನು ತೆಗೆದುಕೊಂಡನು ಆಗ ರಾಜನು [ ಕಳ್ಳ ವೇಷದ ] ಹೇಳಿದನು. ನಾವು ಮೂರೂ ಮಂದಿ ಒಂದೊಂದು ರತ್ನವನ್ನು ತೆಗೆದು ಕೊಳ್ಳೋಣವೆಂದು. ಆಗ ಆ ಬೇಡ ದಂಪತಿಗಳು, ಬೇಡ. ನಾವು ಒಂದು ತೆಗೆದುಕೊಳ್ಳುತ್ತೇವೆ. ನೀನು ಒಂದು ತೆಗೆದುಕೋ, ಒಂದು ರಾಜನಿಗೆ ಇರಲಿ- ಎಂದು ಇಟ್ಟು ಮನೆಗೆ ಹೋದರು.

ಎರಡನೆಯ ದಿನ ಮಂತ್ರಿಯನ್ನು ಕರೆದು ಅರಮನೆಯಲ್ಲಿ ಏನು ಕಳ್ಳತನ ಆಗಿದೆ, ಅದರ ವಿಚಾರಣೆಯನ್ನು ಮಾಡಬೇಕೆಂದು ಹೇಳಿದನು, ಆಗ ಮಂತ್ರಿಯು ಇದರ ವಿಚಾರಕ್ಕೆ ತೊಡಗಿದನು.. ಆಗ ಅಲ್ಲಿ ಕಂಭದ ಮೇಲಿಟ್ಟದ್ದ ಎರಡು ರತ್ನಗಳು ಹೋಗಿವೆ ಎಂದು ಗೊತ್ತಾಯಿತು. ಅವನು ವಿಚಾರ ಮಾಡುತ್ತಿದ್ದನೆ ಕಳ್ಳನು ಕಳ್ಳತನ ಮಾಡಿ ಒಂದು ಇಟ್ಟು ಹೋಗಲು ಕಾರಣವಿಲ್ಲ ಮೂರೂ ರತ್ನಗಳ ಕಳ್ಳತನ ಆಗಿದೆ ಎಂದು ರಾಜನಿಗೆ ಹೇಳಬಹುದು ಎಂಬ ವಿಚಾರದಿಂದ ಆ ಒಂದು ರತ್ನವನ್ನು ತನ್ನ ಜೇಬಿಗೆ ಹಾಕಿದನು. ಮತ್ತು ರಾಜನಿಗೆ ಮೂರೂ ರತ್ನಗಳು ಕಳ್ಳತನವಾಗಿವೆ ಎಂದು ಹೇಳಿದನು. ಹಾಗಾದರೆ ಕಳ್ಳನನ್ನು ಹಿಡಿದು ತರಿಸುವ ವ್ಯವಸ್ಥೆ ಮಾಡಬೇಕೆಂದನು, ರಾಜನು.

ರಾಜನ್ ! ನಮ್ಮ ನಗರದಲ್ಲಿ ಆ ಯಮನೆಂಬ ಭಿಲ್ಲನು ಯಾವಾಗಲೂ ಕಳ್ಳತನ ಮಾಡುತ್ತಿರುತ್ತಾನೆ. ಇದು ಅವನ ಕೆಲಸವೇ ಇರಬಹುದು ಎಂದನು. ಹಾಗಾದರೆ ಅವನನ್ನು ಹಿಡಿಸಿಕೊಂಡು ಬರಬೇಕೆಂದು ರಾಜಾಜ್ಞೆಯಾಯಿತು. ರಾಜನ ಸಿಪಾಹಿಗಳು ಅವನ ಮನೆಗೆ ಹೋದರು. ಭಿಲ್ಲ ನಿರಲಿಲ್ಲ- ಹೆಂಡತಿಯು ಹೇಳಿದಳು ' ನನ್ನ ಪತಿಯು ಮನೆಯಲ್ಲಿಲ್ಲ. ಅವನು ಬಂದ ಕೂಡಲೇ ನಿಮ್ಮ ಒಂದು ರತ್ನವನ್ನು ಕಳುಹಿಸಿಕೊಡುತ್ತೇನೆಂದಳು. ಇಷ್ಟರಲ್ಲಿ ಆ ಯಮನು ಹೊರಗಿನಿಂದ ಬಂದನು. ಮತ್ತು ಆ ರತ್ನವನ್ನು ಹಿಡಿದುಕೊಂಡು ರಾಜನ ಕಡೆಗೆ ಹೋದನು. ರಾಜನ ಚರಣಗಳಲ್ಲಿ ರತ್ನವ

ನ್ನಿಟ್ಟು ಸ್ವಾಮಿನ್ ! ತಮ್ಮ ಅರಮನೆಯಲ್ಲಿ ಕಳ್ಳತನ ಮಾಡಿ ಈ ರತ್ನ ವನ್ನು ತೆಗೆದುಕೊಂಡು ಹೋಗಿದ್ದೆನು. ಅದನ್ನು ತೆಗೆದುಕೊಳ್ಳೋಣವಾಗಲಿ. ನನ್ನನ್ನು ಕ್ಷಮಿಸೋಣಾಗಲಿ. ಎಂದು ಹೇಳಿದನು. ರಾಜನು ಒಳಗಿದೊಳಗೆ ನಕ್ಕು " ನೀನು ಒಂದೇ ರತ್ನವನ್ನು ತೆಗೆದುಕೊಂಡು ಹೋಗಿದ್ದಿಯಾ? ಮೂರು ರತ್ನಗಳೂ ಬೇಕು. ಅವುಗಳನ್ನು ಇಡು " ಎಂದನು. ಆಗ ಆ ಕಳ್ಳನು ' ಇಲ್ಲ ರಾಜನ್ ! ನಾನು ಒಂದೇ ರತ್ನವನ್ನು ತೆಗೆದುಕೊಂಡಿದ್ದೇನೆ ಇನ್ನೊಂದು ರತ್ನ ಮತ್ತೊಬ್ಬ ಕಳ್ಳನಿಗೆ ಕೊಟ್ಟಿದ್ದೇನೆ. ಮೂರನೆಯ ರತ್ನವನ್ನು ತಮಗೋಸ್ಕರ ಇಟ್ಟು ಹೋಗಿದ್ದೇನೆ. ಎಂದನು.

ಆಗ ಮಂತ್ರಿಗೆ ರಾಜನು ಹೇಳಿದನು. ಮಂತ್ರೀ, ಮೂರನೆಯ ರತ್ನ ವೇನಾಯ್ತು ? ಮಂತ್ರಿಯು ತತ್ಕಾಲ ಉತ್ತರಿಸಿದನು. ರಾಜನ್, ಮೂರನೆಯ ರತ್ನವನ್ನು ಈ ಕಳ್ಳನೇ ತೆಗೆದುಕೊಂಡು ಹೋಗಿರಬಹುದು. ಕಳ್ಳರು ಸ್ವಲ್ಪ ಇಟ್ಟು ಸ್ವಲ್ಪ ತೆಗೆದುಕೊಂಡು ಹೋಗುವುದಿಲ್ಲ. ಆದುದರಿಂದ ಇವನಿಗೆ ಸ್ವಲ್ಪ ಬಡಿಗೆ ತೋರಿಸಿದರೆ ಈಗ ಎಲ್ಲಾ ವಿಷಯ ಹೊರಗೆ ಬರುತ್ತದೆ ಎಂದು ಹೇಳಿದನು. ರಾಜನು ಆ ಭಿಲ್ಲನಿಗೆ ನೀನು ತೆಗೆದುಕೊಂಡಿದ್ದರೆ ಸತ್ಯ ಹೇಳು, ಎಂದನು.

ಇದನ್ನು ಕೇಳಿ ಆ ಯಮನು ಹೇಳುತ್ತಾನೆ. ' ರಾಜನ್ ! ನಾವು ಜೈನ ಸಾಧುಗಳ ಹತ್ತಿರ ಸತ್ಯ ಧರ್ಮದ ವ್ರತವನ್ನು ತೆಗೆದುಕೊಂಡಿದ್ದೇವೆ. ಆದುದರಿಂದ ಕಳ್ಳತನ ಮಾಡಿದರೂ ನಾವು ಸುಳ್ಳು ಹೇಳುವುದಿಲ್ಲವೆಂದನು.

ರಾಜನಿಗೆ ಎಲ್ಲಾ ಸ್ಥಿತಿಯು ಗೊತ್ತಿತ್ತು. ರಾತ್ರಿಯಲ್ಲಿ ಅವನು ಹಾಕಿಕೊಂಡಿದ್ದ ಅಂಗಿ ಇತ್ತು, ಆ ಅಂಗಿಯ ಮೇಲೆ ಆ ಕಳ್ಳನು ಕಾಲು ಇಟ್ಟು ನಿಂತಿದ್ದ ಕಾಲಿನ ಚಿನ್ಹೆಗಳು ಕಾಣುತ್ತಿದ್ದವು. ಅದನ್ನು ರಾಜಸಭೆಯಲ್ಲಿ ಇಟ್ಟು ರಾಜನು ಹೇಳಿದನು.

ನೋಡಿರಿ. ಇವನು ಭಿಲ್ಲನಾಗಿದ್ದರೂ ಸತ್ಯವನ್ನು ಮಾತಾಡಿದನು. ನಾನು ರಾಜನಾದಾಗ್ಯೂ ಸುಳ್ಳು ಮಾತಾಡಿದೆನು. ಇವನ ಬೆನ್ನಿನ ಮೇಲೆ

ನಿಲ್ಲಲು. ನನಗೆ ಯೋಗ್ಯತೆ ಇಲ್ಲದಿರುವುದರಿಂದ ಇವನೇ ನನ್ನ ಬೆನ್ನಿನಮೇಲೆ ನಿಂತು ಕೊಂಡನು ಮತ್ತು ಆ ರತ್ನಗಳನ್ನು ತೆಗೆದುಕೊಂಡನು. ನಾನು ಒಂದು ರತ್ನವನ್ನು ತೆಗೆದುಕೊಂಡೆನು. ಮತ್ತು ಒಂದು ರತ್ನವು ಅಲ್ಲಿಯೇ ಇಡಲಾಯ್ತು. ಇದಕ್ಕೆ ಸಾಕ್ಷಿ ಎಂದರೆ ನನ್ನ ಅಂಗಿಯ ಮೇಲೆ ಎದ್ದಿರುವ ಅವನ ಪಾದ ಚಿನ್ಹೆಗಳು. ಮತ್ತು ನಿನ್ನೆ ರಾತ್ರೆ ಪ್ರತ್ಯಕ್ಷ ನನ್ನ ಎದುರಿನಲ್ಲಿ ಆದ ಈ ಮಾತಿದೆ ಎಂದು ಕೇಳಲು ಮಂತ್ರಿಯು ಗಾಬರಿಯಾದನು. ರಾಜನು ಅವನಿಗೆ ಇನ್ನಾದರೂ ಸತ್ಯವನ್ನು ಹೇಳೆಂದನು. ಆಗ ಮಂತ್ರಿಯು ಹೇಳುತ್ತಾನೆ. 'ನಾನು ರತ್ನವನ್ನು ತೆಗೆದುಕೊಳ್ಳಲಿಲ್ಲವೆಂದು' ಆಗ ರಾಜನು ಕೋಪದಿಂದ ಗರ್ಜಿಸಿ ಹೇಳುತ್ತಿದ್ದಾನೆ. 'ನೀನು ಇಲ್ಲಿಂದ ಈಗಲೇ ಹೊರಟು ಹೋಗಬೇಕು, ನಿನ್ನ ಮಂತ್ರಿಪತ್ರದ ಮುದ್ರಿಕೆ ಮತ್ತು ಉಡಿಗೆ ತೊಡಿಗೆಗಳನ್ನು ಈ ಸತ್ಯವಾದಿಯಾದ ಭಿಲ್ಲನಿಗೆ ಕೊಡು. ಮತ್ತು ನೀನು ಆ ಭಿಲ್ಲನ ವಸ್ತ್ರಗಳನ್ನು ಧರಿಸು. ನಿನ್ನ ಮನೆಯ ಸಂಪತ್ತನ್ನು ಆ ಭಿಲ್ಲನಿಗೆ ಕೊಡು ಮತ್ತು ಆ ಭಿಲ್ಲನ ಮನೆಯಲ್ಲಿ ನೀನು ಹೋಗಿರು. ಅವನು ಜಾತಿಯಿಂದ ಭಿಲ್ಲನಾಗಿದ್ದರೂ ಸತ್ಯ ಧರ್ಮವಾದ ಜೈನಧರ್ಮ ವನ್ನು ಅಂಗೀಕರಿಸಿದ್ದಾನೆ. ನೀನು ರಾಜಮಂತ್ರಿಯಾಗಿದ್ದರೂ ಅಸತ್ಯ ಮಾತಾಡುತ್ತಿದ್ದೀಯೆ. ಆದುದರಿಂದ ರಾಜನೀತಿಯು ಉಳಿಯಲಾರದು. ಮನುಷ್ಯನಿಗೆ ಮೊದಲು ನೀತಿ ಬೇಕು.

**ಆಚಾರಃ ಪ್ರಥಮೋ ಧರ್ಮಃ ನೃಣಾಂ ಶ್ರೇಯಸ್ಕರೋಮಹಾನ್**
**ಇಹಲೋಕೇ ಪರಾ ಕೀರ್ತಿಃ ಪರತ್ರೇ ಪರಮಂ ಸುಖಂ ||**

ಸುಭಾಷಿತ.

ಸದಾಚಾರದಿಂದ ವರ್ತಿಸುವುದು ಎಲ್ಲದರಿಂದಲೂ ಮೊದಲಿನ ಕರ್ತವ್ಯ ಕರ್ಮವಾಗಿದೆ. ಸದಾಚಾರದಿಂದ ಮನುಷ್ಯನಿಗೆ ದೊಡ್ಡ ಸುಖದ ಪ್ರಾಪ್ತಿಯಾಗುತ್ತದೆ. ಸದಾಚಾರಿಗಳ ಕೀರ್ತಿಯು ಇಹಲೋಕದಲ್ಲಿ ಹೆಚ್ಚು

ತ್ತದೆ. ಪರಲೋಕವಲ್ಲಿಯೂ ಸ್ವರ್ಗಾದಿ ಗತಿಗಳಲ್ಲಿ ಸುಖವು ದೊರೆಯು ತ್ತದೆ. ಆ ಮಂತ್ರಿಯು ಅಸತ್ಯವನ್ನು ಹೇಳಿದನು. ನೀತಿ ಸದಾಚಾರವನ್ನು ಬಿಟ್ಟನು. ಅವನಿಗೆ ಭಿಲ್ಲನಂತಾಗಬೇಕಾಯ್ತು. ಜಾತಿಯಿಂದ ಭಿಲ್ಲನಾದಾಗ್ಯೂ ಸತ್ಯಧರ್ಮದ ಪ್ರಭಾವದಿಂದ ಅವನು ರಾಜಮಂತ್ರಿಯಾದನು.

ಆದುದರಿಂದ ಭವ್ಯರೇ ! ನೀವು ವಿಚಾರ ಮಾಡಿ ಮನಸ್ಸಿನ ದುಷ್ಟ ಪರಿಣತಿ ಮತ್ತು ಪಾಪವಾಸನೆಯನ್ನು ಬಿಡಿರಿ. ಒಂದೇ ಸತ್ಯಾಣುವ್ರತವನ್ನು ಧಾರಣೆ ಮಾಡಿ ಆ ಭಿಲ್ಲನು ಜಗತ್ಪ್ರಸಿದ್ಧನಾದನು. ನಿಮ್ಮ ಶಕ್ತಿಗೆ ಅನುಸಾರವಾಗಿ ಪಾಪಗಳನ್ನು ಬಿಡಿರಿ. ಮತ್ತು ಪರಂಪರೆಯಿಂದ ಕಲ್ಯಾಣವನ್ನು ಮಾಡುವ ಸತ್ಯಧರ್ಮವನ್ನು ಹೃದಯದಲ್ಲಿಡಿರಿ. ಇದು ಆಚಾರ್ಯರ ವಚನವಾಗಿದೆ. ಭವ್ಯಾತ್ಮರೇ ! ಮನುಷ್ಯ ಜನ್ಮದಲ್ಲಿಯೇ ಪ್ರವೃತ್ತಿಮಾರ್ಗ ಮತ್ತು ನಿವೃತ್ತಿ ಮಾರ್ಗಗಳು ಪರಿಪಾಲಿಸಲಾಗುತ್ತದೆ. ಆದುದರಿಂದ ಪ್ರಾಣಹೋದರೂ ವಚನವನ್ನು ಹಾಳುಮಾಡಬೇಡಿರಿ. ಶಾಸ್ತ್ರದಲ್ಲಿ ಹೇಳಿದ ನಾಲ್ಕು ಪ್ರಕಾರದ ಅಸತ್ಯ ವಚನವನ್ನು ಬಿಡಿರಿ. ವಿದ್ಯಮಾನ ಪದಾರ್ಥದ ನಿಷೇಧವನ್ನು ಮಾಡುವದು ಇದು ಮೊದಲಿನ ಅಸತ್ಯ. ದೇವ, ನಾರಕೀ, ಭೋಗಭೂಮಿಯ ಮನುಷ್ಯ ಮತ್ತು ತಿರ್ಯಂಚ ಈ ಜೀವಗಳ ಆಯುಷ್ಯ ಪೂರ್ಣವಾದ ನಂತರವೇ ಮರಣವಾಗುತ್ತದೆ. ಮಧ್ಯದಲ್ಲಿ ಅವರ ಆಯುಷ್ಯವು ಭಿನ್ನವಾಗುವುದಿಲ್ಲ. ಎಷ್ಟು ಸ್ಥಿತಿಯು ಬಂಧವಾಗಿದೆಯೋ ಅಷ್ಟು ಸ್ಥಿತಿಯನ್ನು ಭೋಗಿಸಿಯೇ ತೀರಿಸಬೇಕು. ಆದರೆ ಮನುಷ್ಯ ಮತ್ತು ತಿರ್ಯಂಚ ಪ್ರಾಣಿಗಳ ಸ್ಥಿತಿ ಮಾತ್ರ ಹೀಗಿಲ್ಲ. ಅವರಿಗೆ ವಿಷ ಭಕ್ಷಣ, ತಾಡನ, ಛೇದನ, ಬಂಧನಾದಿಕ ವೇದನೆಯಿಂದ ಮತ್ತು ರೋಗದ ತೀವ್ರ ವೇದನೆಯಿಂದ, ರಕ್ತನಾಶದಿಂದ ದುಷ್ಟ ಮನುಷ್ಯ, ತಿರ್ಯಂಚ ಮತ್ತು ದೇವ ರಾಕ್ಷಸರಿಂದ ಆದ ಪೀಡೆಯಿಂದ ಆಯುಷ್ಯದ ಮಧ್ಯದಲ್ಲಿಯೂ ಛೇದವಾಗುತ್ತದೆ, ಆಯುಃಕರ್ಮವನ್ನು ನಾಶ ಮಾಡುವ ಬಾಹ್ಯ ಕಾರಣ

ಗಳು ಸಿಕ್ಕಿದರೆ ಆಯುಷ್ಯದ ಘಾತವಾಗುತ್ತದೆ. ಇದು ಸಿದ್ಧವಾಗಿದೆ. ಅಸಿದ್ಧ ವಿಲ್ಲ. ನೀವು ಈ ಪ್ರಕಾರದ ನಾಲ್ಕು ಪ್ರಕಾರದ ಅಸತ್ಯವನ್ನು ಬಿಡಿರಿ. ಲೋಕದಲ್ಲಿ ನಿಂದೆಗೆ ಕಾರಣವಾದ ಅಪಮಾನಕ್ಕೆ ಕಾರಣವಾದ ಗರ್ಹಿತ ವಚನವೆಂಬ ಅಸತ್ಯವನ್ನು ಬಿಡಿರಿ. ಆ ಪ್ರಕಾರದ ವಚನಗಳನ್ನು ಮಾತಾ ಡುವುದರಿಂದ ಜನರು ವೈರಿಗಳಾಗುತ್ತಾರೆ. ಮತ್ತು ತಮಗೂ ಶಾಸ್ತ್ರವಿರು ದ್ಧವಾದ ವಚನವನ್ನು ಮಾತಾಡುವ ದೋಷವು ಬರುತ್ತದೆ. ಶಾಸ್ತ್ರವನ್ನು ತಿಳಿದವರು ಯಾವ ಕಾರ್ಯವನ್ನೂ ವಿಚಾರ ಪೂರ್ವಕ ಮಾಡಬೇಕು.

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥

[ಸುಭಾಷಿತ.

ಶ್ರೇಷ್ಟ ಮನುಷ್ಯರು ಯಾವ ಪ್ರಕಾರವಾಗಿ ವರ್ತಿಸುತ್ತಾರೆಯೋ ಆ ಪ್ರಕಾರವಾಗಿ ಸಾಮಾನ್ಯ ಜನರೂ ವರ್ತಿಸುತ್ತಾರೆ. ಶ್ರೇಷ್ಟ ಮನುಷ್ಯರು ನಿರ್ಣಯಿಸಿದಂತೆ ಬೇರೆಯವರು ವರ್ತಿಸುತ್ತಾರೆ. ಆದುದರಿಂದ ನೀತಿ ಮಾರ್ಗವನ್ನು ನಡೆಯಿಸುವ ಯೋಗ್ಯ ವಚನವನ್ನು ಮಾತಾಡಿರಿ. ಸಂಕಟ ಕಾಲದಲ್ಲಿಯೂ ಅಸತ್ಯ ವಚನವನ್ನು ಮಾತಾಡಬೇಡಿರಿ ಸಂಕಟದಲ್ಲಿಯೇ ಸಜ್ಜನರ ಪರೀಕ್ಷೆಯಾಗುತ್ತದೆ ನೋಡಿರಿ. ಇದಕ್ಕೋಸ್ಕರ ರಾಜಾ ಹರಿ ಶ್ಚಂದ್ರನ ಜೀವನ ಘಟನೆಯನ್ನು ತಿಳಿಯಿರಿ.

ಒಂದಾನೊಂದು ಸಮಯದಲ್ಲಿ ದೇವೇಂದ್ರನ ಸಭೆಯಲ್ಲಿ ಒಬ್ಬ ದೇವನು ಪ್ರಶ್ನೆ ಮಾಡಿದನು. ನರಲೋಕದಲ್ಲಿ ಈಗ ಸತ್ಯಧರ್ಮವನ್ನು ಪಾಲಿಸುವವರು ಯಾರಾದರೂ ಇದ್ದಾರೆಯೋ ಎಂದು. ಆಗ ದೇವೇಂದ್ರನು ರಾಜಾ ಹರಿಶ್ಚಂದ್ರನು ಸತ್ಯಧರ್ಮವನ್ನು ಪರಿಪಾಲಿಸುತ್ತಿದ್ದಾನೆಂದನು. ಇದನ್ನು ಕೇಳಿ ಆ ದೇವನು ರಾಜಾ ಹರಿಶ್ಚಂದ್ರನ ಪರೀಕ್ಷೆಯನ್ನು ಮಾಡು ವುದಕ್ಕೋಸ್ಕರ ಈ ನರಲೋಕಕ್ಕೆ ಬಂದು ಅವನು ನಿದ್ರೆಯಲ್ಲಿದ್ದಾಗ

ಅವನ ರಾಜ್ಯವನ್ನು ಬೇಡಿದನು. ರಾಜನು ಸ್ವಪ್ನದಲ್ಲಿಯೇ ಅವನಿಗೆ ರಾಜ್ಯ
ವನ್ನು ದಾನ ಮಾಡಿದನು. ಎರಡನೆಯ ದಿನ ಬೆಳಿಗ್ಗೆ ಸ್ವಪ್ನದ ಮಾತು
ಲಕ್ಷ್ಯದಲ್ಲಿಲ್ಲದಿದ್ದರಿಂದ ರಾಜನು ಬಂದು ಸಿಂಹಾಸನದ ಮೇಲೆ ಕುಳಿತು
ಕೊಂಡನು. ಆ ಸಮಯದಲ್ಲಿ ಆ ದೇವನು ಬಂದು ರಾಜನ್! ನೀವು
ಯಾರ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದೀರಿ. ರಾತ್ರಿಯಲ್ಲಿ ನನಗೆ
ರಾಜ್ಯದ ದಾನವನ್ನು ಮಾಡಿದ ಮೇಲೆ ಈ ಸಿಂಹಾಸನದ ಮೇಲೆ ನಿಮಗೆ
ಕುಳಿತುಕೊಳ್ಳುವ ಅಧಿಕಾರವೇನಿದೆ? ಎಂದನು, ಆಗ ರಾಜನು ನಮ್ರತೆ
ಯಿಂದ ಭದ್ರ! ಕ್ಷಮಿಸಬೇಕು. ನನಗೆ ನೆನಪು ಉಳಿಯಲಿಲ್ಲ. ಆದುದರಿಂದ
ತಪ್ಪಾಯಿತು. ಈ ನಿಮ್ಮ ರಾಜ್ಯವನ್ನು ನೀವು ತೆಗೆದುಕೊಳ್ಳಿರಿ, ಎಂದನು.
ರಾಜಾ ಹರಿಶ್ಚಂದ್ರನು ತನ್ನ ಮಗನಾದ ರೋಹಿತಾಶ್ವ ಮತ್ತು ತಾರಾಮತಿ
ಯನ್ನು ತೆಗೆದುಕೊಂಡು ಹೊರಟನು. ಆಗ ದೇವನು ರಾಜನೊಡನೆ
'ನನಗೆ ಎಲೆ ಅಡಿಕೆ ಕೊಡಲಿಲ್ಲವೆಂದನು. ಆಗ ರಾಜನು ಈಗ ನನ್ನ ಕಡೆ
ಏನೂ ಉಳಿಯಲಿಲ್ಲ, ಇವತ್ತು ಎಲ್ಲಿಯಾದರೂ ಹೋಗಿ ದೀನವೃತ್ತಿಯನ್ನು
ಮಾಡುವೆನು. ನಾಳೆ ಕೊಡುವೆನೆಂದನು. ಹೀಗೆ ಹೋಗಿ ಅವನು ಒಬ್ಬ
ಧನಿಕನ ಮನೆಯಲ್ಲಿ ನೀರು ತುಂಬುವ ಕೆಲಸವನ್ನು ಕೈಕೊಂಡನು. ಆದರೆ
ಆ ದೇವನು ಇಲ್ಲಿಯೂ ಬಂದು ಪರೀಕ್ಷೆ ಮಾಡ ತೊಡಗಿದನು. ನೀರು
ತುಂಬುವ ಕೊಡಕ್ಕೆ ತೂತುಗಳನ್ನು ಹಾಕಿದ್ದರಿಂದ ನೀರು ಬೇಗನೇ
ತುಂಬಲಾಗಲಿಲ್ಲ. ಆ ಯಜಮಾನನು ಅವನನ್ನು ಕೆಲಸದಿಂದ ತೆಗೆದು
ಹಾಕಿದನು. ಈಗ ನಾನು ನಿನ್ನೆ ಕೊಟ್ಟ ವಚನದಂತೆ ಅವನಿಗೆ ಎಲೆ ಅಡಿಕೆ
ಗಳನ್ನು ಹೇಗೆ ಕೊಡಲಿ ಎಂಬ ಚಿಂತೆಯಲ್ಲಿ ಬಿದ್ದನು. ಊರಿನಲ್ಲಿ ಯಾರೂ
ಕೆಲಸಕ್ಕೆ ಇಟ್ಟುಕೊಳ್ಳಲು ಸಿದ್ಧವಿಲ್ಲ. ಕರ್ಮದ ತೀವ್ರ ಉದಯವಾಗಲು
ಮಿತ್ರರೂ ಶತ್ರುಗಳಾಗುತ್ತಾರೆ. ಅನುಕೂಲ ವ್ಯಕ್ತಿಗಳೂ ಪ್ರತಿಕೂಲರಾಗು
ತ್ತಾರೆ. ಸರ್ವ ಪ್ರಜೆಗಳು ಇವನ ಸೇವಕರಾದಾಗ್ಯೂ ಕೂಡ ಇವನಿಗೆ
ನೌಕರಿಯನ್ನು ಕೊಡಲೂ ಸಿದ್ಧರಿಲ್ಲ. ಇಂಥಹ ಸ್ಥಿತಿಯಲ್ಲಿಯೂ ರೋಹಿ

ತಾಪ್ಯನಿಗೆ ಸರ್ಪ ಕಚ್ಚಿತು. ಅವನು ಗತ ಪ್ರಾಣನಾದನು. ಒಂದು ದುಃಖವು ಮುಗಿಯುವ ಮೊದಲೇ ಇನ್ನೊಂದು ದುಃಖವನ್ನು ಅನುಭವಿಸುವ ಪ್ರಸಂಗ ಬಂತು. ಆದುದರಿಂದಲೇ ಅಧ್ಯಾತ್ಮ ಶಾಸ್ತ್ರದಲ್ಲಿ ಹೇಳಿದ್ದಾರೆ.

ಜಲಸೇ ಗಲೇ ರವಿಸೇ ಗಲತಾ,
ಕಮಲ ಜಗಹ ಛುಟಜಾನೇಸೇ ।
ಮಿತ್ರ ಅರೀ ಹೋಜಾಯ ಜಗತಮೇ,
ಅಶುಭ ಕರ್ಮಕೇ ಆನೇಸೇ ।
ಜಿನ ಪಾಂಡವೋಂಕೆ ಹೇತ ಕೃಷ್ಣಜೀ,
ಜರಾಸಿಂಧುಪೇ ಚಢಿ ಆಯೇ ।
ದಿಯಾ ಉನ್ಹೋಂಕೋ ದೇಶ ನಿಕಾಲಾ,
ಜೀತ ದ್ವಾರಿಕಾ ಫಿರ ಲಾಯೇ ॥

ಅಧ್ಯಾತ್ಮಪದಸಂಗ್ರಹ.

ರಾಜಾ ಹರಿಶ್ಚಂದ್ರನು ಕರ್ಮದ ಉದಯದಿಂದ ಇಂಥಹ ಕಷ್ಟ ಬಂದರೂ ಸತ್ಯ ಧರ್ಮವನ್ನು ಬಿಡಲಿಲ್ಲ ಇವನ್ನು ನೋಡಿ ಆ ದೇವನಿಗೆ ಆಶ್ಚರ್ಯವಾಯ್ತು. ಮಹಾ ಪುರುಷರ ಲಕ್ಷಣವು ಇದೇ ಪ್ರಕಾರವಾಗಿರುತ್ತದೆ.

ಒಂದು ಕಡೆ ಸುಭಾಷಿತದಲ್ಲಿ ಹೀಗೆ ಹೇಳಿದ್ದಾರೆ.

ವಿಪತ್ತೌ ಕಿಂ ವಿಷಾದೇನ ಸಂಪತ್ತೌ ಹರ್ಷಣೇನ ಕಿಂ ।
ಭವಿತವ್ಯಂ ಭವತ್ಯೇವ ಕರ್ಮಣೋ ಗಹನಾ ಗತಿಃ ॥

ಸುಭಾಷಿತಾವಲಿ.

ಕರ್ಮದ ಗತಿಯು ಬಹಳ ವಿಚಿತ್ರವಾಗಿದೆ. ಯಾವುದು ಆಗುವ್ವದಿದೆಯೋ ಅದು ಆಗಿಯೇ ತೀರುತ್ತದೆ. ಅದರಲ್ಲಿ ಯಾವ ಸಂಶಯವೂ ಇಲ್ಲ.

ಸಂಕಟದ ಸಮಯದಲ್ಲಿ ದುಃಖವನ್ನು ಪಡದಿರುವುದು, ಸಂಪತ್ತಿಯ ಸಮಯದಲ್ಲಿ ಹರ್ಷ ಮಾಡದಿರುವುದು ಇದು ಮಹಾಪುರುಷರಿಗೆ ಭೂಷಣವಾಗಿರುತ್ತದೆ. ಈ ಕಠಿಣ ಪರಿಸ್ಥಿತಿಯಲ್ಲಿಯೂ ಹರಿಶ್ಚಂದ್ರನು ತನ್ನ ಧೈರ್ಯವನ್ನು ಬಿಡಲಿಲ್ಲ. ತನ್ನ ಸ್ವರೂಪದ ವಿಚಾರವನ್ನು ಮಾಡ ತೊಡಗಿದನು ಮಗನು ಮರಣ ಹೊಂದಿದರೂ ದುಃಖವನ್ನು ಮಾಡದೆ, ಜನ್ಮ ಮರಣವು ಈ ದೇಹಕ್ಕೆ ಅನಾದಿಕಾಲದಿಂದಲೂ ಇದ್ದೇ ಇದೆ. ಆದುದರಿಂದ ಈ ವಿಷಯದಲ್ಲಿ ಹರ್ಷ ವಿಷಾದವನ್ನು ಮಾಡುವ ಕಾರಣ ವಿಲ್ಲವೆಂದು ವಿಚಾರ ಮಾಡಿ ತನ್ನ ನಿಜರೂಪದಲ್ಲಿ ಸ್ಥಿರನಾಗಿದ್ದನು.

ಏಕಃ ಸ್ವಭಾವಸಿದ್ಧಃ ಸ ಆತ್ಮಾವಿಕಲ್ಪಪರಿಮುಕ್ತಃ ।
ಅನ್ಯೋ ನ ಮಮ ಶರಣಂ ಸ ಏಕ ಪರಮಾತ್ಮಾ ॥

ಕಲ್ಯಾಣ ಆಲೋಚನಾ.

ಚಿದಾನಂದ ಪರಮಾತ್ಮನು ಮಾತ್ರ ನನ್ನನ್ನು ರಕ್ಷಿಸುವನು. ಬೇರೆ ಯಾರೂ ರಕ್ಷಿಸಲು ಸಾಧ್ಯವಿಲ್ಲ, ಈ ಪ್ರಕಾರ ವಿಚಾರ ಮಾಡ ತೊಡಗಿದನು. ತಾರಾಮತಿಯು ರೋಹಿತಾಶ್ವನ ಪ್ರೇತವನ್ನು ತೊಡೆಯ ಮೇಲೆ ಇಟ್ಟು ಕೊಂಡು ಇದನ್ನು ಹೇಗೆ ದಹನ ಮಾಡಲೆಂದು ಚಿಂತಿಸುತ್ತಿದ್ದಳು. ಅವಳು ಒಮ್ಮೆ ಮೂರ್ಛಿತಳಾಗುತ್ತಾಳೆ. ಒಮ್ಮೆ ಅಳುತ್ತಾಳೆ. ಆದರೆ ಹರಿಶ್ಚಂದ್ರನು ಮಾತ್ರ ಏಕಾಗ್ರ ಮನಸ್ಸಿನಿಂದ ವಸ್ತು ಸ್ವರೂಪದ ವಿಚಾರವನ್ನು ಮಾಡು ತ್ತಿದ್ದನು. ರಾಜ್ಯ ಹೋಯಿತು, ವನವಾಸ ಬಂತು. ಭಂಗಾರದಂತಹ ಮಗನು ಮರಣ ಹೊಂದಿದನು. ಆದರೂ ಅವನು ಸತ್ಯಧರ್ಮವನ್ನು ಬಿಡಲಿಲ್ಲ, ಮೇರುವಿನಂತೆ ಅವಿಚಲನಾಗಿದ್ದನು. ಆ ಸಮಯದಲ್ಲಿ ಪೂರ್ಣ ಪರೀಕ್ಷೆ ಮಾಡಿ ಆ ದೇವನು ಬಂದು ನಮಸ್ಕರಿಸಿ ಹೇಳುತ್ತಾನೆ ರಾಜನ್ ! ಧನ್ಯನಾಗಿದ್ದೀ, ನಿನ್ನ ಸತ್ಯಧರ್ಮಕ್ಕೆ ಜಯವಾಗಲಿ. ನಿನ್ನ ಸತ್ಯಧರ್ಮದ ಪರೀಕ್ಷೆಗೋಸ್ಕರವಾಗಿ ನಾನು ಬಂದಿದ್ದೆ. ಎಂದು ಹೇಳಿ ಬಹಳ ಆದರದಿಂದ ಅವನ ರಾಜ್ಯವನ್ನು ಅವನಿಗೆ ಕೊಟ್ಟು ಪುನಃ ಸಿಂಹಾಸನದಲ್ಲಿ ಕುಳ್ಳಿರಿಸಿ

ಹೀಗೆಂದನು, ರಾಜನ್ ! ಇಂದಿನಿಂದ ನಾನು ನಿನ್ನ ಸೇವಕನಾಗಿದ್ದೇನೆ. ನನಗೆ ಬೇಕಾದ ಕಾರ್ಯಗಳನ್ನು ಹೇಳು ಎಂದನು. ದೇವನ ಮಾತನ್ನು ಕೇಳಿ ರಾಜನು ' ಭದ್ರ ! ನನಗೇನೂ ಬೇಕಾಗಿಲ್ಲ. ನಾನು ಯಾವಾಗಲಾದರೂ ಚಂಚಲ ಚಿತ್ತನಾಗಿ ಸತ್ಯಧರ್ಮದಿಂದ ವಿಚಲಿತ ನಾಗುವ ಪ್ರಸಂಗ ಬಂದರೆ ನನಗೆ ಉಪದೇಶವನ್ನು ಕೊಟ್ಟು ನನ್ನನ್ನು ಸ್ಥಿರ ಮಾಡು. ಎಂದನು. ಇದನ್ನು ಕೇಳಿ ದೇವನು ಆನಂದಿತನಾಗಿ ಸ್ವರ್ಗಕ್ಕೆ ಹೊರಟು ಹೋದನು.

ಆದುದರಿಂದ ಭವ್ಯರೇ ! ಕೇವಲ ಸತ್ಯಧರ್ಮವನ್ನು ಪರಿಪಾಲಿಸುವುದರಿಂದ ಹರಿಶ್ಚಂದ್ರನು ದೇವತೆಗಳಿಂದಲೂ ವಂದನೀಯನಾದನು. ಇದನ್ನು ವಿಚಾರ ಮಾಡಿ ನೀವೂ ಪಾಪವಾಸನೆಯನ್ನು ಬಿಡಿರಿ. ಇದು ಕೇವಲಿಗಳ ವಚನವಿದೆ. ಭವ್ಯಾತ್ಮರೇ ! ನೀವು ಕ್ಷಣಿಕ ಸುಖಕ್ಕಾಗಿ ಸತ್ಯ ಧರ್ಮವನ್ನು ಬಿಡಬೇಡಿರಿ. ಅಸತ್ಯ ಮಾತಾಡುವುದರಿಂದ ದುಃಖವನ್ನು ಅನುಭವಿಸಬೇಕಾಗುತ್ತದೆ. ಸುಖದುಃಖವನ್ನು ಮಾಡುವವನೂ, ಭೋಗಿಸುವನು ಈ ಆತ್ಮನೇ ಆಗಿದ್ದಾನೆ. ಕರ್ತಾ ಮತ್ತು ಭೋಕ್ತಾ ಬೇರೆ ಬೇರೆಯಾಗಿಲ್ಲ.

ಒಬ್ಬ ನಾಸ್ತಿಕ ನಾರಿಯು ಸಂಸಾರದಲ್ಲಿ ಧರ್ಮಕರ್ಮಗಳಿಲ್ಲ. ನಾವು ಯಥೇಚ್ಛವಾಗಿ ಇಂದ್ರಿಯ ಸುಖಗಳನ್ನು ಅನುಭವಿಸಿ ಅದರಲ್ಲಿ ಸಂತೋಷವನ್ನು ಪಡುವುದು ಇದೇ ಜಗತ್ತಿನಲ್ಲಿ ಸುಖವಾಗಿದೆ. ಹೀಗೆ ಹೇಳಿ ಅಸತ್ಯದಿಂದ, ಸ್ವೇಚ್ಛಾಚಾರವೃತ್ತಿಯಿಂದ ವರ್ತಿಸುತ್ತಿದ್ದಳು. ಅವಳಿಗೆ ಸಾಧುಸಂತರು ಉಪದೇಶವನ್ನು ಕೊಟ್ಟರು. ಆದರೂ ಕೇಳಲಿಲ್ಲ. ಮಿಥ್ಯಾತ್ವ ಕರ್ಮದ ತೀವ್ರ ಉದಯದಿಂದ ಸದಾ ರಾಗದ್ವೇಷಾದಿ ವಿಕಾರಗಳಲ್ಲಿ ಮಗ್ನಳಾಗಿದ್ದಳು. ಮಿಥ್ಯಾತ್ವವು ಸರ್ವ ಸದ್ಗುಣಗಳನ್ನು ನಾಶ ಮಾಡುತ್ತದೆ.

**ಸಂಯಮಾ ನಿಯಮಾಃ ಸರ್ವೇ ನಶ್ಯಂತೇ ತೇನ ಪಾವನಾಃ ।**
**ಕ್ಷಯಕಾಲಾನಲೇನೇವ ಪಾದಪಾಃ ಫಲಶಾಲಿನಃ ॥**

ಯಾವ ಪ್ರಕಾರವಾಗಿ ಪ್ರಲಯಕಾಲನ ಅಗ್ನಿಯು ಪುಷ್ಪಫಲಗಳಿಂದ ಶೋಭಿಸುತ್ತಿರುವ ವೃಕ್ಷಗಳನ್ನು ಸುಟ್ಟು ಭಸ್ಮ ಮಾಡುತ್ತದೆಯೋ ಅದೇ ಪ್ರಕಾರವಾಗಿ ಈ ಜೀವನ ಅನೇಕ ಸದ್ಗುಣಗಳನ್ನು ಈ ಮಿಥ್ಯಾತ್ವವು ನಾಶ ಮಾಡಲು ಅಗ್ನಿಯು ಹಾಗಿದೆ. ಅವಳಿಗೆ ಒಬ್ಬ ಸಮ್ಯಗ್‌ದೃಷ್ಟಿಯಾದ ಸ್ನೇಹಿತಳಿದ್ದಳು. ಅವಳಿಗೆ ಅವಳ ವಿಷಯದಲ್ಲಿ ದಯೆ ಹುಟ್ಟಿ ಅವಳನ್ನು ಸನ್ಮಾರ್ಗದಲ್ಲಿ ತೀಲು ಪ್ರಯತ್ನ ಮಾಡಿದಳು. ಅನೇಕ ವಿಧದಿಂದ ಪ್ರಯತ್ನ ಮಾಡಿದರೂ ಏನೂ ಉಪಯೋಗವಾಗಲಿಲ್ಲ. ಅಷ್ಟೇ ಅಲ್ಲ. ಅದು ವಿಪರೀತವಾಗಿ ವೈರಕ್ಕೆ ಕಾರಣವಾಯಿತು. ಅವಳ ಕ್ರೋಧದಿಂದ ' ನಿನಗೆ ಜೈನ ಧರ್ಮದ ಗರ್ವವಿದೆ. ನಿನ್ನ ಸತ್ಯಧರ್ಮವೇ ಧರ್ಮವಾಗಿದೆ. ಎಂಬ ಅಹಂಕಾರ ನಿನ್ನಲ್ಲಿದೆ. ಯಾವಾಗಲೂ ನೀನು ನನಗೆ ಉಪದೇಶವನ್ನು ಕೊಡುತ್ತೀಯೇ. ಆದರೆ ನಿನ್ನ ಧರ್ಮವನ್ನು ಖಂಡಿಸುವ ನನ್ನ ಬೌದ್ಧಧರ್ಮವಿದೆ ಎಂದು ಹೇಳಿ ಮತ್ಸರದಿಂದ ಅವಳನ್ನು ಹೊಡೆಯಲೆಂದು ಕುವಿದ್ಯಾದೇವತೆಯನ್ನು ಅವಳಕಡೆ ಕಳುಹಿಸಿದಳು ಆ ವಿದ್ಯೆಯು ಅವಳ ಸಮೀಪ ಹೋಗಿ ಅವಳನ್ನು ಹೊಡೆಯಲು ಪ್ರಯತ್ನಿಸಿತ್ತು. ಆದರೆ ಅವಳು ಸಮ್ಯಗ್‌ದೃಷ್ಟಿಯಾಗಿದ್ದರಿಂದ ಅವಳ ಮೇಲೆ ಏನೂ ನಡೆಯಲಿಲ್ಲ. ಉಪಾಯದಿಂದ ಅವಳನ್ನು ಹೊಡೆಯಬೇಕೆಂದು ಅಲ್ಲಿ ನಿಂತು ಬಿಟ್ಟಳು. ಆ ಸಾಧ್ವಿಯು ಭಗವಂತನ ಸ್ತುತಿಯಲ್ಲಿ ಮಗ್ನಳಾಗಿದ್ದಳು. ಭಗವಂತನ ಭಕ್ತಿಯನ್ನು ಮಾಡಿದರೆ ಯಾವ ಆಪತ್ತಿಯೂ ತತ್ಕಾಲ ದೂರವಾಗುತ್ತದೆ.

ದಾತಾ ನ ಹರ್ತಾ ದಿವಸಂ ವಿವಸ್ವಾ—
ನದ್ಯಶ್ವ ಇತ್ಯಚ್ಯುತ ದರ್ಶಿತಾಶಃ
ಸವ್ಯಾಜಮೇವಂ ಗಮಯತ್ಯಶಕ್ತಃ
ಕ್ಷಣೇನ ದತ್ಸೇಭಿಮತಂ ನತಾಯ

ಸೂರ್ಯನಂತೆ ನಿರ್ಧನ ಜನರು ಯಾರಿಗೂ ಏನೂ ಕೊಡದೆ ಇವತ್ತು ಕೊಡುತ್ತೇನೆ, ನಾಳೆ ಕೊಡುತ್ತೇನೆಂದು ಆಶೆಗೆ ಹಚ್ಚಿ ಸಮಯ ಕಳೆಯು

ತ್ತಾರೆ. ಆದರೆ ಭಗವನ್ ! ನೀವು ಶರಣದಲ್ಲಿ ಬಂದ ಭಕ್ತರ ಸಂಕಟಗಳನ್ನು ತತ್ಕಾಲ ನಷ್ಟ ಮಾಡುವಿರಿ.

ಈ ಪ್ರಕಾರ ಅವಳ ಧ್ಯಾನವನ್ನು ನೋಡಿ ಕುವಿದ್ಯೆಗಳು 'ಇಲ್ಲಿ ನಮ್ಮದೇನೂ ಆಟ ನಡೆಯುವುದಿಲ್ಲ'ವೆಂದು ತಿಳಿದು ಅವಳಿಗೆ ಹೇಳಿದವು. ಆಗ ಅವಳು ಕ್ರುದ್ಧಳಾಗಿ 'ನೀವು ಏನಾದರೂ ಮಾಡಿ ಜೈನಧರ್ಮದ ಶ್ರದ್ಧೆಯನ್ನು ನಷ್ಟ ಮಾಡಬೇಕು' ಎಂದು ಹೇಳಿದಳು. ಆಗ ಆ ವಿದ್ಯೆಗಳು ಅನೇಕ ಕ್ರೂರವಾದ ಸಿಂಹ, ಆನೆ, ಸರ್ಪ ಮೊದಲಾದ ಭಯಂಕರ ರೂಪಗಳನ್ನು ಧರಿಸಿ ಅವಳಿಗೆ ಹೆದರಿಸ ಹೋದವು, ಆದರೆ ಅವಳು ಮಾತ್ರ ಧ್ಯಾನದಲ್ಲಿ ನಿಶ್ಚಲಳಾಗಿದ್ದಳು.

ಸದ್ದೃಷ್ಟಿ ಮಾತಾ ಹೃದಿ ಯಸ್ಯ ನಿತ್ಯಂ
ಸ್ಯಾತ್ತಸ್ಯ ಸಿಂಹೋಪಿ ಮೃಗೋಹಿ ಶೀಘ್ರಂ
ಗಜೋಪ್ಯಜೋ ಭೀಮಫಣೀಚ ಮಾಲಾ
ವಹ್ನಿಶ್ಚ ನೀರಂ ರಿಪವಃ ಸಖಾಯಃ ||

ಅವಳ ಹೃದಯದಲ್ಲಿ ಸಮ್ಯಗ್ದರ್ಶನವೆಂಬ ತಾಯಿಯು ವಿರಾಜಿಸುತ್ತಿದ್ದಳು. ಇದರ ಪ್ರಭಾವದಿಂದ ಕ್ರೋಧಾವಿಷ್ಟವಾದ ಸಿಂಹವು ಶಾಂತವಾದ ಜಿಂಕೆಯ ಹಾಗೆ ಆಯ್ತು ಆನೆಯು ಆಡಿನಂತಾಯಿತು. ಭಯಾನಕವಾದ ಸರ್ಪವು ಪುಷ್ಪಮಾಲೆಯಂತಾಯ್ತು. ಅವಳ ನಿಶ್ಚಯವನ್ನು ನೋಡಿ ತೀವ್ರ ಜ್ವಾಲಾಯುಕ್ತವಾದ ಬೆಂಕಿಯೂ ನೀರಾಗಿ ಹೋಯ್ತು. ಹೀಗೆ ಸತ್ಯಧರ್ಮದ ದೃಢತೆಯನ್ನು ನೋಡಿ ಆ ಕುವಿದ್ಯೆಯು ಕ್ರೂರಭಾವವನ್ನು ಬಿಟ್ಟು ಅವಳ ಮರೆ ಹೋಯಿತು. ಅವಳ ದರ್ಶನವನ್ನು ಮಾಡಿ ಆ ವಿದ್ಯೆಯು ಹೇಳುತ್ತಿದೆ. ದೇವೀ ! ನಾನು ಅನೇಕ ಜನ್ಮಗಳಿಂದ ಕುಧರ್ಮದ ಕಾರಣ ದುಃಖವನ್ನು ಅನುಭವಿಸುತ್ತಿದ್ದೇನೆ. ಈಗ ನಿನ್ನ ಕೃಪೆಯಿಂದ ಕುಧರ್ಮವನ್ನು ಬಿಟ್ಟು ಸತ್ಯ ಧರ್ಮವನ್ನು ಧರಿಸುವೆನು"

ಎಂದು ಹೇಳಿ ಆ ವಿದ್ಯಾದೇವತೆಯು ಕುಧರ್ಮವನ್ನು ಬಿಟ್ಟು ಸತ್ಯಧರ್ಮ ವನ್ನು ಅಂಗೀಕರಿಸಿತು. ಮತ್ತು ಅದೇ ಸಮಯದಲ್ಲಿ ರತ್ನರಚಿತ ಉತ್ತಮ ಸಿಂಹಾಸನದಲ್ಲಿ ಆ ಸಾಧ್ವಿಯನ್ನು ಕುಳ್ಳಿರಿಸಿ ಅವಳನ್ನು ಪೂಜಿಸಿದಳು. ಹಾಗೆಯೇ ಅವಳ ಸಖಿಯಾದ ಮಿಥ್ಯಾದೃಷ್ಟಿ ಹೆಂಗಸಿಗೆ ಹೇಳಿತು. 'ನೀನು ಮಿಥ್ಯಾತ್ವವನ್ನು ಬಿಟ್ಟು ಸಮ್ಯಕ್ತ್ವವನ್ನು ಧರಿಸು. ನಾನು ಮಿಥ್ಯಾತ್ವ ಬಿಟ್ಟಿದ್ದೇನೆ. ನೀನೂ ಉತ್ತಮವಾದ ಜೈನಧರ್ಮವನ್ನು ಧಾರಣೆ ಮಾಡಿಕೋ. ನಾನು ಜೈನಧರ್ಮವನ್ನು ಧರಿಸಿದ್ದೇನೆ. ಆದುದರಿಂದ ಇನ್ನು ಮಿಥ್ಯಾ ದೃಷ್ಟಿಗಳ ಸೇವೆಯನ್ನು ಮಾಡುವುದಿಲ್ಲ. ಸಮ್ಯಗ್‌ದೃಷ್ಟಿಗಳ ಸೇವೆಯನ್ನೇ ಮಾಡುವೆನು' ಇದನ್ನು ಕೇಳಿ ನಾಸ್ತಿಕ ಹೆಂಗಸಿನ ಪರಿಣಾಮವು ಉಪ ಶಮವಾಗಿ ಅವಳು ಮಿಥ್ಯಾತ್ವವನ್ನು ಬಿಟ್ಟಳು. ಮತ್ತು ತನ್ನ ಸಖಿಯ ಹತ್ತಿರ ಬಂದು, ದೇವೀ ! ನಿನ್ನ ಸತ್ಯಧರ್ಮವು ಧನ್ಯವಾಗಿದೆ. ನಾನು ಕುದೇವಿಯ ಪ್ರಭಾವದಿಂದ ಅನೇಕ ವಿಧವಾಗಿ ನಿನಗೆ ತೊಂದರೆ ಕೊಟ್ಟರೂ ನೀನು ಸತ್ಯಧರ್ಮದ ಪ್ರಭಾವದಿಂದ ವಿಜಯವನ್ನು ಹೊಂದಿರುತ್ತೀ ಮತ್ತು ನಿನ್ನ ಧರ್ಮೋಪದೇಶದಿಂದ ನನ್ನ ಕಲ್ಯಾಣವೂ ಆಯಿತು. ಆದುದರಿಂದ ಈ ಸತ್ಯಧರ್ಮವನ್ನು ನಾನು ಎಂದೂ ಬಿಡುವುದಿಲ್ಲ. ಹೀಗೆ ಹೇಳಿ ದೃಢ ವಾದ ಸಮ್ಯಕ್ತ್ವವನ್ನು ಧರಿಸಿದಳು. ಹಾಗೆಯೇ ಸತ್ಯಧರ್ಮವನ್ನು ಧರಿಸಿ ತನ್ನ ಆತ್ಮಸಿದ್ಧಿಯನ್ನು ಮಾಡಿಕೊಂಡಳು.

ಆದುದರಿಂದ ಭವ್ಯರೇ ! ನೀವು ಪಾಪವಾಸನೆಯನ್ನು ಬಿಡಿರಿ. ಇಹ ಪರ ಲೋಕಗಳಲ್ಲಿ ಸುಖವನ್ನು ಕೊಡುವ ಉತ್ತಮ ಸತ್ಯಧರ್ಮವನ್ನು ಮನಸ್ಸಿನಲ್ಲಿ ಧರಿಸಿರಿ. ಇದು ಆಚಾರ್ಯರ ವಚನವಾಗಿದೆ. ಲೋಕದಲ್ಲಿ ಸುಖ ದುಃಖಗಳ ಫಲವನ್ನು ಅನುಭವಿಸುವ ಆತ್ಮನೇ ಕರ್ತನಾಗಿದ್ದಾನೆ. ಮತ್ತು ಅವನೇ ಭೋಕ್ತನಾಗಿದ್ದಾನೆ. ಶುಭ ಪರಿಣಾಮದಿಂದ ಶುಭ ಕಾರ್ಯಗಳನ್ನು ಮಾಡಿದರೆ ಸ್ವರ್ಗಕ್ಕೆ ಹೋಗುತ್ತಾನೆ. ಮತ್ತು ಅಶುಭ

ಪರಿಣಾಮದಿಂದ ಅಶುಭ ಕಾರ್ಯಗಳನ್ನು ಮಾಡಿದರೆ ನರಕಾದಿ ಕುಗತಿಗಳಿಗೆ ಹೋಗುತ್ತಾನೆ. ಅಲ್ಲಿ ದಃಖವನ್ನು ಅನುಭವಿಸುತ್ತಾನೆ.

ಪುಣ್ಯಸ್ಯ ಪ್ರಾಪ್ತೌ ಸ್ವರ್ಗಃ ಪಾಪೇನ ನರಕನಿವಾಸಃ ।
ಪುಣ್ಯಪಾಪದ್ವಯಂ ತ್ಯಜೇತ್, ತೇನ ಲಭ್ಯತೇ ಶಿವವಾಸಃ ॥

ಸುಭಾಷಿತ,

ಪುಣ್ಯಭಾವ ಮತ್ತು ಪಾಪ ಭಾವ ಇವೆರಡೂ ಕರ್ಮಬಂಧಕ್ಕೆ ಕಾರಣವಾಗಿವೆ ಎರಡೂ ಪರಿಣಾಮಗಳನ್ನು ಬಿಟ್ಟು ತನ್ನ ಆತ್ಮ ಸ್ವರೂಪದಲ್ಲಿದ್ದರೆ ಮೋಕ್ಷದ ಪ್ರಾಪ್ತಿಯಾಗುತ್ತದೆ. ಇದನ್ನು ತಿಳಿದು ನೀವು ಸುಖಕ್ಕೆ ಕಾರಣವಾದ ಪುಣ್ಯ ಸಂಚಯುವನ್ನು ಮಾಡಿರಿ. ಲೋಕದಲ್ಲಿ ಎಲ್ಲಾ ಜೀವರೂ ತನ್ನ ತನ್ನ ಸಂಚಿತವಾದ ಕರ್ಮಗಳಿಗೆ ಅನುಸಾರವಾಗಿ ಫಲವನ್ನು ಅನುಭವಿಸುತ್ತಾರೆ.

ಸುಖಸ್ಯ ದುಃಖಸ್ಯ ನ ಕೋಽಪಿ ದಾತಾ
ಪರೋ ದದಾತೀತಿ ಕುಬುದ್ಧಿರೇಷಾ
ಅಹಂ ಕರೋಮೀತಿ ವೃಥಾಭಿಮಾನಃ
ಸ್ವಕರ್ಮಸೂತ್ರಗ್ರಥಿತೋಹಿ ಲೋಕಃ ॥

ಸುಭಾಷಿತ.

ಪ್ರಾಣಿಗಳಿಗೆ ಸುಖದುಃಖಗಳನ್ನು ಬೇರೆ ಯಾರೂ ಕೊಡುವುದಿಲ್ಲ. ತಮ್ಮ ಒಳ್ಳೆಯ ಪರಿಣಾಮದಿಂದ ಅವರು ಸುಖಿಗಳಾಗುತ್ತಾರೆ. ನೀಚ ಪರಿಣಾಮದಿಂದ ದುಃಖಿಗಳಾಗುತ್ತಾರೆ. ಎಂದು ತಿಳಿದು ಯಾವಾಗಲೂ ಸತ್ಯಧರ್ಮದಲ್ಲಿ ದೃಢತೆಯನ್ನಿಡಿರಿ. ಅಸತ್ಯಧರ್ಮವನ್ನು ನಾಶ ಮಾಡಿರಿ. ಯಾವ ಆಪತ್ತಿಯಲ್ಲಿಯೂ ಅಸತ್ಯವನ್ನು ಮಾತನಾಡಬೇಡಿರಿ.

ಅಸತ್ಯ ಮಾತನಾಡಿದ್ದರಿಂದ ವಸುರಾಜ ಮತ್ತು ಪರ್ವತನ ಸ್ಥಿತಿ ಏನಾಯಿತೆಂಬ ವಿಷಯವನ್ನು ಈ ಕೆಳಗಿನ ಘಟನೆಯಿಂದ ತಿಳಿದು ಆತ್ಮಶೋಧನೆಯನ್ನು ಮಾಡಿಕೊಳ್ಳಿರಿ.

ವಸುರಾಜ ಪರ್ವತ ಮತ್ತು ನಾರದನು ಒಂದೇ ಗುರುವಿನ ಸಮಕ್ಷ
ದಲ್ಲಿ ವಿದ್ಯೆಯನ್ನು ಕಲಿತಿದ್ದರು. ಗುರುಪುತ್ರನಾದ ಪರ್ವತನು ಒಂದು
ದಿವಸ ಓದಿಸುತ್ತಿರುವಾಗ ಅಜದಿಂದ ಹೋಮವನ್ನು ಮಾಡಬೇಕೆಂಬ
ಪಾಠವು ಬಂತು. ಅಲ್ಲಿ ಅವನು ಅಜ ಅಂದರೆ ಆಡು, ಆಡಿನಿಂದ ಹೋಮ
ವನ್ನು ಮಾಡಬೇಕೆಂದು ಅರ್ಥ ಮಾಡಿ ಹೇಳಿದನು. ಆಗ ನಾರದನು
ಪರ್ವತನೇ! ಗುರುಗಳು ಹೀಗೆ ಅರ್ಥ ಹೇಳಲಿಲ್ಲವಲ್ಲ. ಅಜವೆಂದರೆ
ಮೂರು ವರ್ಷದ ಧಾನ್ಯ, ಭತ್ತ, ಅದರಿಂದ ಹೋಮ ಮಾಡಬೇಕೆಂಬ
ಅರ್ಥವನ್ನು ಹೇಳಿದ್ದಾರೆ. ನೀನು ಹಿಂಸಾಪೋಷಕವಾದ ಅರ್ಥವನ್ನು
ಹೇಗೆ ಮಾಡುತ್ತಿರುವಿ ಎಂದನು. ಅಹಂಕಾರಿಯಾದ ಪರ್ವತನು ಸಿಟ್ಟಿಗೆ
ಬಂದು ಹಟಕ್ಕೆ ಇಳಿದನು. ಇಲ್ಲ. ಗುರುಗಳು ಹೀಗೆಯೇ ಹೇಳಿದ್ದಾರೆ.
ನಾನು ಹೇಳುವುದೇ ಸರಿ. ಎಂದು ಹಟ ಹಿಡಿದನು. ಇಬ್ಬರ ವಿವಾದವೂ
ಬೆಳೆಯಿತು. ಕಡೆಗೆ ವಸುರಾಜನ ಕಡೆಗೆ ಹೋಗಿ ನಿರ್ಣಯ ಮಾಡಿಕೊಳ್ಳು
ವುದೆಂಬ ನಿರ್ಣಯವಾಯ್ತು. ಪರ್ವತನು, ಸುಳ್ಳು ಅರ್ಥ ಹೇಳಿ ಹಟ
ಸಾಧನೆಯನ್ನು ಮಾಡಿದರೂ ವಸುರಾಜನು ಸತ್ಯಕ್ಕೆ ಪ್ರಸಿದ್ಧನಾ
ದ್ದರಿಂದ ಸಭೆಯಲ್ಲಿ ತನ್ನ ಅಪಮಾನವಾಗುವುದು ನಿಶ್ಚಯವೆಂದು ಭಾವಿಸಿ
ಚಿಂತಾಕ್ರಾಂತನಾದನು. ಮಗನು ಚಿಂತೆಯಲ್ಲಿದ್ದದ್ದನ್ನು ನೋಡಿ ಪರ್ವ
ತನ ತಾಯಿಯು ವಿಷಯವನ್ನು ತಿಳಿದುಕೊಂಡು ರಾಜನ ಕಡೆ ಹೋದಳು.
ಯಾವಾಗಲೋ ಆ ಗುರುಪತ್ನಿಗೆ ರಾಜನು ಒಂದು ವಚನವನ್ನು ಕೊಟ್ಟಿ
ದ್ದನು. ಅದನ್ನು ಈಗ ಪೂರೈಸಬೇಕೆಂದು ಹಟ ಹಿಡಿದಳು. ಆಗ ರಾಜನು
ಒಪ್ಪಿದನು. ಸಭೆಯಲ್ಲಿ ಈ ವಿವಾದವು ಬರಲು ಪರ್ವತನು ಮಾಡುವ
ಅರ್ಥವೇ ಸರಿ ಎಂದು ನಿರ್ಣಯ ಕೊಡಬೇಕೆಂದಳು. ರಾಜನಿಗೆ ಈ ಅಸತ್ಯ
ವಚನವನ್ನು ಕೇಳಿ ದುಃಖವಾಯ್ತು. ಆದರೆ ಗುರು ಪತ್ನಿಗೆ ವಚನವನ್ನು
ಕೊಟ್ಟಿದ್ದರಿಂದ ವಿವಶನಾಗಿದ್ದನು. ಮರುದಿನ ಸಭೆಯಲ್ಲಿ ಈ ವಿವಾದವು
ವಸುರಾಜನ ಸಭೆಯಲ್ಲಿ ಹೋದಾಗ ಅವನು ಸತ್ಯದ ಅರಿವಿದ್ದರೂ ಪರ್ವ

ತನ ಕಡೆ ಸುಳ್ಳು ಪಕ್ಷವನ್ನು ತೆಗೆದುಕೊಂಡು ಪರ್ವತನು ಹೇಳುವ ಸುಳ್ಳನ್ನು ಸತ್ಯವೆಂದು ಹೇಳಿ ಬಿಟ್ಟನು. ಒಬ್ಬ ಗುರು ಪುತ್ರ ಮತ್ತು ಗುರು ಪತ್ನಿಯ ಸ್ನೇಹದಿಂದ ಜಿನೇಶ್ವರರಿಂದ ಹೇಳಲ್ಪಟ್ಟ ವಚನವನ್ನು ನಂಬದೆ ಅವನು ಅಧರ್ಮಿಯಾದನು. ಆ ಅಸತ್ಯವ್ಯವಹಾರದಿಂದ ಆ ಪರ್ವತ ಮತ್ತು ವಸುರಾಜನು ನರಕಕ್ಕೆ ಹೋದರು. ಸತ್ಯಧರ್ಮದ ಪ್ರಭಾವದಿಂದ ನಾರದನು ಸ್ವರ್ಗಕ್ಕೆ ಹೋದನು. ದಶರಥರಾಜನು, ಪಂಚ ಪಾಂಡವರು, ಸತ್ಯ ಧರ್ಮವನ್ನು ಪಾಲಿಸುತ್ತ ಪ್ರಸಿದ್ಧರಾದರು. ಮತ್ತು ಸ್ವರ್ಗಮೋಕ್ಷವನ್ನು ಹೊಂದಿದರು. ಆದುದರಿಂದ ಶುಭ ಪರಿಣಾಮವನ್ನಿಡಿರಿ. ಶುಭ ಪರಿಣಾಮವು ಜೀವನಿಗೆ ಶುಭಗತಿಗೆ ಕಾರಣವಾಗಿರುತ್ತದೆ. ಅನಂತ ಭವಗಳಲ್ಲಿ ಧರ್ಮಹೀನನಾಗಿ ಈ ಜೀವನು ಅನೇಕ ದುಃಖಗಳನ್ನು ಅನುಭವಿಸಿದನು. ಕೆಲವು ಸಾರಿ ಮನುಷ್ಯ, ಕೆಲವು ಸಾರಿ ದೇವ, ಕೆಲವು ಸಾರಿ ತಿರ್ಯಂಚ ಮತ್ತು ಕೆಲವು ಸಾರಿ ನಾರಕಿಯಾಗಿ ಹುಟ್ಟಿ ಕುರೂಪಿ, ಸುರೂಪಿ ಎಂದೆನ್ನಿಸಿ ಅನೇಕ ಯೋನಿಗಳಲ್ಲಿ ದುಃಖವನ್ನು ಅನುಭವಿಸುತ್ತಾ ಅನೇಕ ಜನ್ಮಗಳನ್ನು ಕಳೆದನು. ಸಂಸಾರವೆಂಬ ಅರಣ್ಯದಲ್ಲಿ ಪರಿಭ್ರಮಣೆ ಮಾಡುತ್ತಿರುವ ನನಗೆ ಭಗವನ್ ! ತಮ್ಮ ಸಪ್ತನಯವೆಂಬ ಜಲಾಶಯವು ಈಗ ತಾನೇ ಸಿಕ್ಕಿದೆ.

ಜನ್ಮಾಟವ್ಯಾಂ ಕಥಮಪಿ ಮಯಾ ದೇವ ! ದೀರ್ಘಂ ಭ್ರಮಿತ್ವಾ
ಪ್ರಾಪ್ತೈವೇಯಂ ತವ ನಯಕಥಾ ಸ್ಫಾರಪೀಯೂಷವಾಪೀ
ತಸ್ಯಾಮಧ್ಯೇ ಹಿಮಕರಹಿಮವ್ಯೂಹಶೀತೇ ನಿತಾಂತಂ
ನಿರ್ಮಗ್ನಂ ಮಾಂ ನ ಜಹತಿ ಕಥಂ ದುಃಖದಾವೋಪತಾಪಾಃ ||

ಚಂದ್ರ ಮತ್ತು ಹಿಮ ಸಮುದ್ರದಂತೆ ಶೀತಲವಾಗಿರುವ ನಿಮ್ಮ ಸಪ್ತನಯವೆಂಬ ಅಮೃತದ ಸಮುದ್ರದಲ್ಲಿ ನಾನು ಮುಳುಗುತ್ತಿರು

ವಾಗ ಸಂಸಾರ ದುಃಖವೆಂಬ ತಾಪವು ಹೇಗೆ ದೂರವಾಗಲಾರದು ? ಅವಶ್ಯವಾಗುವುದು.

ಸಂಸಾರ ದುಃಖವನ್ನು ನಾಶ ಮಾಡುವ ಸತ್ಯ ಧರ್ಮವನ್ನು ಪರಿಪಾಲಿಸಿರಿ. ಸತ್ಯಧರ್ಮವು ಜೀವನೊಡನೆ ಬಂದು ಸ್ವರ್ಗಮೋಕ್ಷವನ್ನು ಕೊಡತಕ್ಕದ್ದಾಗಿದೆ. ಪಾಪವಾಸನೆಯನ್ನು ಬಿಟ್ಟು ಸತ್ಯಧರ್ಮವನ್ನು ಮನಸ್ಸಿನಲ್ಲಿಡಿರಿ. ಸತ್ಯಧರ್ಮವನ್ನು ಪರಿಪಾಲಿಸಿದರೆ ದೇವ ದಾನವರೂ ವಶರಾಗುತ್ತಾರೆ. ಈ ವಿಷಯದಲ್ಲಿ ಒಬ್ಬ ಸಮ್ಯಗ್ದೃಷ್ಟಿ ಮಂತ್ರಿಯ ವೃತ್ತವನ್ನು ಕೇಳಿರಿ.

ಒಂದು ದಿವಸ ಮಂತ್ರಿಯ ಮನೆಯಲ್ಲಿ ಮುನಿಗಳ ಆಹಾರವಾಯ್ತು. ಮುನಿಗಳು ಬಂದಾಗ ಎಲ್ಲರೂ ಯಥಾಶಕ್ತಿ ವ್ರತಗಳನ್ನು ಅಂಗೀಕರಿಸಿದರು. ರಾಜಮಂತ್ರಿಯೂ ಪಂಚ ಅಣುವ್ರತಗಳನ್ನು ತೆಗೆದುಕೊಂಡನು. ಆ ಸಮಯದಲ್ಲಿ ಮುನಿಗಳು ಹೇಳಿದರು. ಮಂತ್ರಿವರ್ಯ ! ನಿನಗೆ ಹಿಂಸಾಪೋಷಕವಾದ ಶಸ್ತ್ರವನ್ನು ಧರಿಸಲು ಸಾಧ್ಯವಿಲ್ಲ. ಮಂತ್ರಿಯು—ನಾನು ಹಾಗಾದರೆ ಮರದ ಶಸ್ತ್ರವನ್ನು ಹಿಡಿದುಕೊಳ್ಳುವೆನೆಂದನು. ಹೀಗೆಯೇ ಕೆಲವು ದಿವಸಗಳ ವರೆಗೆ ಅವನು ಮರದ ಶಸ್ತ್ರವನ್ನೇ ಇಟ್ಟುಕೊಂಡಿದ್ದನು. ಯಾರೋ ದುಷ್ಟರು ಒಂದು ದಿವಸ ರಾಜನಿಗೆ ಚಾಡಿ ಹೇಳಿದರು. ರಾಜನೂ ಕುಪಿತನಾಗಿ ಮಂತ್ರಿಯನ್ನು ಕರೆಯ ಕಳುಹಿಸಿದನು. ಮಂತ್ರಿಯು ನನಗೆ ಯಥಾರ್ಥವಾಗಿ ಮೋಸ ಮಾಡುತ್ತಿದ್ದರೆ ಒಂದು ವೇಳೆ ಆದರಲ್ಲಿ ಮರದ ಶಸ್ತ್ರವು ಹೊರಟರೆ ಅವನನ್ನು ಶೂಲಿಗೆ ಏರಿಸುವೆನೆಂದು ಸಿಟ್ಟಿನಲ್ಲಿದ್ದನು. ಮಂತ್ರಿಯು ಅತಿ ಧೈರ್ಯದಿಂದ ರಾಜಸಭೆಗೆ ಬಂದು ರಾಜನಿಗೆ ನಮಸ್ಕಾರ ಮಾಡಿ ತನ್ನ ಆಸನದಲ್ಲಿ ಕುಳಿತುಕೊಂಡನು. ಪಂಚಾಣುವ್ರತದ ಪ್ರಭಾವದಿಂದ ನನ್ನ ಜಯವು ಅವಶ್ಯವಾಗಿಯೂ ಆಗುವುದು. ಪಂಚಾಣುವ್ರತವನ್ನು ಯಾರು ನಿರತಿಚಾರವಾಗಿ ಪರಿಪಾಲಿಸುತ್ತಾರೆಯೋ ಅವರು ಲೋಕದಲ್ಲಿ ಜಯಶೀಲರಾಗುತ್ತಾರೆ. ಅವರ ಎಲ್ಲ ಸಂಕಟಗಳೂ

ನಾಶವಾಗಿ ಅವರಿಗೆ ಸ್ವರ್ಗವು ಲಭಿಸುತ್ತದೆ. ಹೀಗೆ ಭಗವಂತನ ವಚನವಿದೆ. ಒಂದು ವೇಳೆ ನನ್ನನ್ನು ಕೊಂದು ಹಾಕಿದರೂ ನನ್ನ ಆತ್ಮನು ಅಖಂಡ ನಾಗಿದ್ದು ಅವಿನಾಶಿಯಾಗಿದ್ದಾನೆ. ಶಸ್ತ್ರದಿಂದ ಅವನ ವಿನಾಶವಾಗ ಲಾರದು.

ಕಟೆಕಾಸೇ ಕಭೀ ನ ಕೋಯಿ ಸಕೇಕಾಟಾ
ಮಾಯಸೇ ನಹೀ ಮರತ ಆತ್ಮಾ ಹಮಾರಾ ||

ಅಧ್ಯಾತ್ಮಪದ ಸಂಗ್ರಹ.

ನನ್ನ ಆತ್ಮನು ಶಸ್ತ್ರದಿಂದ ಭಿನ್ನನಾಗುವುದಿಲ್ಲ. ಬೆಂಕಿಯಿಂದ ಸುಡ ಲ್ಪಡುವುದಿಲ್ಲ. ನೀರಿನಲ್ಲಿ ತೋಯುವುದಿಲ್ಲ. ಹೀಗೆ ಅವನು ಶರೀರದಿಂದ ಭಿನ್ನನಾಗಿದ್ದಾನೆ. ಸಂಸಾರದಲ್ಲಿ ಆಗುವ ಬಾಧೆಗಳು ಶರೀರಕ್ಕೆ ಆಗುತ್ತವೆ. ಆತ್ಮನಿಗೆ ಆಗುವುದಿಲ್ಲ ಆ ಶರೀರದ ಮೇಲೆ ಆಗುವ ಬಾಧೆಗಳಲ್ಲಿ ನನ್ನ ರಾಗದ್ವೇಷಗಳಿಲ್ಲ ಎಂದು ವಿಚಾರ ಮಾಡಿ ಇವನು ತನ್ನ ಆತ್ಮ ಸ್ವರೂಪ ದಲ್ಲಿ ದೃಢನಾಗಿದ್ದನು. ಭಗವನ್ ! ನಿಮ್ಮ ಧ್ಯಾನವನ್ನು ಮಾಡುತ್ತಿರುವ ಭಕ್ತರನ್ನು ನೀವು ಸಂಸಾರ ಸಮುದ್ರದಿಂದ ಪಾರ ಮಾಡಿದ್ದೀರಿ. ಇಂಥಹ ಸಂಕಟಗಳು ಬಂದರೂ ನಮಗೆ ಭಯವೆಲ್ಲಿಯದು ?

ಜಿನರಾಜೋ ಗುಣಾಂಭೋದಿರ್ಭವಸಾಗರ ತಾರಕಃ
ದೋಷಾತಿಗೋ ಮಹಾಜ್ಞಾನೀ ದೇವೋ ಮಾನ್ಯೋ ಹಿತಂಕರಃ ||

ಭಗವನ್ ! ನೀವು ಅನಂತಗುಣಗಳ ಸಮುದ್ರದಂತಿರುವಿರಿ, ಭವ ವೆಂಬ ಸಮುದ್ರದಿಂದ ಭಕ್ತರನ್ನು ಪಾರಗೊಳಿಸುವಿರಿ, ೧೮ ದೋಷಗಳಿಂದ ರಹಿತರಾಗಿದ್ದೀರಿ ಎಲ್ಲಾ ದೇವತೆಗಳಿಗೂ ವಂದ್ಯರಾಗಿರುವಿರಿ. ಇಂಥಹ ಭಗವಂತನ ಭಕ್ತರಿಗೆ ಯಾವ ಸಂಕಟಗಳು ದುಃಖ ಕೊಡುವವು ? ಇಂಥಹ ನೂರಾರು ಸಂಕಟಗಳು ಬಂದರೂ ಅವು ದೂರವಾಗುತ್ತವೆ ಎಂದು ದೃಢವಾದ ನಂಬಿಕೆಯಿಂದ:—

ತವಪಾದೌ ಮಮಹೃದಯೇ
ಮಮ ಹೃದಯಂ ತವ ಪದದ್ವಯೇ ಲೀನಂ ।
ತಿಷ್ಠತು ಜಿನೇಂದ್ರತಾವ-ದ್ಯಾವನ್ನಿರ್ವಾಣಸಂಪ್ರಾಪ್ತಿಃ ॥
ಸಮಾಧಿಭಕ್ತಿ.

ಮಂತ್ರಿಯು ಅಚಲಭಾವದಿಂದ ಪರಮಾತ್ಮನ ಧ್ಯಾನವನ್ನು ಮಾಡ ತೊಡಗಿದನು. ಅಲ್ಲಿದ್ದವರೆಲ್ಲರೂ ಇವನು ಹೆದರಿಕೆಯಿಂದ ಕಣ್ಣುಮುಚ್ಚಿ ಕೂತಿದ್ದಾನೆ, ಹೀಗೆ ಕೂತರೆ ಮರಣವು ತಪ್ಪುವುದೇ ? ಎಂದು ಹೇಳ ಹತ್ತಿದರು.

ರಾಜನು ಇವನು ಕಣ್ಣು ಮುಚ್ಚಿ ಕೂತಿದ್ದಾನೆ. ಇವನು ಕಣ್ಣು ತೆರೆದ ಕೂಡಲೇ ಅವನ ಶಿರಚ್ಛೇದವನ್ನು ಮಾಡಿರೆಂದು ಆಜ್ಞಾಪಿಸಿದನು. ಮಂತ್ರಿಯು ಭಗವಂತನ ಧ್ಯಾನವನ್ನು ಅತ್ಯಂತ ಭಕ್ತಿಭಾವದಿಂದ ಮಾಡಿ, ನಮಸ್ಕಾರ ಮಾಡಿ ಕಣ್ಣು ತೆರೆದನು. ಹಾಸ್ಯ ಮುದ್ರೆಯಿಂದ ಎಲ್ಲರನ್ನು ನೋಡಿದನು. ನೀವು ನಿರ್ಣಯ ಮಾಡಿದಂತೆ ಮಾಡಿರಿ. ನಾನು ನನ್ನ ಆತ್ಮ ಧ್ಯಾನದಲ್ಲಿರುವೆನೆಂದನು. ಪುನಃ ಆತ್ಮಧ್ಯಾನದಲ್ಲಿ ಮಗ್ನನಾದನು. ಹಾಗಾದರೆ ಒರೆಯಿಂದ ನಿನ್ನ ಶಸ್ತ್ರವನ್ನು ತೆಗೆದು ತೋರಿಸು. ತೋರಿಸು. ನಂತರವೇ ನಿನಗೆ ದಂಡ ಕೊಡಲಾಗುವುದೆಂದು ರಾಜನು ಗರ್ಜಿಸಿ ಹೇಳಿದನು. ಆಗ ಮಂತ್ರಿಯು ರಾಜನ್ ! ನಾನು ಶಸ್ತ್ರವನ್ನು ಒರೆಯಲ್ಲಿಟ್ಟಿದ್ದೇನೆ. ಅದು ದಯಾಧರ್ಮವನ್ನು ಪಾಲಿಸುವುದಕ್ಕೋಸ್ಕರವಾಗಿಟ್ಟಿದ್ದೇನೆ. ಅದರಲ್ಲಿ ನನ್ನ ಯಾವ ಪ್ರಕಾರವಾಗಿಯೂ ಸ್ವಾರ್ಥವಿಲ್ಲ. ಎಂದು ಹೇಳಿ ಆದಿಪ್ರಭುವನ್ನು ತನ್ನ ಹೃದಯಲ್ಲಿ ಧರಿಸಿ ಭಕ್ತಾಮರ ಸ್ತೋತ್ರವನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದನು.

ತುಭ್ಯಂ ನಮಸ್ತ್ರಿಭುವನಾರ್ತಿಹರಾಯ ನಾಥ !
ತುಭ್ಯಂ ನಮಃಕ್ಷಿತಿತಲಾಮಲಭೂಷಣಾಯ
ತುಭ್ಯಂ ನಮಸ್ತ್ರಿಜಗತಃ ಪರಮೇಶ್ವರಾಯ
ತುಭ್ಯಂ ನಮೋ ಜಿನ ಭವೋದಧಿಶೋಷಣಾಯ ॥

ಭಗವನ್ ! ಅಧೋ ಲೋಕ, ಮಧ್ಯಲೋಕ, ಮತ್ತು ಊರ್ಧ್ವ ಲೋಕದಲ್ಲಿ ಎಲ್ಲರ ಸಂಕಟವನ್ನು ಅಪಹರಿಸುವ, ಮೂರು ಲೋಕಕ್ಕೆ ಭೂಷಣ ಸ್ವರೂಪನಾದ, ಮೂರು ಲೋಕದ ಪ್ರಭು, ಭವ್ಯ ಮತ್ತು ಭಕ್ತರನ್ನು ಸಂಸಾರ ಸಮುದ್ರದಿಂದ ಪಾರುಗೊಳಿಸುವ ಭವ್ಯರಿಗೆ ಮುಕ್ತಿ ಯನ್ನು ಕೊಡುವ ನೀನು ದೇವನಾಗಿದ್ದೀಯೆ, ನಾನು ನಿನ್ನನ್ನು ಹೃದಯ ದಲ್ಲಿ ಧರಿಸಿ ನಮಸ್ಕಾರವನ್ನು ಮಾಡುತ್ತೇನೆ, ಈ ಸ್ತೋತ್ರವು ಪೂರ್ಣವಾ ಗುತ್ತಲೇ ಚಕ್ರೇಶ್ವರೀ ದೇವಿಯು ಪ್ರಭಾವಿತಳಾಗಿ ಒರೆಯಲ್ಲಿದ್ದ ಮರದ ಶಸ್ತ್ರವನ್ನು ವಜ್ರಮಯವಾಗಿ ಪರಿವರ್ತಿಸಿದಳು, ಮತ್ತು ಮಂತ್ರಿಯ ಕಿವಿಯಲ್ಲಿ ಹೇಳಿದಳು. 'ನೀನು ಹೆದರಬೇಡ, ಒರೆಯಿಂದ ಶಸ್ತ್ರವನ್ನು ತೆಗೆದು ತೋರಿಸು. ಆಗ ಮಂತ್ರಿಯು ಒರೆಯಿಂದ ಶಸ್ತ್ರವನ್ನು ತೆಗೆದು ತೋರಿ ಸಲು ಅದು ವಜ್ರಮಯವಾಗಿದ್ದರಿಂದ ದೇದೀಪ್ಯಮಾನವಾಗಿ ತೋರಿತು. ಇದನ್ನು ಅಲ್ಲಿದ್ದ ಚಾಡೀಖೋರರೆಲ್ಲರೂ ನೋಡಿ ಹತಪ್ರಭರಾದರು. ಅವರ ಗರ್ವವು ನಷ್ಟವಾಯಿತು. ರಾಜನಿಗೂ ಅಲ್ಲಿದ್ದವರಿಗೂ ಜೈನಧರ್ಮವು ಎಲ್ಲರಿಂದಲೂ ಉತ್ತಮವಾದ ಧರ್ಮವೆಂದು ಪ್ರತೀತಿಯಾಯಿತು,

**ಸರ್ವ ಧರ್ಮಮೋ ಶ್ರೇಷ್ಟ ಹೈ ಪರಮ ಅಹಿಂಸಾ ಧರ್ಮ**
**ಹಿಂಸಾಕೆ ಪೀಛೇ ಲಗೇ ಪಾಪ ಭರೆ ಸಬಕರ್ಮ ||**

ರಾಜನು ಮೊದಲಾಗಿ ಎಲ್ಲರೂ ಜೈನಧರ್ಮವನ್ನು ಅಂಗೀಕರಿದರು. ದೇವಿಯು ಮಂತ್ರಿಯ ಸ್ತುತಿಯನ್ನು ಮಾಡಿ, ಜೈನಧರ್ಮದ ಪ್ರಭಾವವಾಗ ಲೆಂಬ ಭಾವನೆಯಿಂದ ನಿನ್ನ ಸತ್ಯಧರ್ಮವು ಶ್ರೇಷ್ಟವಾದುದು, ನಿನ್ನ ಪಂಚಾಣುವ್ರತಗಳು ಶ್ರೇಷ್ಟವಾದವುಗಳು ಎಂದು ಪ್ರಶಂಶಿಸಿ ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದಳು.

ಎಲ್ಲರೂ ಆ ಸಮಯದಲ್ಲಿ ಜೈನಧರ್ಮದ ಜಯಜಯಕಾರವನ್ನು ಮಾಡಿದರು. ರಾಜನೂ, ತಾನು ಮಂತ್ರಿಗೆ ವಿಚಾರ ಮಾಡದೆ ಅವಿವೇಕದಿಂದ ಕಷ್ಟಕೊಟ್ಟೆನೆಂದು ಕ್ಷಮೆಯನ್ನು ಬೇಡಿದನು. ಇದನ್ನು ನೋಡಿ ಗರ್ವಿಷ್ಠ

ರಾದ ಚಾಡಿಖೋರರೂ ಕೂಡ ಮಿಥ್ಯಾತ್ವವನ್ನು ಬಿಟ್ಟು ಉತ್ತಮ ಸತ್ಯ ಧರ್ಮವನ್ನು ಗ್ರಹಣೆ ಮಾಡಿದರು. ಇದನ್ನು ನೋಡಿ ಅಲ್ಲಿದ್ದವರೆಲ್ಲರೂ ಸತ್ಯಧರ್ಮವೇ ಆತ್ಮೋದ್ಧಾರಕ್ಕೆ ಕಾರಣವಾಗಿವೆ ಎಂದು ನಂಬಿ ಉತ್ತಮ ಸತ್ಯಧರ್ಮವನ್ನು ಗ್ರಹಣೆ ಮಾಡಿದರು ಮತ್ತು ತಮ್ಮ ತಮ್ಮ ಶಕ್ತಿಗನುಸಾರವಾಗಿ ಅದನ್ನು ಪರಿಪಾಲಿಸಿ ಉತ್ತಮ ಗತಿಯನ್ನು ಹೊಂದಿದರು.

ಆದುದರಿಂದ ಭವ್ಯರೇ ! ನೀವೂ ಸತ್ಯಧರ್ಮವನ್ನು ಪರಿಪಾಲಿಸಿ ಆತ್ಮಕಲ್ಯಾಣವನ್ನು ಮಾಡಿ ಕೊಳ್ಳಿರಿ. ಹೀಗೆ ಭಗವಂತನ ವಚನವಿದೆ.

ಈ ಪ್ರಕಾರವಾಗಿ ಸತ್ಯಧರ್ಮದ ವಿವೇಚನೆಯನ್ನು ಯಥಾಮತಿ ಮಾಡಲಾಗಿದೆ.

ಉತ್ತಮ ಸತ್ಯ ಧರ್ಮಾಯ ನಮಃ

ಇತಿ ಉತ್ತಮ ಸತ್ಯಧರ್ಮ–ಸಮಾಪ್ತ.

# ಉತ್ತಮ ಸಂಯಮಧರ್ಮಾಯ ನಮಃ

ಮಂಗಲಾಚರಣ.

**ಯೇ ರತ್ನತ್ರಯಧಾರಿಣೋ ದಶವಿಧೇ ಧರ್ಮೇ ಪ್ರಿಯೇ ಸಂಮಿತಾಃ**
**ಲಾಭಾಲಾಭ ಸಮಾ ಜಿತೇಂದ್ರಿಯಪರಾ ಧ್ಯಾಯಂತಿ ಕರ್ಮಕ್ಷಯಂ**
**ಯೇ ಷಡ್‌ಜೀವವಿರಾಧನೈಕವಿರತಾ ಮಾನಾಪಮಾನೇ ಸಮಾಃ**
**ಯೇ ಕುರ್ವಂತ್ಯಪಿ ನಿಸ್ಪೃಹಾವರತಪೋವಂದಾಮಹೇತಾನ್ಗುರೂನ್**

ಪ್ರಶ್ನೋತ್ತರಮಾಣಿಕ್ಯಮಾಲಾ.

ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯಗಳನ್ನು ಧರಿಸುವವರೂ, ಉತ್ತಮ ಕ್ಷಮಾದಿ ದಶವಿಧ ಧರ್ಮಗಳನ್ನು ಪರಿಪಾಲಿಸುವವರೂ, ಲಾಭಾಲಾಭಗಳ ವಿಷಯದಲ್ಲಿ ಸಮವಿಚಾರವನ್ನು ಅನುಭವಿಸುವವರೂ, ಪಂಚೇಂದ್ರಿಯಗಳನ್ನು ಜಯಿಸುವವರೂ, ಕರ್ಮಕ್ಷಯವನ್ನು ಮಾಡಲು ಸದಾ ಚಿಂತಿಸುವವರೂ, ಷಟ್‌ಕಾಯ ಜೀವಗಳ ಹಿಂಸೆಯಾಗದಂತೆ ಅಪ್ರಮಾದ ವೃತ್ತಿಯಿಂದ ವರ್ತಿಸುವವರೂ, ಮಾನ ಅಪಮಾನಗಳಲ್ಲಿ ಸಮಾನವೃತ್ತಿಯನ್ನು ಧರಿಸುವವರೂ ಮತ್ತು ನಿಸ್ಪೃಹವೃತ್ತಿಯಿಂದ, ನಿಷ್ಕಾಮ ಭಾವನೆಯಿಂದ ತಪಶ್ಚರ್ಯೆಯಲ್ಲಿ ಮಗ್ನರಾದವರೂ, ಆದ ಗುರುಗಳನ್ನು ನಾವು ಈ ಪ್ರಕರಣದಲ್ಲಿ ವಂದಿಸುತ್ತೇವೆ. ಅವರೇ ನಿಜವಾಗಿಯೂ ವಂದನೀಯರಾಗಿದ್ದಾರೆ.

**ಧರ್ಮೋಪಬೃಂಹಣಾರ್ಥಂ ಸಮಿತಿಷು ಪ್ರವರ್ತಮಾನಸ್ಯ**
**ಪ್ರಾಣೇಂದ್ರಿಯಪರಿಹಾರಃ ಸಂಯಮಃ ||**

ಸರ್ವಾರ್ಥಸಿದ್ಧಿ.

ಸಂಯಮದ ಲಕ್ಷಣ ಹೀಗಿದೆ.

ಅಹಿಂಸೆ–ಅಂದರೆ ಹಿಂಸೆಯ ತ್ಯಾಗವನ್ನು ಮಾಡಿ ದಯೆಯನ್ನು ಧರಿಸುವುದು, ಹಿತ ಮಿತ ಪ್ರಿಯವಾದ ಸತ್ಯವಚನವನ್ನು ಮಾತಾಡುವುದು

ಕುಶೀಲ ಬಿಡುವುದು, ಪರಿಗ್ರಹದ ತ್ಯಾಗವನ್ನು ಮಾಡುವುದು, ಇವು ಐದು ವ್ರತಗಳು. ಅಪ್ರತ್ಯಾಖ್ಯಾನವರಣ ಕರ್ಮದ ಕ್ಷಯೋಪಶಮವಾಗುವುದರಿಂದ ಪಂಚ ಅಣುವ್ರತಗಳನ್ನು ಪಾಲಿಸುವ ಬುದ್ಧಿಯಾಗುತ್ತದೆ. ಏಕದೇಶ ಹಿಂಸಾದಿಗಳನ್ನು ಬಿಡುವುದಕ್ಕೆ ದೇಶಸಂಯಮವೆಂದು ಹೆಸರು. ಮತ್ತು ಯಾರಿಗೆ ಅಪ್ರತ್ಯಾಖ್ಯಾನಾವರಣ ಮತ್ತು ಪ್ರತ್ಯಖ್ಯಾನಾವರಣ ಹೀಗೆ ಎರಡೂ ಕರ್ಮಗಳ ಕ್ಷಯೋಪಶಮವಾಗುತ್ತದೆಯೋ ಅವರಿಗೆ ಸಕಲ ಸಂಯಮ ಪ್ರಾಪ್ತವಾಗುತ್ತದೆ. ಆದುದರಿಂದ ಸಂಯಮದ ಪ್ರಾಪ್ತಿಯು ಬಹಳ ಕಷ್ಟದಿಂದ ಆಗುತ್ತವೆ. ಆದುದರಿಂದ ಭವ್ಯರೇ ! ಕಷಾಯಗಳನ್ನು ಜಯಿಸಿರಿ. ಕಷಾಯಗಳನ್ನು ಜಯಿಸದೆ ಸಂಯಮ ಆಗಲಾರದು. ಕಷಾಯವು ರತ್ನತ್ರಯಾತ್ಮಕ ಸಂಯಮ ಗುಣಗಳನ್ನು ಘಾತ ಮಾಡುತ್ತದೆ.

ಯಸ್ಮಾತ್ ಸ ಕಷಾಯಃ ಸನ್
ಹಂತ್ಯಾತ್ಮಾ ಪ್ರಥಮಮಾತ್ಮನಾತ್ಮಾನಂ
ಪಶ್ಚಾಜ್ಜಾಯೇತ ನ ವಾ
ಹಿಂಸಾ ಪ್ರಾಣ್ಯಂತರಾಣಾಂ ತು ||

ಪುರುಷಾರ್ಥಸಿಧ್ಯುಪಾಯ.

ಕಷಾಯಯುಕ್ತನಾದ ಜೀವನು ಮೊದಲು ಸ್ವತಃ ಅನೇಕ ಗುಣಗಳ ನಾಶವನ್ನು ಮಾಡುತ್ತಾನೆ. ನಂತರ ನಿರ್ದಯತೆಯಿಂದ ಅನೇಕ ತ್ರಸ ಸ್ಥಾವರ ಜೀವಗಳ ಹಿಂಸೆಯನ್ನು ಮಾಡುತ್ತಾನೆ. ಆದುದರಿಂದ ಈ ಕಷಾಯವನ್ನು ಪ್ರಯತ್ನ ಮಾಡಿ ಜಯಿಸಿರಿ. ಕಷಂತೀತಿ ಕಷಾಯಾಃ ಗುಣಗಳನ್ನು ನಾಶ ಮಾಡುವುದರಿಂದ ಅವುಗಳಿಗೆ ಕಷಾಯವೆಂದು ಹೆಸರು. ಭಗವಂತನಿಂದ ಹೇಳಲ್ಪಟ್ಟ ಏಕದೇಶ ಹಿಂಸೆಯ ತ್ಯಾಗವನ್ನು ಮಾಡಿ ಸಂಯಮವನ್ನು ಧರಿಸುವವರು ಶ್ರಾವಕರೆಂದೂ, ಸಂಪೂರ್ಣ ಹಿಂಸೆಯ

ತ್ಯಾಗವನ್ನು ಮಾಡಿ ಸಂಯಮವನ್ನು ಪಾಲಿಸುವವರು ಮಹಾವ್ರತಿಗಳೆಂದೂ ಹೇಳಲ್ಪಡುತ್ತಾರೆ.

ಪ್ರಾಣಿಪೀಡಾ ಪರಿಹಾರಾರ್ಥಂ ಸಮ್ಯಗಯನಂ ಸಮಿತಿಃ ॥

ಸರ್ವಾರ್ಥಸಿದ್ಧಿ.

( ೧ ) ಪ್ರಮಾದ ( ಆಲಸ್ಯವನ್ನು ) ಬಿಟ್ಟು ಮನವಚನಕಾಯದ ವಿಶುದ್ಧಿಯಿಂದ ಏಕೇಂದ್ರಿಯಾದಿ ಜೀವಗಳ ಮೇಲೆ ದಯೆಯನ್ನಿಟ್ಟು ನಾಲ್ಕು ಮೊಳ ಮುಂದೆ ಭೂಮಿಯನ್ನು ನೋಡಿ ನಡೆಯುವುದಕ್ಕೆ ಈರ್ಯಾ ಸಮಿತಿ ಎಂದು ಹೆಸರು.

( ೨ ) ಹಿತಮಿತ ಕಪಟರಹಿತ ವಚನವನ್ನು ಮಾತಾಡುವುದಕ್ಕೆ ಭಾಷಾಸಮಿತಿ ಎಂದು ಹೆಸರು.

( ೩ ) ದಿವಸದಲ್ಲಿ ಒಪ್ಪೊತ್ತು ಅಂತರಾಯ ಪಾಲಿಸಿ ಊಟ ಮಾಡುವುದಕ್ಕೆ ಏಷಣಾಸಮಿತಿ ಎಂದು ಹೆಸರು.

( ೪ ) ಯಾವುದಾದರೂ ಪದಾರ್ಥವನ್ನು ಇಡುವುದರಲ್ಲಿ, ತೆಗೆದು ಕೊಳ್ಳುವುದರಲ್ಲಿ ಯಾವ ಪ್ರಾಣಿಗಳಿಗೂ ಬಾಧೆಯಾಗದಂತೆ ವರ್ತಿಸುವುದು ಆದಾನನಿಕ್ಷೇಪಣ ಸಮಿತಿಯು.

( ೫ ) ಮಲಮೂತ್ರಾದಿಗಳ ವಿಸರ್ಜನೆಯಲ್ಲಿ ಬೇರೆ ಪ್ರಾಣಿಗಳಿಗೆ ಗ್ಲಾನಿ, ದುಃಖವಾಗದಂತೆ ಏಕಾಂತ ಸ್ಥಾನವಲ್ಲಿ ಮಲಮೂತ್ರ ವಿಸರ್ಜನೆ ಮಾಡುವುದು, ಇದು ಪ್ರತಿಷ್ಠಾಪನಾ ಸಮಿತಿ ಅಥವಾ ಉತ್ಸರ್ಗಸಮಿತಿ ಎಂದು ಹೇಳಲ್ಪಡುತ್ತದೆ.

ಈ ಐದು ಸಮಿತಿಗಳನ್ನು ಪಾಲಿಸಬೇಕು, ಹಿಂದಿಯಲ್ಲಿ ಈ ಅಭಿಪ್ರಾಯವನ್ನು ಒಂದು ಶ್ಲೋಕದಲ್ಲಿ ಹೀಗೆ ವ್ಯಕ್ತ ಮಾಡಿದ್ದಾರೆ.

ಕ್ರೋಧ ಭೋಡಕರ ಮಾನವಚ ತನ ಕರಿ
ಶುಪ್ಪ ಭಜೋ ಜಿನ ದಾವ ಭಲಾ ಪಾಯೊ
ಅವಸರ ಫೇರ ಮಿಲೇ ನಹೀ–
ಐಸಾ ಓ ಭಜನ ಸತಗುರು ಗಾಯೊ

ಐದು ಇಂದ್ರಿಯಗಳನ್ನು ವಶ ಮಾಡದೆ ಸಂಯಮದ ಪಾಲನೆಯಾಗುವುದಿಲ್ಲ. ಈ ವಿಷಯದಲ್ಲಿ ಭರತೇಶ್ವರವೈಭವದಲ್ಲಿ ಹೀಗೆ ಹೇಳಿದ್ದಾರೆ.

ಹವಣಿಸಿಕೊಳ್ಳಬೇಕಿಂದ್ರಿಯ ವರ್ಗವ–
ನನಿಚಲನಾಗಿರ ಬೇಕು
ಭುವನಕಿಂದಿನ ರಾಯ, ಸ್ವರ್ಗಕೆ ನಾಳಿನ
ದಿವಿಜೇಂದ್ರನೆನಿಸಿರಬೇಕು ||

ಐದು ಇಂದ್ರಿಯಗಳ ನಿಗ್ರಹವನ್ನು ಮಾಡಿ ನಿಶ್ಚಲ ರೀತಿಯಿಂದ ವ್ರತ ಪಾಲನೆ ಮಾಡುವವರು ಈ ಲೋಕದಲ್ಲಿಯೂ ಸುಖಿಯಾಗುತ್ತಾರೆ. ಮತ್ತು ಮುಂದಿನ ಭವದಲ್ಲಿ ಶುಭಗತಿಯನ್ನು ಹೊಂದುತ್ತಾರೆ. ಈ ಅಜ್ಞಾನೀ ಜೀವರು ಇಂದ್ರಿಯ ಸುಖಗಳನ್ನು ಸುಖವೆಂದು ತಿಳಿದು ಭೋಗಿಸುತ್ತಿರುವಾಗ ಅವರಿಗೆ ಅದು ರುಚಿಯಾಗುತ್ತದೆ. ಆದರೆ ಅಂತ್ಯದಲ್ಲಿ ವಿಷದ ಹಾಗೆ ದುಃಖವನ್ನು ಕೊಡುತ್ತದೆ.

ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಮೃತೋಪಮಂ |
ಪರಿಣಾಮೇ ವಿಷಮಿವ ತತ್ಸುಖಂ ನ ಸುಖಂ ಸ್ಮೃತಂ ||

ಇಷ್ಟೋಪದೇಶ.

ಆದುದರಿಂದ ಇಂದ್ರಿಯಗಳ ನಿಗ್ರಹವನ್ನು ಮಾಡುವುದು, ಇಂದ್ರಿಯಗಳನ್ನು ವಶಪಡಿಸಿಕೊಳ್ಳುವುದು, ಇದಕ್ಕೆ ಇಂದ್ರಿಯ ಸಂಯಮವೆಂದು ಹೇಳುತ್ತಾರೆ. ಈ ಸಂಯಮದ ಪ್ರಾಪ್ತಿಯು ಬಹಳ ಕಠಿಣವಾಗಿದೆ. ಕರ್ಮಭೂಮಿಯಲ್ಲಿಯೇ ಸಂಯಮವನ್ನು ಪರಿಪಾಲಿಸುವ ಶಕ್ತಿ ಇದೆ. ಸ್ವರ್ಗ

ದಲ್ಲಿ ನರಕದಲ್ಲಿ ಭೋಗಭೂಮಿಯಲ್ಲಿ ಮತ್ತು ತಿರ್ಯಂಚ ಗತಿಯಲ್ಲಿ ಸಂಯಮ ಧಾರಣೆಯಾಗುವುದಿಲ್ಲ. ಮನುಷ್ಯರಲ್ಲಿಯೇ ಸಂಯಮ ಪಾಲನೆಯ ಶಕ್ತಿ ಇದೆ. ಮನುಷ್ಯರಲ್ಲಿಯೂ ಸಂಯಮವನ್ನು ಧರಿಸಲಿಕ್ಕೆ ಉಚ್ಚ ಕುಲ ಬೇಕು.

ಅತೀವ ಮೂಲ್ಯಂ ನರಜನ್ಮ ಲಬ್ಧ್ವಾ
ಅಂಗೈರುಪಾಂಗೈ ಪರಿಪೂರ್ಣದೇಹಂ
ಶ್ರೇಷ್ಠಾರ್ಯಖಂಡಂ ಕುಲಜಾತಿಶುದ್ಧಿಂ
ರಸಾಯನಂ ವೈ ಜಿನಧರ್ಮಮೇವ ॥

ಬೋಧಾಮೃತ.

ಆದುದರಿಂದ ಭವ್ಯರೇ ! ಪೂರ್ವ ಜನ್ಮದಲ್ಲಿ ಅತ್ಯಂತ ಪುಣ್ಯವನ್ನು ಅರ್ಜಿಸಿದ್ದರಿಂದ ಈ ನರಜನ್ಮದ ಪ್ರಾಪ್ತಿಯಾಗಿದೆ. ಅದರಲ್ಲಿ ಸಮಸ್ತ ಅಂಗ ಉಪಾಂಗಗಳಿಂದ ಯುಕ್ತವಾದ ಶರೀರದ ಪ್ರಾಪ್ತಿಯಾಗಿದೆ. ಶ್ರೇಷ್ಠ ಆರ್ಯಖಂಡದಲ್ಲಿ ಉಚ್ಚಕುಲದಲ್ಲಿ ಉಚ್ಚ ಜಾತಿಯಲ್ಲಿ ಜನ್ಮವಾಗಿದೆ. ಅದರಲ್ಲಿ ಉತ್ತಮವಾದ ಜೈನಧರ್ಮವನ್ನು ಪಡೆದಿರುವಿರಿ. ಮ್ಲೇಚ್ಛ ಖಂಡದಲ್ಲಿ ಜನ್ಮವಾಗುತ್ತಿದ್ದರೆ ಅಲ್ಲಿ ಪುಣ್ಯ ಕಾರ್ಯವನ್ನು ಮಾಡುವ ಯಾವ ಸಾಧನವೂ ದೊರೆಯುತ್ತಿರಲಿಲ್ಲ. ಇಂಥಹ ಅಮೂಲ್ಯ ಸಾಮಗ್ರಿಯು ಪ್ರಾಪ್ತವಾದಾಗ್ಯೂ ತನ್ನ ಆತ್ಮನ ಕಲ್ಯಾಣ ಮಾಡಿಕೊಳ್ಳುವ ಭಾವನೆ ಯಾಗುವುದಿಲ್ಲ. ಆದುದರಿಂದ ಆತ್ಮಶುದ್ಧಿಯಾಗುವುದಿಲ್ಲ. ಅಂಥಹ ಜೀವರು ತಮ್ಮ ಅಕಲ್ಯಾಣವನ್ನು ಮಾಡಿಕೊಳ್ಳುವುದಿಲ್ಲ. ಹೀಗೆಂದು ತಿಳಿಯಬೇಕು.

ಶರೀರದ ಅವಯವಗಳು ಶುಭ ಲಕ್ಷಣಗಳಿಂದ ಯುಕ್ತವಾಗಿರಬೇಕು. ಸತ್ಸಂಗತಿ ಬೇಕು. ಆರೋಗ್ಯ ಬೇಕು. ಆರೋಗ್ಯವಿಲ್ಲದೆ ತಪಶ್ಚರಣೆಯಾಗಲಾರದು, ಮತ್ತು ಸಂಯಮ ಧಾರಣೆಯೂ ಆಗಲಾರದು. ಇದೆಲ್ಲಾ ಸಿಕ್ಕಿದರೂ ಸಂಯಮವನ್ನು ಧರಿಸಿ ಆತ್ಮಕಲ್ಯಾಣವನ್ನು ಮಾಡಿಕೊಳ್ಳುವ

ಭಾವನೆಯಾಗದಿದ್ದರೆ ಏನು ಪ್ರಯೋಜನ? ಅಪ್ರತ್ಯಾಖ್ಯಾನಾವರಣ ಕರ್ಮದ ಕ್ಷಯ ಮತ್ತು ಉಪಶಮವಾದರೆ ದೇಶಸಂಯಮವನ್ನು ಧರಿಸುವ ಇಚ್ಛೆಯಾಗುತ್ತದೆ. ಪ್ರತ್ಯಾಖ್ಯಾನ, ಅಪ್ರತ್ಯಾಖ್ಯಾನ ಎರಡೂ ಕರ್ಮಗಳ ಕ್ಷಯ ಅಥವಾ ಉಪಶಮವಾದರೆ ಸಕಲ ಸಂಯಮವನ್ನು ಧರಿಸುವ ಇಚ್ಛೆಯಾಗುತ್ತದೆ. ಸಂಯಮವನ್ನು ಪಾಲಿಸುವ ಇಚ್ಛೆಯಾಗುವುದು ಬಹಳ ಕಠಿಣವಾಗಿದೆ. ಮನೆಮನೆಯಲ್ಲಿ ಸಾಧುಗಳಾಗಲು ಸಾಧ್ಯವಿಲ್ಲ.

**ಸಾಧವೋ ನ ಹಿ ಸರ್ವತ್ರ ಚಂದನಂ ನ ವನೇ ವನೇ ||**

ಸುಭಾಷಿತಾವಲಿ.

ಹಾಗೆಯೇ ಮಲಯಾಗಿರಿಯ ಚಂದನವು ಎಲ್ಲಾ ಕಾಡಿನಲ್ಲಿ ದೊರಿಯುವುದು ದುರ್ಲಭ. ಯಾರ ಪುಣ್ಯೋದಯ ಅಥವಾ ಯಾರ ಮುಂದಿನ ಗತಿಯು ಒಳ್ಳೆಯದಾಗುವುದಿದೆಯೋ ಅವರಿಗೇನೇಯೇ ಸಾಧುವಾಗಬೇಕೆಂಬ ಭಾವನೆಯಾಗುತ್ತದೆ. ಅಪ್ರತ್ಯಾಖ್ಯಾನಾವರಣ ಕರ್ಮದ ಉದಯವಿದ್ದರೆ ವ್ರತಗಳನ್ನು ಧರಿಸುವ ಭಾವನೆಯಾಗುವುದಿಲ್ಲ. ಸಾಧು ಶಬ್ದದ ಅರ್ಥವೇ ಹೀಗಿದೆ

**ಆತ್ಮಹಿತಂ ಸಾಧಯಂತೀತಿ ಸಾಧವಃ ||**

ಸುಭಾಷಿತಾವಲಿ

ಆತ್ಮಹಿತವನ್ನು ಸಾಧಿಸಿಕೊಳ್ಳುವವರಿಗೆ ಸಾಧುಗಳೆಂದು ಹೇಳುತ್ತಾರೆ. ಸಾಧುಗಳ ಸಂಗತಿಯು ಪ್ರಾಪ್ತವಾಗುವುದು ದುರ್ಲಭವಾಗಿದೆ. ಸಾಧುಗಳು ಆತ್ಮಹಿತವನ್ನು ಸಾಧಿಸಿಕೊಳ್ಳುತ್ತಾರೆ ಮತ್ತು ಬೇರೆಯವರ ಹಿತವನ್ನು ಮಾಡಲೂ ಪ್ರಯತ್ನ ಮಾಡುತ್ತಾರೆ. ಆದುದರಿಂದಲೇ ಅವರು ಪೂಜ್ಯರೆಂದು ಹೇಳಲ್ಪಡುತ್ತಾರೆ.

**ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾಹಿ ಸಾಧವಃ**<br>**ಕಾಲೇನ ಫಲತಿ ತೀರ್ಥಂ ಸದ್ಯಃ ಸಾಧುಸಮಾಗಮಃ ||**

ಸುಭಾಷಿತಾವಲಿ.

ಸಾಧುಗಳು ತೀರ್ಥರೂಪರಾಗಿರುತ್ತಾರೆ. ಆದುದರಿಂದ ಅವರ ದರ್ಶನದಿಂದ ಪುಣ್ಯದ ಪ್ರಾಪ್ತಿಯಾಗುತ್ತದೆ ತೀರ್ಥದ ದರ್ಶನದಿಂದ ಕಾಲಾಂತರದಲ್ಲಿ ಫಲವು ದೊರೆಯುತ್ತದೆ. ಆದರೆ ಸಾಧುಗಳ ಸಹವಾಸದಿಂದ ತತ್ಕಾಲ ಫಲವು ದೊರೆಯುತ್ತದೆ. ಸಾಧುಗಳು ತೀರ್ಥಂಕರರಿಂದ ಹೇಳಲ್ಪಟ್ಟ ತೀರ್ಥಸ್ವರೂಪವಾದ ಅನುಭವಾತ್ಮ ರಸವನ್ನು ಯಾವಾಗಲೂ ಪಾನ ಮಾಡುತ್ತಿರುತ್ತಾರೆ. ತನ್ನ ಆತ್ಮನ ಅನುಭವದಲ್ಲಿ ಮಗ್ನರಾಗಿರುತ್ತಾರೆ. ತನ್ನ ಸ್ವರೂಪದಲ್ಲಿ ಲೀನರಾಗುತ್ತಾರೆ. ಸ್ವಸ್ವರೂಪದಲ್ಲಿ ತನ್ಮಯರಾಗಿರುತ್ತಾರೆ. ತನ್ನ ಸ್ವಸ್ವರೂಪದಲ್ಲಿ ಆಡುತ್ತಿರುತ್ತಾರೆ. ತನ್ನ ಆತ್ಮನ ಶುದ್ಧ ಅನುಭವವನ್ನು ಪಡೆಯುತ್ತಿರುತ್ತಾರೆ. ತಮ್ಮ ಸಂಯಮದಿಂದ ಸ್ವಲ್ಪವೂ ವಿಚಲಿತರಾಗುವುದಿಲ್ಲ. ಆದುದರಿಂದ ಸಾಧುಗಳು ವಂದನೀಯರಾಗಿರುತ್ತಾರೆ. ಪರಮಾನಂದ ಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ.

**ಸದಾನಂದಮಯಂ ಜೀವಂ ಯೋ ಜಾನಾತಿ ಸ ಪಂಡಿತಃ ।**
**ಸ ಸೇವತೇ ನಿಜಾತ್ಮಾನಂ ಪರಮಾನಂದಕಾರಣಂ ॥**

ಯಾವ ಯೋಗಿಗಳು ಈ ಜೀವನನ್ನು ಸದಾ ಆನಂದಮಯನಾಗಿದ್ದಾನೆಂದು ತಿಳಿಯುತ್ತಾರೆಯೋ ಅವರೇ ಪಂಡಿತರು, ಅಂದರೆ ಸಮ್ಯಗ್ಜ್ಞಾನಿಗಳು. ಮತ್ತು ಅವರೇ ತಮಗೆ ಉತ್ತಮವಾದ ಆನಂದವು ಪ್ರಾಪ್ತಿಯಾಗಲೆಂಬ ಉದ್ದೇಶದಿಂದ ತಮ್ಮ ಆತ್ಮನ ಸೇವೆಯನ್ನು ಮಾಡುತ್ತಾರೆ. ಸ್ವಸ್ವರೂಪದಲ್ಲಿರುವ ಕಾರಣ ಪ್ರತಿ ಸಮಯದಲ್ಲಿ ತಮ್ಮ ಕರ್ಮದ ನಿರ್ಜರೆಯನ್ನು ಮಾಡಿಕೊಳ್ಳುತ್ತಾರೆ. ಅವರಿಗೆ ಜನ್ಮ ಮರಣದ ಚಕ್ರವು ಕಡಿಮೆಯಾಗುತ್ತದೆ. ಅಂಥಹವರಿಗೇನೇಯೋ ಈ ಪ್ರಕಾರದ ಭಾವನೆಯಾಗುತ್ತದೆ. ಲಘು ಕರ್ಮಿಗಳಿಗೇನೆಯೋ ಅಂದರೆ ಕರ್ಮದಿಂದ ಬೇಗ ಬಿಡುಗಡೆ ಹೊಂದುವವರಿಗೇನೆಯೋ ಇಂಥಹ ಪರಿಣಾಮವಾಗುತ್ತದೆ.

ಸ್ವರ್ಗ ಸಭೆಯಲ್ಲಿ ಒಬ್ಬ ದೇವನು ಕೇಳಿದನ         ನರಲೋಕದಲ್ಲಿ ದೃಢ ಸಂಯಮವನ್ನು ಧರಿಸುವವರು ಯಾರು ಇದ್ದಾರೆಂದು, ಆಗ

ದೇವೇಂದ್ರನು ಹೇಳುತ್ತಾನೆ ಭಾವಲಿಂಗಿ ಮುನಿಗಳು ನಾಲ್ಕು ಪ್ರಕಾರದ ಉಪಸರ್ಗಗಳು ಬಂದರೂ ತನ್ನ ಸಂಯಮದಿಂದ ವಿಚಲಿತರಾಗದೆ ಸ್ವಸ್ವರೂಪದಲ್ಲಿ ಮಗ್ನರಾಗಿರುತ್ತಾರೆ. ಆಗ ಒಬ್ಬ ಭಾವಲಿಂಗಿ ಮುನಿಯ ಪರೀಕ್ಷೆಯನ್ನು ಮಾಡುವದಕ್ಕೋಸ್ಕರವಾಗಿ ಆ ದೇವನು ಅಪ್ಸರೆಯ ರೂಪವನ್ನು ಧರಿಸಿ ಆ ಮುನಿಯು ತಪಶ್ಚರ್ಯೆಯನ್ನು ಮಾಡುತ್ತಿರುವ ಕಾಡಿಗೆ ಬಂದನು.

ಮುನಿಗಳ ಧ್ಯಾನವನ್ನು ನಷ್ಟ ಮಾಡಲು ಆ ಅಪ್ಸರೆಯು ಅನೇಕ ವಿಧದಿಂದ ಪ್ರಯತ್ನಿಸಿದಳು. ಕಡೆಗೆ ಆ ಮುನಿಗೆ ಆಲಿಂಗನೆಯನ್ನು ಕೊಟ್ಟು ನಾನಾ ವಿಧದಿಂದ ಕಾಮಚೇಷ್ಟೆಯನ್ನು ಮಾಡಿದರೂ ಆ ಮುನಿಯು ತನ್ನ ಧ್ಯಾನದಿಂದ ವಿಚಲಿತನಾಗಲಿಲ್ಲ.

ರಂಭೆಯೆ ಬಂದು ತಾಂ ಕೊರಲನಪ್ಪಿದೊಡಂ ಪುಳಕಂಗಳಾಗದೇ
ಕುಂಭಿ ಚಮೂರು ಬೃಂಹಿಸುತೆ ಗರ್ಜಿಸುತಂ ಬರೆ ಬಲ್ಪುಗುಂದದೇ
ಜೃಂಭಿಸಿ ಕಾಡುಗಿಚ್ಚು ಕವಿಯುತ್ತಿರೆ ಬುದ್ಧಿ ಕಲಂಕದೇ ಶಿಲಾ-
ಸ್ತಂಭವೆನಲ್ಕೆಯೆನ್ನೊಳಗೆ ನಿಲ್ವೆನದೆಂದಪರಾಜಿತೇಶ್ವರಾ ||

ಅಪರಾಜಿತ ಶತಕ.

ಆ ಅಪ್ಸರೆಯು ಮುನಿಯ ನಿಶ್ಚಲ ಆತ್ಮಧ್ಯಾನವನ್ನು ನೋಡಿ ಪುನಃ ಅವರನ್ನು ಚಲಾಯಮಾನ ಮಾಡುವುದಕ್ಕೋಸ್ಕರವಾಗಿ ಸಿಂಹ, ಆನೆ ಮೊದಲಾದ ಪ್ರಾಣಿಗಳ ರೂಪವನ್ನು ಧರಿಸಿ ಕರ್ಕಶ ಶಬ್ದಗಳನ್ನು ಮಾಡಿ ಮುನಿಯ ಮೇಲೆ ಉಪಸರ್ಗವನ್ನು ಮಾಡಿದಳು. ಆದರೂ ಮುನಿಗಳು ತನ್ನ ಸ್ವರೂಪದಲ್ಲಿಯೇ ಮೇರು ಪರ್ವತನಂತೆ ಸ್ಥಿರವಾಗಿದ್ದರು. ನಂತರ ಅವಳು ಆ ಮುನಿಗಳ ನಾಲ್ಕು ಕಡೆಗಳಿಂದಲೂ ಅಗ್ನಿಯನ್ನು ಪ್ರಜ್ವಲಿಸಿದಳು. ಅಗ್ನಿಯ ಸ್ಪರ್ಶವಾದಾಗ್ಯೂ ಅವರು ತನ್ನ ಸ್ವರೂಪದಲ್ಲಿ ಕಲ್ಲಿನ ಬೊಂಬೆಯಂತೆ ನಿಶ್ಚಲವಾಗಿ ಕುಳಿತುಕೊಂಡಿದ್ದರು. ಅದನ್ನು ನೋಡಿ

ಆ ದೇವನಿಗೆ ಬಹಳ ಸಂತೋಷವಾಯಿತು. ಮುನಿಗಳ ಸ್ತುತಿಯನ್ನು ಮಾಡಿ ಅವರ ಮೇಲೆ ಪುಷ್ಪವೃಷ್ಟಿ ಮಾಡಿ ಹೋಗುತ್ತಿರುವಾಗ ಮುನಿಗಳ ಪ್ರಶಂಸೆ ಮಾಡಿ ಹೋದನು. ಈ ಪ್ರಕಾರ ದೃಢ ಸಂಯಮ ಪಾಲಿಸಿದ್ದರಿಂದ ಆ ಮುನೀಶ್ವರರು ದೇವತೆಗಳಿಂದಲೂ ವಂದನೀಯರಾದರು. ಆದುದರಿಂದ ಭವ್ಯರೇ ! ಅವರಂತೆಯೇ ನೀವೂ ನಿರ್ದೋಷವಾದ ಸಂಯಮವನ್ನು ಪರಿಪಾಲಿಸಿ ಆತ್ಮಕಲ್ಯಾಣವನ್ನು ಮಾಡಿ ಕೊಳ್ಳಿರಿ. ಇದು ಜಿನೇಶ್ವರರ ವಚನವಾಗಿದೆ. ಆತ್ಮಸ್ವರೂಪದ ಮರ್ಮವನ್ನು ತಿಳಿಯದೆ ಎಷ್ಟು ತಪಶ್ಚರ್ಯೆಯನ್ನು ಮಾಡಿದರೂ, ಅನೇಕ ವಿಧದಿಂದ ಶರೀರಕ್ಕೆ ಕಷ್ಟ ಕೊಟ್ಟರೂ, ಏನೂ ಪ್ರಯೋಜನವಿಲ್ಲ. ಮನಸ್ಸಿನ ವಿಚಾರಗಳನ್ನು ಜಯಿಸಬೇಕು. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಬೇಕು. ಪ್ರಾಣಿ ಸಂಯಮವನ್ನು ಪಾಲಿಸಬೇಕು. ಷಟ್ ಕಾಯ ಜೀವಗಳ ಮೇಲೆ ದಯೆಯನ್ನು ಧರಿಸಬೇಕು ಮನಸ್ಸಿನ ವಿಷಯವಾಸನೆಗಳನ್ನು ದೂರ ಮಾಡಬೇಕು. ಇದೆಲ್ಲಾ ಇಲ್ಲದಿದ್ದರೆ ಅವನು ಹೊರಗಿನಿಂದಲೇ ಸಾಧುವೆಂದು ಹೇಳಬೇಕಾಗುತ್ತದೆ. ದ್ರವ್ಯಲಿಂಗೀ ಸಾಧುವು ಅನೇಕ ಸಾರಿ ಸಂಯಮವನ್ನು ಧರಿಸಿ ಮೇರುಪರ್ವತದಷ್ಟು ಪ್ರಮಾಣವಾದ ಪಿಂಛಿ ಕಮಂಡಲುಗಳನ್ನು ಧರಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಆದರಿಂದ ಆತ್ಮಸಿದ್ಧಿಯಾಗಲಿಲ್ಲ.

ಜಟಿಲೋ ಮುಂಡಿತ ಲುಶ್ಚಿತಕೇಶಃ
ಕಾಷಾಯಾಂಬರಬಹುಕೃತವೇಷಃ
ಪಶ್ಯನ್ನಪಿ ನ ಚ ಪಶ್ಯತಿ ಮೂಢ
ಉದರನಿಮಿತ್ತಂ ಬಹುಕೃತವೇಷಃ ||

ಮನುಷ್ಯನು ತನ್ನ ಜಟೆಯನ್ನು ಬೆಳೆಸುತ್ತಾನೆ, ಮುಂಡನ ಮಾಡಿಕೊಳ್ಳುತ್ತಾನೆ. ಕೂದಲುಗಳನ್ನು ಕೈಯಿಂದ ತೆಗೆದುಕೊಳ್ಳುತ್ತಾನೆ. ಕಾವಿ ವಸ್ತ್ರವನ್ನು ಧರಿಸುತ್ತಾನೆ. ಆದರೆ ಆತ್ಮಜ್ಞಾನವನ್ನು ಪಡೆಯುವು

ದಿಲ್ಲ. ಆ ಮೂರ್ಖನು ಕೇವಲ ಹೊಟ್ಟೆ ತುಂಬಿಕೊಳ್ಳುವುದಕ್ಕೋಸ್ಕರವಾಗಿ ಅನೇಕ ವೇಷಗಳನ್ನು ಧರಿಸುತ್ತಾನೆ.

ಒಬ್ಬ ಭಾವಲಿಂಗಿ ಮುನಿಗಳು ತನ್ನ ಸಹೋದರನು ಸಂಸಾರ ದಲ್ಲಿ ಪರಿಭ್ರಮಣೆಯನ್ನು ಮಾಡುತ್ತಿದ್ದಾನೆ. ಅವನನ್ನು ಸಾರ ದಿಂದ ಬಿಡಿಸಿ ಸಂಯಮ ಧಾರಣೆಯನ್ನು ಮಾಡಿಸಬೇಕೆಂಬ ಭಾವನೆ ಯಿಂದ ಅವನ ಊರಿಗೆ ಹೋದರು. ಇಷ್ಟರಲ್ಲಿ ತಮ್ಮನ ಮದುವೆ ಯಾಗಿತ್ತು. ಅಲ್ಲಿ ಹೋಗಿ ತನ್ನ ತಮ್ಮನನ್ನು ಕರೆಯಿಸಿದರು. ಮತ್ತು ಧರ್ಮದ ಉಪದೇಶವನ್ನು ಕೊಟ್ಟರು. ಆ ಸಮಯದಲ್ಲಿ ಆ ತಮ್ಮನಿಗೆ ಹೀಗೆ ವಿಚಾರ ಬಂತು. ನನ್ನ ಮದುವೆಯು ಸದ್ಯವೇ ಆಗಿದೆ. ನಾವು ಪತಿ–ಪತ್ನಿಗಳು ಕೂಡಿ ಆಹಾರದಾನವನ್ನು ಕೊಟ್ಟರೆ ಬೇಗನೇ ಪುತ್ರ ಜನ್ಮವಾಗಬಹುದು. ಈ ಭಾವನೆಯಿಂದ ಅವರು ಮುನಿಗಳಿಗೆ ಆಹಾರ ದಾನವನ್ನು ಕೊಟ್ಟರು. ಮುನಿಗಳು ಅಲ್ಲಿಂದ ಆಹಾರ ಮಾಡಿ ತಮ್ಮ ನಿವಾ ಸಸ್ಥಾನವಾದ ಕಾಡಿನಕಡೆ ಹೊರಟರು. ಅವರ ಕಮಂಡಲು ತೆಗೆದುಕೊಂಡು ಸ್ವಲ್ಪ ದೂರ ಕಳುಹಿಸಿ ಬರೋಣವೆಂದು ಅವನೂ ಹೊರಟನು. ಆದರೆ ದೂರ ಹೋದರೂ ಮುನಿಗಳು ಮುಂದೆಯೇ ಹೋಗುತ್ತಿದ್ದಾರೆ. ಆಗ "ಈ ಕಮಂಡಲು ತೆಗೆದು ಕೊಳ್ಳಿ, ಸ್ವಾಮಿ, ನಾನು ಊಟಕ್ಕೆ ಮನೆಗೆ ಹೋಗುತ್ತೇನೆಂದು" ಹೇಳಿದರೂ ಮುನಿಗಳು ಕೇಳಿದರೂ, ಕೇಳದಂತೆ ಮಾಡಿ ಮುಂದೆ ನೋಡಿ ನಡೆಯುತ್ತಿದ್ದರು. ಇವನಿಗೆ ಮನಸ್ಸಿನಲ್ಲಿ ಅನೇಕ ವಿಚಾರಗಳು ಬರತೊಡಗಿದವು. ಈ ಮುನಿಗಳು ನಾನು ಹೇಳಿ ದ್ದನ್ನು ಕೇಳುವುದಿಲ್ಲ. ನಾನು ಕಮಂಡಲು ಎಲ್ಲಿ ಇಟ್ಟು ಹೋಗಲಿ. ನನ್ನ ಹೆಂಡತಿಯು ನನ್ನ ಹಾದಿಯನ್ನು ನೋಡುತ್ತಿರಬೇಕು. ನಾನು ಬಂದದ್ದೇ ತಪ್ಪಾಯಿತು, ಇಲ್ಲ, ಇವರಿಗೆ ಆಹಾರ ಕೊಟ್ಟದ್ದೇ ತಪ್ಪಾಯಿತು. ಎಂದು ಅನೇಕ ಸಂಕಲ್ಪ ವಿಕಲ್ಪಗಳನ್ನು ಮಾಡಿ ಅವರೊಡನೆ ಹೋಗುತ್ತಿದ್ದನು. ಮುನಿಗಳು ಸೀದಾ ವನಕ್ಕೆ ಹೋಗಿ ತಮ್ಮ ಸಂಘದ ಗುರುಗಳಿಗೆ ನಮ

ಸ್ಕಾರ ಮಾಡಿ, ಗುರುದೇವ ! ಈ ಶ್ರಾವಕನು ದೀಕ್ಷೆ ತೆಗೆದುಕೊಳ್ಳಲಿಕ್ಕೋ ಸ್ಕರವಾಗಿ ನನ್ನೊಡನೆ ಬಂದಿದ್ದಾನೆ. ತಾವು ದಯವಿಟ್ಟು ಇವನಿಗೆ ದೀಕ್ಷೆ ಕೊಡಿರಿ. ಎಂದು ಹೇಳಲು ಗುರುಗಳು ಅವನಿಗೆ ಕ್ಷುಲ್ಲಕ ದೀಕ್ಷೆಯನ್ನು ಕೊಟ್ಟರು. ಮನಸ್ಸಿಲ್ಲದೆ ತೆಗೆದುಕೊಂಡ ಆ ದೀಕ್ಷೆಯು ಅವನಿಗೆ ಭಾರಭೂತವಾಗಿ ' ಈ ಪಾಪಿ ಮುನಿಯು ನನಗೆ ದೀಕ್ಷೆಯೇ ಕೊಡಿಸಿ ಕಾವಿ ಬಟ್ಟೆ ಧರಿಸಿ ಬಿಟ್ಟನಲ್ಲಾ. ನನ್ನ ಇಚ್ಛೆ ಇರಲಿಲ್ಲ. ನನ್ನ ಹೆಂಡತಿಯು ನನ್ನನ್ನು ಬಿಟ್ಟು ಎಷ್ಟು ದುಃಖ ಪಡುತ್ತಿದ್ದಾಳೋ ಏನೋ ? ' ಎಂದು ವಿಚಾರ ಮಾಡಿಕೊಂಡು ರೌದ್ರ ಧ್ಯಾನದಲ್ಲಿಯೇ ಸಮಯ ಕಳೆಯುತ್ತಿದ್ದನು.

ಶಾಂತ್ಯಾ ವಿಹೀನೋ ನ ಜಪಸ್ತಪೋಪಿ
ವ್ರತೋಪವಾಸೋಪಿ ನ ಭಾತಿ ಲೋಕೇ
ಸೂರ್ಯೇಣ ಹೀನಂ ನ ದಿನಂ ನ ಭಾತಿ,
ಚಾರಿತ್ರಹೀನೋ ನ ಚ ಭಾತಿ ಸಾಧುः ||

ಬೋಧಾಮೃತ.

ಹೀಗೆ ಅವನು ಹೊರಗಿನಿಂದ ಸಂಯಮಿಯಾದನು. ಆದರೆ ಸಂತೋಷ ಮತ್ತು ಶಾಂತಿ ಇಲ್ಲದೆ ಎಷ್ಟು ಜಪ ತಪಗಳನ್ನು ಮಾಡಿದರೂ, ಉಪವಾಸ ಮೊದಲಾದ ಬಾಹ್ಯ ಸಂಯಮಗಳನ್ನು ಪಾಲಿಸಿದರೂ, ಆ ಸಂಯಮಿಗೆ ಶೋಭೆ ಇಲ್ಲ. ಹೇಗೆ ಸೂರ್ಯಪ್ರಕಾಶವಿಲ್ಲದೆ ದಿವಸಕ್ಕೆ ಶೋಭೆ ಇಲ್ಲವೋ ಹಾಗೆಯೇ ಚಾರಿತ್ರವಿಲ್ಲದೆ ಸಾಧುಗಳಿಗೆ ಶೋಭೆ ಇಲ್ಲ. ಹನ್ನೆರಡು ವರ್ಷಗಳವರೆಗೆ ಹೀಗೆಯೇ ತನ್ನ ಹೆಂಡತಿಯನ್ನೇ ಸ್ಮರಿಸುತ್ತಾ ಸಮಯ ಕಳೆದರು.

ಹಿಂಸಾರಂಭ ನ ಸೋಡೀ ತೇವೀ ಜೋ ಚಿರಪರಿಗ್ರಹಾ ಜೋಡೀ
ಗೋಡೀ ವಿಷಯಸುಖಾಚೀ, ಸಂಸಾರಭ್ರಮಣ ಜ್ಯಾ ಸದಾಪಾಡೀ

ಹನ್ನೆರಡು ವರ್ಷಗಳ ವರೆಗೆ ದ್ರವ್ಯ ಸಂಯಮವನ್ನು ಪಾಲಿಸಿದರೂ ಅವನಿಗೆ ಆತ್ಮಜ್ಞಾನವಾಗಲಿಲ್ಲ. ಚಾರಿತ್ರ ಮೋಹನೀಯ ಕರ್ಮದ ಉದ

ಯದಿಂದ ಅವನು ಭಾವಸಂಯಮವನ್ನು ಪಾಲಿಸಲು ಸಾಧ್ಯವಾಗಲಿಲ್ಲ. ಗುರುಗಳು ಅವನಿಗೆ ' ನೀನು ದೀಕ್ಷೆ ತೆಗೆದುಕೊಂಡು ೧೨ ವರ್ಷಗಳಾದವು ಆದುದರಿಂದ ನೀನು ಏಕಾಕಿಯಾಗಿ ವಿಹಾರ ಮಾಡಬಹುದು. ಎಂದು ಆಜ್ಞೆಯನ್ನು ಕೊಟ್ಟರು. ಗುರುಗಳ ಆಜ್ಞೆಯನ್ನು ಪಡೆದು ಅವನು ಏಕಾಕಿಯಾಗಿ ವಿಹಾರ ಮಾಡುತ್ತಿರುವಾಗ ತನ್ನ ಹೆಂಡತಿಯು ನೆನಪಾಯ್ತು. ತನ್ನ ಊರಿಗೆ ಹೋದ. ಅಲ್ಲಿ ಜೈನ ಮಂದಿರದಲ್ಲಿ ದರ್ಶನ ಮಾಡಿ ಅಲ್ಲಿಯ ಪುಜಾರಿಯೊಡನೆ ತನ್ನ ಹೆಂಡತಿಯ ಹೆಸರು ಹೇಳಿ ವಿಚಾರ ಮಾಡ ತೊಡಗಿದನು. ಅವಳು ಈಗ ಎಲ್ಲಿ ಇದ್ದಾಳೆ. ತನ್ನ ತಾಯಿಯ ಮನೆಗೆ ಹೋಗಿದ್ದಾಳೋ ಅಥವಾ ಇಲ್ಲಿಯೇ ಇದ್ದಾಳೆಯೋ ಎಂಬೀತ್ಯಾದಿ ಪ್ರಶ್ನೆಗಳಿಂದ ಅವಳ ವಿಷಯದಲ್ಲಿ ಎಲ್ಲಾ ವಿಷಯಗಳನ್ನು ಕೇಳ ತೊಡಗಿದನು. ಆ ಸಮಯದಲ್ಲಿ ಅವನ ಹೆಂಡತಿಯು ಅದೇ ಮಂದಿರದಲ್ಲಿ ಪೂಜೆ ಮಾಡುತ್ತಿದ್ದಳು. ತನ್ನ ಸಂಬಂಧವಾದ ಎಲ್ಲಾ ಪ್ರಶ್ನೆಗಳನ್ನು ಕೇಳಿ ಅವಳು ಆ ಸಂಯಮಿಗೆ ನಮಸ್ಕಾರವನ್ನು ಮಾಡಿದಳು. ಮತ್ತು ತನ್ನ ಮನಸ್ಸಿನಲ್ಲಿ " ಇವನು ಹನ್ನೆರಡು ವರ್ಷಗಳ ವರೆಗೆ ಸಂಯಮಿಯಾದರೂ ಆತ್ಮಶುದ್ಧಿಯನ್ನು ಮಾಡಿಕೊಳ್ಳದೆ ನನ್ನ ವಿಷಯವಾಗಿಯೇ ಧ್ಯಾನ ಮಾಡುತ್ತಿದ್ದಾನೆ.

ನ ಭಾತಿ ಜೀವೋ ಜಿನಧರ್ಮಬಾಹ್ಯಃ
ಸ್ವಾತ್ಮಾನುಭೂತ್ಯಾ ಸ್ವರಸೇನ ಶೂನ್ಯಃ
ಕ್ರಿಯಾಕಲಾಪಾ ವಿಫಲೈವ ತಸ್ಯ
ಭಕ್ತಿಶ್ಚ ಶಕ್ತಿಶ್ಚ ಭವೇದ್ವಿನಷ್ಟಾ

ಬೋಧಾಮೃತ.

ಯಾವ ಮನುಷ್ಯನು ಸಂಯಮಿಯಾಗಿಯೂ ಜೈನಧರ್ಮದಿಂದ ರಹಿತನಾಗಿದ್ದಾನೆಯೋ, ಆತ್ಮಾನುಭವದ ರಸದಿಂದ ದೂರವಾಗಿದ್ದಾನೆಯೋ, ಅವನ ಸಂಯಮಕ್ಕೆ ಏನೂ ಶೋಭೆ ಇಲ್ಲ. ಅವನ ಸಂಯಮವು ವ್ಯರ್ಥವಾಗಿದೆ. ಈ ಪ್ರಕಾರ ಅವನ ಸ್ತ್ರೀಯು ಮನಸ್ಸಿನಲ್ಲಿ ವಿಚಾರಮಾಡಿ

ಅವನಿಗೆ ಹೇಳ ತೊಡಗಿದಳು. ಯಾರ ವಿಷಯದಲ್ಲಿ ನೀವು ಚೌಕಶಿ ಮಾಡುತ್ತಿದ್ದೀರೋ ಆ ಸ್ತ್ರೀಯು ನಾನೇ ಆಗಿದ್ದೇನೆ, ನಿಮ್ಮ ಲಕ್ಷ ರೂಪ್ಯಾಯ ಆಸ್ತಿಯನ್ನು ನಾನು ಯಾರಿಗೂ ಕೊಡಲಿಲ್ಲ. ನನ್ನ ತಾಯಿಯ ಮನೆಯವರಿಗೂ ಕೊಡಲಿಲ್ಲ. ಅಲ್ಲದೆ ನನ್ನ ಇಂದ್ರಿಯ ಭೋಗಗಳಿಗೂ ಖರ್ಚು ಮಾಡಲಿಲ್ಲ. ನಿಮ್ಮ ಹೆಸರಿನಿಂದ ಒಂದು ಲಕ್ಷ ರೂಪ್ಯಾ ಖರ್ಚು ಮಾಡಿ ಈ ಜಿನಮಂದಿರವನ್ನು ಕಟ್ಟಿಸಿದ್ದೇನೆ. ಮತ್ತು ಇದರಲ್ಲಿ ಆದಿನಾಥ ತೀರ್ಥಕರರ ಮೂರ್ತಿಯನ್ನು ಪ್ರತಿಷ್ಠಿಸಿ ಸ್ಥಾಪಿಸಿದ್ದೇನೆ. ಮತ್ತು ನಾನು ಆತ್ಮ ಕಲ್ಯಾಣಕ್ಕೋಸ್ಕರವಾಗಿ ಏಳನೆಯ ಪ್ರತಿಮೆಯನ್ನು ತೆಗೆದುಕೊಂಡಿದ್ದೇನೆ. ನಿಮ್ಮ ಹಾದಿ ನೋಡುತ್ತಾ ಇದ್ದೇನೆ. ಮತ್ತು ಆದಷ್ಟು ಬೇಗ ದೀಕ್ಷೆ ತೆಗೆದುಕೊಳ್ಳುವ ವಿಚಾರದಲ್ಲಿದ್ದೇನೆ. ಸ್ವಾಮಿನ್ ! ನೀವು ಹನ್ನೆರಡು ವರ್ಷಗಳ ವರೆಗೆ ಸಂಯಮಿಯಾಗಿಯೂ ಈ ಜಡ ಇಂದ್ರಿಯ ಭೋಗಗಳ ವಿಷಯದಲ್ಲಿ ವಿಚಾರ ಮಾಡಲಿಲ್ಲ. ಹೇಗೆ ಅಜ್ಞಾನಿ ಮೂರ್ಖನ ಕೈಯಲ್ಲಿ ಚಿಂತಾಮಣಿ ರತ್ನ ಬಂದರೂ ಅವನು ಅದನ್ನು ಕಾಗೆಯನ್ನು ಓಡಿಸುವುದಕ್ಕೋಸ್ಕರ ಉಪಯೋಗಿಸುತ್ತಾನೆಯೋ ಹಾಗೆಯೇ ನಿಮ್ಮ ಗತಿಯಾಯಿತ್ತು.

ನಿಮಗೆ ಈ ದುರ್ಲಭವಾದ ಜೈನದೀಕ್ಷೆಯು ಮಹತ್ಪುಣ್ಯದ ಉದಯದಿಂದ ಲಭಿಸಿದೆ. ಆ ದೀಕ್ಷೆಯ ಉಪಯೋಗವನ್ನು ಆತ್ಮ ಕಲ್ಯಾಣಕ್ಕೋಸ್ಕರವಾಗಿ ಮಾಡಬೇಕು. ದುರುಪಯೋಗ ಮಾಡಿದರೆ ಬಹಳ ದೊಡ್ಡ ಪಾಪಕ್ಕೆ ಕಾರಣವಾಗುತ್ತದೆ. ವಿಷಯಾಂಧ ಪ್ರಾಣಿಗಳಿಗೆ ಕರ್ತವ್ಯ-ಅಕರ್ತವ್ಯದ ವಿವೇಕವಿರುವುದಿಲ್ಲ.

ವಿಷಯಾಸಕ್ತಚಿತ್ತಾನಾಂ ಗುಣಃ ಕೋ ವಾ ನ ನಶ್ಯತಿ
ನವೈದುಷ್ಯಂ ನ ಮಾನುಷ್ಯಂ ನಾಭಿಜಾತ್ಯಂ ನ ಸತ್ಯವಾಕ್

ಕ್ಷತ್ರಚೂಡಾಮಣಿ.

ಪಂಚೇಂದ್ರಿಯ ಸಂಬಂಧಿ ವಿಷಯಗಳಿಂದ ಕುರುಡರಾದವರಿಗೆ ತಾವು ಮಾಡುತ್ತಿರುವ ಕಾರ್ಯದಲ್ಲಿ ಯೋಗ್ಯಾಯೋಗ್ಯವನ್ನು ವಿಚಾರ ಮಾಡುವ ಶಕ್ತಿಯೂ ಇರುವುದಿಲ್ಲ. ಅವರಲ್ಲಿ ವಿನ್ರತೆ, ಮನುಷ್ಯತ್ವ, ಕುಲೀನತ್ವ ಮೊದಲಾದ ಎಲ್ಲಾ ಗುಣಗಳು ನಷ್ಟವಾಗುವವು.

ಈ ಪ್ರಕಾರದ ಶಾಸ್ತ್ರೋಕ್ತ ನೀತಿಪೂರ್ಣ ವಿನಯ ಯುಕ್ತವಾದ ಅವಳ ವಿಚಾರವನ್ನು ಕೇಳಿ ಅವನ ಹೃದಯದಲ್ಲಿದ್ದ ಕಾಮ ವಿಕಾರದ ಪರಿಣಾಮವು ದೂರವಾಯಿತು. ಆಗ ಉಪರತಿಯಾಗಿ ವಿಚಾರ ಮಾಡ ತೊಡಗಿದನು. ಮತ್ತು ನಾನು ಸಾಧುವಾಗಿಯೂ ವಿಚಾರವನ್ನು ಮಾಡದೆ ಸಂಯಮದಿಂದ ಭ್ರಷ್ಟನಾಗಿದ್ದೇನೆ. ನೀನು ಗೃಹಸ್ಥ ಅವಸ್ಥೆಯಲ್ಲಿ ಇದ್ದೂ ತತ್ವವಿಚಾರದಿಂದ ವಿರಕ್ತ ಪರಿಣಾಮವನ್ನು ಇಟ್ಟು ಸಂಯಮಿಯಾಗಿದ್ದೀಯೇ, ನೀನು ಧನ್ಯಳಾಗಿದ್ದೀ, ನನ್ನನ್ನು ನೀನು ದುರ್ಮಾರ್ಗದಿಂದ ಬಿಡಿಸಿ ಸನ್ಮಾರ್ಗದಲ್ಲಿ ಹಚ್ಚಿರುತ್ತೀ. ನಿನಗೆ ಧನ್ಯವಾದ.

ಸದ್ದರ್ಶನ ಚಾರಿತ್ರಾಪಾಸುನಿ ಹೋತಾ ಯದಾ ಕುಣೀ ಭ್ರಷ್ಟ
ಕರಣೇ ಸುಸ್ಥಿರ ತ್ಯಾತೆ ಮ್ಹಣತಿ ಸ್ಥಿತಿಕರಣ ಅಂಗ ತ್ಯಾ ಸ್ಪಷ್ಟ

ರತ್ನಕರಂಡ.

ಈ ರತ್ನತ್ರಯವು ಸಮ್ಯಗ್‌ದೃಷ್ಟಿ ಜೀವನ ಸ್ವಭಾವವಾಗಿದೆ. ಯಾರಾದರೂ ರತ್ನತ್ರಯ ಧರ್ಮದಿಂದ ಚ್ಯುತರಾಗುತ್ತಿದ್ದರೆ ಅವನನ್ನು ಪುನಃ ಆ ಮಾರ್ಗದಲ್ಲಿ ಸ್ಥಿರ ಮಾಡುವುದಕ್ಕೆ ಸ್ಥಿತೀಕರಣಅಂಗವೆಂದು ಹೇಳಲಾಗಿದೆ.

ಹೀಗೆ ವಿಚಾರ ಮಾಡಿ ಅವನು ವಿರಕ್ತಭಾವದಿಂದ ಅಲ್ಲಿಂದ ಹೊರಟು ಗುರುಗಳ ಕಡೆಗೆ ಹೋದನು. ಅಲ್ಲಿ ತನ್ನ ಮನಸ್ಸಿನ ಎಲ್ಲಾ ವಿಷಯಗಳನ್ನು ಹೇಳಿ ಪ್ರಾಯಶ್ಚಿತ್ತವನ್ನು ತೆಗೆದುಕೊಂಡನು. ಮತ್ತು ನಿರ್ದೋಷ ಮುನಿಯಾಗಿ ದೋಷರಹಿತವಾದ ಚಾರಿತ್ರವನ್ನು ಪರಿಪಾಲಿಸಿ ಆತ್ಮ ಕಲ್ಯಾಣವನ್ನು ಮಾಡಿಕೊಂಡನು.

ಆದುದರಿಂದ ಭವ್ಯರೇ ! ನಿರ್ದೋಷವಾದ ಸಂಯಮವನ್ನು ಪಾಲಿಸದಿದ್ದರೆ ಆತ್ಮಶುದ್ಧಿಯಾಗಲಾರದು. ಆದುದರಿಂದ ನೀವು ನಿರ್ಮಲ ಸಂಯಮವನ್ನು ಪರಿಪಾಲಿಸಿರಿ, ಮತ್ತು ಆತ್ಮಶುದ್ಧಿಯನ್ನು ಮಾಡಿಕೊಳ್ಳಿರಿ. ಇದು ಆಚಾರ್ಯರ ವಚನವಾಗಿದೆ. ಮನಸ್ಸು ಬಹಳ ಚಂಚಲವಾಗಿದೆ. ಇದರಲ್ಲಿ ಪ್ರತಿ ಸಮಯದಲ್ಲಿಯೂ ವಿಕಾರ ಉತ್ಪನ್ನವಾಗುತ್ತಿರುತ್ತದೆ. ಈ ವಿಷಯದಲ್ಲಿ ಭರತೇಶ್ವರನ ಜೀವನ ಘಟನೆಯನ್ನು ನೋಡಿರಿ.

ಭರತೇಶ್ವರನು ರಾಜ್ಯ ವೈಭವದಲ್ಲಿ ಇದ್ದರೂ ಕೂಡ ಮುನೀಶ್ವರರಂತೆ ಉದಾಸೀನನಾಗಿದ್ದು ಕರ್ಮನಿರ್ಜರೆಯನ್ನು ಮಾಡುತ್ತಿದ್ದನು. ಆ ಧ್ಯಾನ ಸಾಮರ್ಥ್ಯದಿಂದ ಅಂತ್ಯದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಅಂತರ್ಮುಹೂರ್ತ ಕಾಲದಲ್ಲಿ ಕೇವಲಜ್ಞಾನಿಯಾದನು. ಮನೆಯಲ್ಲಿದ್ದು ಏಕದೇಶ ಸಂಯಮವನ್ನು ಧಾರಣೆ ಮಾಡಬಹುದು. ಇಷ್ಟು ವೈಭವವಿದ್ದರೂ ಆ ಭೋಗಗಳಲ್ಲಿ ಆಸಕ್ತಿಯನ್ನು ಪಡೆಯದೆ ಮನೆಯಲ್ಲಿದ್ದರೂ ಕರ್ಮ ನಿರ್ಜರೆಯಾಗುತ್ತಿತ್ತು. ಈ ವಿಷಯದಲ್ಲಿ ಒಂದು ಸುಭಾಷಿತದಲ್ಲಿ ಹೀಗೆ ಹೇಳುತ್ತಾರೆ.

ವನೇಷು ದೋಷಾಃ ಪ್ರಭವಂತಿ ರಾಗಿಣಾಂ,
ಗೃಹೇಷು ಪಂಚೇಂದ್ರಿಯ ನಿಗ್ರಹಸ್ತಪ: ।
ಅಕುತ್ಸಿತೇ ಕರ್ಮಣಿ ಯ: ಪ್ರವರ್ತತೆ,
ನಿವೃತ್ತರಾಗಸ್ಯ ಗೃಹಂ ತಪೋವನಂ ॥

ಸುಭಾಷಿತಾವಲಿ.

ಯಾರು ತನ್ನ ಮನಸ್ಸನ್ನು ವಶ ಮಾಡಿಕೊಳ್ಳದೆ ಕಾಡಿನಲ್ಲಿ ಹೋಗಿ ತಪಶ್ಚರ್ಯವನ್ನು ಮಾಡುತ್ತಾರೆಯೋ ಆ ಮೋಹೀ ಜೀವರುಗಳ ಮನಸ್ಸಿನಲ್ಲಿ ಸದಾ ವಿಕಾರಗಳು ಉತ್ಪನ್ನವಾಗುತ್ತವೆ. ಯಾರು ತನ್ನ ಮನಸ್ಸನ್ನು ಜಯಿಸಿ, ಇಂದ್ರಿಯಗಳ ನಿಗ್ರಹವನ್ನು ಮಾಡಿ, ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುತ್ತಾರೆಯೋ ಅಂಥಹ ಮೋಹರಹಿತರಾದವರು ಮನೆಯಲ್ಲಿದ್ದರೂ

ಅವರಿಗೆ ಮನೆಯೇ ತಪೋವನವಾಗಿರುತ್ತದೆ. ಮನೆಯಲ್ಲಿರಲಿ ಅಥವಾ ಕಾಡಿನಲ್ಲಿರಲಿ, ಸಂಯಮವಿಲ್ಲದೆ ಜನ್ಮವನ್ನು ವ್ಯರ್ಥ ಮಾಡಬೇಡಿರಿ. ಯಥಾಶಕ್ತಿ ಸಂಯಮವನ್ನು ಪರಿಪಾಲಿಸಿರಿ. ಸಮ್ಯಕ್ತ್ವಸಹಿತವಾದ ಸಂಯಮವು ದೇವಗತಿಗೆ ಕಾರಣವಾಗಿರುತ್ತದೆ. ಸಮ್ಯಕ್ತ್ವವಿಲ್ಲದೆ ಮುನಿಯಾಗಿ ತಪಶ್ಚರಣೆ ಮಾಡಿದರೂ ಏನೂ ಪ್ರಯೋಜನವಿಲ್ಲ.

**ಸಮ್ಯದ್ದರ್ಶನ ಜ್ಯಾಚೆ ಶುಚಿತೋ ವ್ರತಹೀನಹೀ ಜರೀ ಅಸಲಾ**
**ಧೋಕಾ ತಥಾಪಿ ನುರತೋ ನರಕಗತೀಚಾ ತಯಾ ಪುನ್ಹಾ ಕಸಲಾ**

ರತ್ನಕರಂಡ.

ಯಾವನ ಸಮ್ಯಗ್ದರ್ಶನವು ಶುದ್ಧವಾಗಿದೆಯೋ ಅವನು ವ್ರತಹೀನನಾದಾಗ್ಯೂ ಅವನಿಗೆ ನರಕಗತಿಯಾಗುವ ಭಯವಿಲ್ಲ. ಸಮ್ಯಕ್ತ್ವವಿಲ್ಲದೆ ಎಷ್ಟು ಕಾಯಕ್ಲೇಶವನ್ನು ಮಾಡಿ ಸಂಯಮ ಪಾಲಿಸಿದರೂ, ಕ್ರೋಧ ಅಭಿಮಾನ, ಗರ್ವಗಳು ಹೋಗದಿದ್ದರೆ ಆ ಸಂಯಮವು ಮುಕ್ತಿಗೆ ಕಾರಣವಾಗಲಾರದು. ಈ ವಿಷಯದಲ್ಲಿ ಒಬ್ಬ ಮುನಿಯ ಕಥೆಯನ್ನು ಕೇಳಿರಿ.

ಒಬ್ಬ ಮುನೀಶ್ವರರು ಶಾಸ್ತ್ರದ ಅಧ್ಯಯನ ಮಾಡಿದ್ದರು ಅವರಿಗೆ ಅವರ ಗುರುಗಳು ಹೇಳಿದರು-ಶಿಷ್ಯ ! ಇಂದ್ರಿಯಗಳನ್ನು ವಶ ಮಾಡಿಕೊಳ್ಳಬೇಕು. ಸಂಯಮದ ವಿರಾಧನೆಯನ್ನು ಮಾಡಬಾರದು. ಮಾತಾಡುವಾಗ ಕೆಳಗೆ ನೋಡಿ ಮಾತಾಡಬೇಕು. ಈ ಪ್ರಕಾರ ದೈನಂದಿನದ ವ್ಯವಹಾರದ ವಿಷಯವಾಗಿ ಗುರುಗಳು ಅವರಿಗೆ ಅನೇಕ ಪ್ರಕಾರದ ಉಪದೇಶವನ್ನು ಕೊಡುತ್ತಿದ್ದರು. ಇದೆಲ್ಲವನ್ನು ಕೇಳಿ ಶಿಷ್ಯನಿಗೆ ಸ್ವಲ್ಪ ಕೋಪ ಬಂತು. ಸ್ವಲ್ಪ ಅಭಿಮಾನವೂ ಆಯ್ತು. ಅವನು ಉತ್ತರಿಸಿದನು. ಮಹಾರಾಜ ! ಮನಸ್ಸೇ ಪಾಪಕ್ಕೂ ಪುಣ್ಯಕ್ಕೂ ಕಾರಣವಾಗಿದೆ. ನಾನು ಹೇಗೆ ವ್ಯವಹಾರ ಮಾಡಿದರೂ ಮನಸ್ಸು ವಿಕೃತವಾಗುವುದಿಲ್ಲ. ನೀವು ದೊಡ್ಡ ತಪಸ್ವಿಗಳಾಗಿದ್ದರೂ ನಿಮ್ಮ ಮನಸ್ಸಿನಲ್ಲಿ ಇಂಥ ಸಂಕಲ್ಪಗಳೇಕೆ

ಬರುತ್ತವೆ. ಆ ಸಮಯದಲ್ಲಿ ಗುರುಗಳು ಏನೂ ಹೇಳಲಿಲ್ಲ. ಕೆಲವು ಸಮಯದ ನಂತರ ಶಿಷ್ಯನನ್ನು ಕರೆದು ವತ್ಸ! ನೀನು ವಿದ್ವಾಂಸನಾಗಿರುತ್ತೀ ಆದುದರಿಂದ ಇನ್ನು ಏಕಾಕಿಯಾಗಿ ವಿಹಾರ ಮಾಡಬಹುದೆಂದರು.

ಹೀಗೆ ಗುರುವಿನ ಆಜ್ಞೆಯನ್ನು ಪಡೆದು ಏಕಾಕಿಯಾಗಿ ವಿಹಾರ ಮಾಡುತ್ತಿರಲು ಒಂದು ಕಾಡಿನಲ್ಲಿ ಅವನ ಗುರು ಒಬ್ಬ ಸುಂದರ ಸ್ತ್ರೀಯ ರೂಪವನ್ನು ಧರಿಸಿ ಅಲ್ಲಿ ಬಂದರು. ಹಾಗೆಯೇ ಆ ತಪಸ್ವಿಯ ಎದುರಿನಲ್ಲಿ ಹಾವ ಭಾವ ವಿಲಾಸವಿಭ್ರಮಗಳಿಂದ ನೃತ್ಯ ಮಾಡ ಹತ್ತಿದರು. ಅದರಿಂದ ಆ ಮುನಿಯ ಮನಸ್ಸು ಚಂಚಲವಾಯಿತು.

ಈ ವಿಷಯದಲ್ಲಿ ಒಬ್ಬ ಸುಭಾಷಿತಕಾರರು ಹೀಗೆ ಹೇಳಿದ್ದಾರೆ. ' ಎಷ್ಟು ವಿದ್ಯೆಯನ್ನು ಪ್ರಾಪ್ತ ಮಾಡಿದರೂ, ಇಂದ್ರಿಯ ಸಂಯಮವನ್ನು ಪಾಲಿಸದಿದ್ದರೆ, ಭೇದವಿಜ್ಞಾನದಿಂದ ಆತ್ಮ ಚಿಂತನೆಯನ್ನು ಮಾಡದಿದ್ದರೆ ಆತ್ಮ ಸ್ವರೂಪವನ್ನು ನೋಡದಿದ್ದರೆ ಅವನು ಮೂರ್ಖನೆಂದೇ ಹೇಳಲ್ಪಡು ತ್ತಾನೆ. ಅವನಿಗೆ ವ್ಯವಹಾರವೆಂಬ ಕಣ್ಣಿಲ್ಲ. ಅವನು ಕಣ್ಣಿದ್ದರೂ ಕುರುಡ ನಂತೆ ಇರುತ್ತಾನೆ.

**ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ**
**ಲೋಚನಾಭ್ಯಾಂ ವಿಹೀನಸ್ಯ ದರ್ಪಣಂ ಕಿಂ ಕರಿಷ್ಯತಿ**

ಸುಭಾಷಿತಾವಲಿ.

ಕಣ್ಣಿಲ್ಲದ ಕುರುಡನಿಗೆ ಕನ್ನಡಿಯಿಂದೇನು ಪ್ರಯೋಜನ? ಹಾಗೆಯೇ ಎಷ್ಟು ಶಾಸ್ತ್ರಗಳನ್ನು ಓದಿದರೂ ಸಮ್ಯಗ್‌ಜ್ಞಾನವಿಲ್ಲದೆ ಇಂದ್ರಿಯ ವಿಷಯ ಜಾಲದಲ್ಲಿ ಸಿಕ್ಕಿಕೊಳ್ಳುವಾಗ ಶಾಸ್ತ್ರಪಠನದಿಂದೇನು ಪ್ರಯೋಜನ ? ಈ ಸ್ತ್ರೀಯ ನೃತ್ಯದಿಂದ ಮನಸ್ಸು ಚಂಚಲವಾಗಿ ಕಾಮಾಂಧನಾದನು. ಆ ಸಮಯದಲ್ಲಿ ಗುರುಗಳು ನಿಜರೂಪವನ್ನು ಪ್ರಕಟಿಸಿ ಹೇಳಿದರು. ವತ್ಸ! ೧೨ ವರ್ಷಗಳವರೆಗೆ ತಪಶ್ಚರ್ಯೆ ಮಾಡಿ ಏನು ಫಲವಾಯಿತು ? ಎಲ್ಲವೂ ವ್ಯರ್ಥವಾಯಿತಲ್ಲ ?

ವೈರಾಗ್ಯ ಬೋಧೈಃ ರಹಿತೋಽಹಿ ಸಾಧುಃ
ಲೋಕೇ ವೃತ್ತೈರ್ವಾ ದಯಯಾ ವಿಹೀನಃ ||

ಸುಭಾಷಿತಾವಲಿ,

ಇದನ್ನು ನೋಡಿ ಆ ಸಾಧುವು ಲಜ್ಜೆಯಿಂದ ಮತ್ತು ಪಶ್ಚಾತ್ತಾಪದಿಂದ ಗುರುಗಳಿಗೆ ನಮಸ್ಕಾರ ಮಾಡಿದನು. ಗುರುದೇವ, ನಾನು ನಿಮ್ಮ ವಚನವನ್ನು ಕೇಳಲಿಲ್ಲ. ಆದುದರಿಂದ ನನ್ನ ಕಡೆಯಿಂದ ಪಾಪಾಚರಣೆಯು ಸಂಭವಿಸಿತು. ಆ ಪಾಪಾಚರಣೆಯನ್ನು ಗುರುಗಳಲ್ಲದೆ ಯಾರಿಗೆ ಪರಿಹರಿಸಲು ಸಾಧ್ಯ ? ಇನ್ನು ಮುಂದೆ ಗುರುಗಳ ಆಜ್ಞೆಯನ್ನು ಉಲ್ಲಂಘಿಸಲಾರೆ ಎಂದು ನಿವೇದಿಸಿಕೊಂಡನು. ಇದನ್ನು ಕೇಳಿ ಗುರುಗಳಿಗೆ ದಯಾ ಬುದ್ಧಿಯು ಹುಟ್ಟಿತು. ಅವನಿಗೆ ಶಾಸ್ತ್ರೋಕ್ತ ರೀತಿಯಿಂದ ಪ್ರಾಯಶ್ಚಿತ್ತವನ್ನು ಕೊಟ್ಟು ಪಾಪದಿಂದ ಬಿಡಿಸಿದರು.

ಗುರವೋ ಬಹವಃ ಸಂತಿ ಶಿಷ್ಯ ವಿತ್ತಾಪಹಾರಕಾಃ
ದುರ್ಲಭಃ ಸ ಗುರುರ್ಲೋಕೇ ಶಿಷ್ಯಚಿತ್ತಾಪಹಾರಕಃ ||

ಸುಭಾಷಿತ.

ಈ ಕಾಲದಲ್ಲಿ ಶಿಷ್ಯರ ಧನಹರಣೆಯನ್ನು ಮಾಡುವ ಗುರುಗಳು ಬಹಳ ಸಿಗುತ್ತಾರೆ, ಆದರೆ ಅವರನ್ನು ದುರ್ಮಾರ್ಗದಿಂದ ಬಿಡಿಸಿ ಸನ್ಮಾರ್ಗದಲ್ಲಿ ಹಚ್ಚಿ ಆತ್ಮೋದ್ಧಾರವನ್ನು ಮಾಡಿಸುವ ಗುರುಗಳು ಸಿಗುವುದೆಂದರೆ ಬಹಳ ಕಠಿಣ. ಆದುದರಿಂದ ಭವ್ಯರೇ ! ನೀವು ಸದ್ಗುರುಗಳ ಸಂಗತಿಯನ್ನು ಅವರ ಸೇವೆಯನ್ನು ಮಾಡಿರಿ. ಮತ್ತು ತಮ್ಮ ಮನಸ್ಸಿನ ಪಾಪ ವಿಕಾರಗಳನ್ನು ತ್ಯಾಗ ಮಾಡಿರಿ ಉತ್ತಮ ಗತಿಯನ್ನು ಕೊಡುವ ಇದು ಉತ್ತಮ ಸಂಯಮ ಧರ್ಮವಾಗಿದೆ ಅದನ್ನು ನಿಮ್ಮ ಹೃದಯದಲ್ಲಿಡಿರಿ. ಇದು ಆಚಾರ್ಯರ ವಚನವಾಗಿದೆ. ಭವ್ಯಾತ್ಮರೇ ! ನೀವು ಅನೇಕ ಭವಗಳಲ್ಲಿ ಸಮ್ಯಕ್ತ್ವವೆಂಬ ರತ್ನವನ್ನು ಕೊಟ್ಟು ಈ ಮನುಷ್ಯಶರೀರವೆಂಬ ಹಡಗನ್ನು ಪಡೆದಿದ್ದೀರಿ. ಎಲ್ಲಿಯವರೆಗೆ ಈ ಶರೀರವೆಂಬ ಹಡಗು ನಿರೋ

ಗವಾಗಿದೆಯೋ ಅಷ್ಟರ ವರೆಗೆ ಆತ್ಮಕಲ್ಯಾಣವನ್ನು ಮಾಡುವ ಸಂಯಮವನ್ನು ಧಾರಣೆ ಮಾಡಿರಿ. ಸಂಯಮವಿಲ್ಲದೆ ಈ ಜೀವನಿಗೆ ಸುಖ ದೊರೆಯಲಾರದು.

ಯಾವತ್ ಸ್ವಸ್ಥೋಽಯಂ ದೇಹೋ
ಯಾವನ್ಮೃತ್ಯುಶ್ಚ ಮೂರತಃ
ತಾವದಾತ್ಮಹಿತಂ ಕುರ್ಯಾತ್
ಪ್ರಾಣಾಂತೇ ಕಿಂ ಕರಿಷ್ಯತಿ ||

ಎಷ್ಟರ ವರೆಗೆ ಈ ಶರೀರವು ರೋಗರಹಿತವಾಗಿರುತ್ತದೆಯೋ ಅಷ್ಟರ ವರೆಗೆ ಈ ಮನುಷ್ಯನು ಆತ್ಮಹಿತಕ್ಕೋಸ್ಕರವಾಗಿ ಸಂಯಮ ಧಾರಣೆಯನ್ನು ಮಾಡಬೇಕು. ರೋಗಯುಕ್ತನಾಗಿದ್ದರೆ ಸಂಯಮ ಪಾಲನೆಯಾಗಲಾರದು. ವೃದ್ಧಾವಸ್ಥೆಯಲ್ಲಿಯೂ ಸಂಯಮ ಪಾಲನೆಯಾಗಲಾರದು, ದರಿದ್ರ, ಅಜ್ಞಾನೀ, ಮತ್ತು ಅಂಗಹೀನನಾಗಿದ್ದರೂ ಸಂಯಮ ಪಾಲನೆಯಾಗಲಾರದು. ಅನ್ಯಾಯ ಮಾರ್ಗದಲ್ಲಿ ಸದಾ ರತರಾದವರಿಗೆ, ತೀವ್ರ ಕಷಾಯವುಳ್ಳವರಿಗೆ, ನಿಂದ್ಯ ಕರ್ಮಿಗಳಿಗೆ ಸಂಯಮ ಪಾಲನೆಯಾಗುವುದಿಲ್ಲ. ಮಿಥ್ಯಾದೃಷ್ಟಿಗಳಿಗೂ ಸಂಯಮ ಧಾರಣೆಯಾಗುವುದಿಲ್ಲ. ಆದುದರಿಂದ ಸಮ್ಯಕ್ತ್ವವನ್ನು ಧರಿಸಬೇಕು. ಸಮ್ಯಕ್ತ್ವದ ಹಾಗೆ ಹಿತ ಮಾಡುವವರು ಮೂರು ಲೋಕದಲ್ಲಿ ಯಾರೂ ಇಲ್ಲ.

ತ್ರಿಜಗೀ ಸಮ್ಯಕ್ತ್ವಸಮ ಹಿತಕರ ಕಾಲತ್ರಯೀ ನಸೆ ಕಾಂಹೀ
ಮಿಥ್ಯಾತ್ವಾಸಮ ತೇವೀ ಅಹಿತಪ್ರದ ವಸ್ತು ಹೀ ದುಜೀ ನಾಹೀ

ರತ್ನಕರಂಡ.

ಮತ್ತು ಮಿಥ್ಯಾತ್ವದ ಹಾಗೆ ಈ ಆತ್ಮನ ಅಹಿತವನ್ನು ಮಾಡುವವರೂ ಜಗತ್ತಿನಲ್ಲಿ ಯಾರೂ ಇಲ್ಲ. ಆದುದರಿಂದ ಮಿಥ್ಯಾದೃಷ್ಟಿಯ ಸಂಯಮವು ವ್ಯರ್ಥವಾಗಿದೆ. ನೀವು ಸಮ್ಯಕ್ತ್ವಸಹಿತವಾದ ಸಂಯಮವನ್ನು

ಧರಿಸಿರಿ. ಸಂಯಮವಿಲ್ಲದೆ ಸ್ವಲ್ಪ ಸಮಯವನ್ನು ವ್ಯರ್ಥವಾಗಿ ಕಳೆಯ ಬೇಡಿರಿ. ಕಾರಣ ಸಂಯಮವು ಈ ಜೀವನಿಗೆ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಮಿತ್ರನಿಗೆ ಸಮಾನವಾಗಿದ್ದು ಸುಖವನ್ನು ಕೊಡುತ್ತದೆ. ಯಥಾಶಕ್ತಿ ಸಂಯಮವನ್ನು ಪಾಲಿಸಬೇಕು. ಯಥಾ ಶಕ್ತಿ ಸಂಯಮವನ್ನು ಪಾಲಿಸಿದರೂ ಜೀವನಿಗೆ ಸುಖಕ್ಕೆ ಅದು ಕಾರಣವಾಗುತ್ತದೆ.

ಒಂದು ದಿವಸ ಒಂದು ಜಿನಮಂದಿರದಲ್ಲಿ ಮುನಿ ಮಹಾರಾಜರು ಬಂದಿದ್ದರು. ಅವರ ಉಪದೇಶವನ್ನು ಕೇಳಿ ಕೆಲವರು ತನ್ನ ಶಕ್ತಿಗನುಸಾರವಾಗಿ ವ್ರತಗಳನ್ನು ತೆಗೆದುಕೊಂಡರು. ಅದರಲ್ಲಿ ಒಬ್ಬ ಸಣ್ಣ ಕನ್ಯೆ ಇದ್ದಳು ನಾನೂ ಐದು ಪ್ರಕಾರದ ಪಾಪಾಚರಣೆಯನ್ನು ಮಾಡುವುದಿಲ್ಲವೆಂಬ ವ್ರತವನ್ನು ತೆಗೆದುಕೊಂಡಳು. ಅಲ್ಲದೆ ಪ್ರತಿ ದಿವಸ ಒಂದು ಸಾರಿ ಆತ್ಮಧ್ಯಾನವನ್ನು ಮಾಡುವೆನೆಂದು ಪ್ರತಿಜ್ಞೆ ಮಾಡಿದಳು.

ಆ ಪ್ರಕಾರ ನಿರತಿಚಾರವಾಗಿ ವ್ರತವನ್ನು ಪಾಲಿಸ ತೊಡಗಿದಳು ಕೆಲವು ದಿವಸಗಳ ನಂತರ ಆ ಊರಿನಲ್ಲಿ ಭೂಕಂಪವಾಯ್ತು. ಎಲ್ಲರೂ ಭಯದಿಂದ ಓಡಿ ಹೋದರು. ಕೆಲವರು ಭೂಮಿಯ ಒಳಗೆ ಬಿದ್ದರು. ಆದರೆ ಆ ಕನ್ಯೆಯು ಮಾತ್ರ ಅವಳ ಮನೆಯಲ್ಲಿದ್ದ ಜಿನ ಮಂದಿರದಲ್ಲಿ ಧ್ಯಾನಸ್ಥಳಾಗಿ ಕುಳಿತಿದ್ದಳು. ಅವಳ ಪರೀಕ್ಷೆಯನ್ನು ಮಾಡುವುದಕ್ಕಾಗಿ ದೇವಿಯು ಅನೇಕ ವಿಧದಿಂದ ಉಪಸರ್ಗವನ್ನು ಮಾಡಿದಳು. ಆದರೂ ಅವಳು ಧ್ಯಾನದಲ್ಲಿ ದೃಢವಾಗಿದ್ದಳು.

ಯಃ ಕೋಪಿ ಜೀವೋ ವಿಷಯಾದ್ವಿರಕ್ತಃ
ಸದೈವ ದಕ್ಷಃ ಸ್ವಪರೋಪಕಾರ್ಯೆ
ಲೀನೋಸ್ತಿ ಚಾನಂದರಸೇ ಸುಮಿಷ್ಟೇ
ಸ್ವಾತ್ಮಪ್ರದೇಶಾವಿಚಲೇ ವಿಶುದ್ಧಃ ||

ಬೋಧಾಮೃತ.

ಆ ಕನ್ಯೆಯು ಇಂದ್ರಿಯ ವಿಷಯಗಳಿಂದ ವಿರಕ್ತಳಾಗಿದ್ದಳು. ತನ್ನ ಆತ್ಮ ಕಲ್ಯಾಣ ಮಾಡಿಕೊಳ್ಳುವುದೇ ಅವಳ ಧ್ಯೇಯವಾಗಿತ್ತು, ಆದುದರಿಂದ ಯಥೇಷ್ಟವಾಗಿ ಆತ್ಮ ರಸವನ್ನು ಕುಡಿದು ತನ್ನ ಆತ್ಮ ಧ್ಯಾನದಲ್ಲಿ ಲೀನಳಾಗಿದ್ದಳು. ವಿಶುದ್ಧ ಮತ್ತು ನಿಶ್ಚಲವಾದ ಆತ್ಮಧ್ಯಾನದಲ್ಲಿ ಲೀನ ರಾದವರಿಗೆ ಎಂಥಹ ಆಪತ್ತಿ ಬಂದರೂ ಅದು ಸಂಪತ್ತಿಯಾಗಿ ಪರಿಣಮಿ ಸುತ್ತದೆ. ಇದು ಆತ್ಮಧ್ಯಾನದ ಮಹಿಮೆಯಾಗಿದೆ. ಅವಳ ಆತ್ಮಧ್ಯಾನದ ಪ್ರಭಾವದಿಂದ ಊರಿನಲ್ಲಿ ಒಂದೇ ಒಂದು ಮನೆ ಸುರಕ್ಷಿತವಾಗಿ ಉಳಿ ಯಿತು. ಈ ಎಲ್ಲಾ ಪ್ರಕರಣಗಳನ್ನು ನೋಡಿ ದೇವಿಯು ಪ್ರಸನ್ನಳಾದಳು. ಮತ್ತು ಅವಳನ್ನು ಸ್ತುತಿಸಿದಳು. ತಾಯಿ ತಂದೆಯವರಿಗೆ ಅವಳ ದೃಢ ಸಂಯಮವನ್ನು ನೋಡಿ ಬಹಳ ಸಂತೋಷವಾಯ್ತು. ಮತ್ತು ಆಶ್ಚರ್ಯ ವಾಯ್ತು ದೇವಿಯೂ ಆನಂದಿತಳಾಗಿ ' ಪುತ್ರೀ, ನಿನಗೆ ಏನು ಬೇಕೋ ಕೇಳು ನಾನು ಕೊಡುತ್ತೇನೆಂದು ಹೇಳಿದಳು. ಆಗ ಆ ಕನ್ಯೆಯು ಗಾಂಭೀರ್ಯದಿಂದ ಹೇಳುತ್ತಾಳೆ. ದೇವತೆಗಳೇ ! ನನಗೆ ನಿತ್ಯ ಸುಖವು ಬೇಕಾಗಿದೆ. ಆ ನಿತ್ಯ ಸುಖವನ್ನು ಇದುವರೆಗೆ ಯಾರೂ ಕೊಡಲಿಲ್ಲ. ಆದುದರಿಂದ ನಾನು ದುಃಖಿಯಾಗಿದ್ದೇನೆ. ಅದನ್ನು ಕೊಟ್ಟು ನನ್ನನ್ನು ಸುಖಿಯನ್ನಾಗಿ ಮಾಡಿರಿ. ಬಾಕಿ ಎಲ್ಲಾ ಭೋಗ ಸಾಮಗ್ರಿಯನ್ನು ನಾನು ಅನಂತ ಸಾರಿ ಭೋಗಿಸಿದ್ದೇನೆ. ಮುಕ್ತಿಯ ವೈಭವವನ್ನು ನಾನು ಭೋಗಿಸಿಲ್ಲ. ಅದನ್ನು ಕೊಡುವ ಸಾಮರ್ಥ್ಯವಿದ್ದರೆ ಕೊಡೋಣಾಗಲಿ ' ಎಂದಳು. ಆ ಕನ್ಯೆಯ ವಚನವನ್ನು ಕೇಳಿ ದೇವತೆಗಳು ' ಕನ್ಯೇ ! ಮುಕ್ತಿಯನ್ನು ಕೊಡುವ ಸಾಮರ್ಥ್ಯವು ನಿನ್ನ ಕೈಯಲ್ಲಿಯೇ ಇದೆ. ಈ ಪ್ರಕಾರವಾಗಿ ದೃಢ ಸಂಯಮವನ್ನು ಪಾಲಿಸುವುದರಿಂದಲೇ ಮುಕ್ತಿಯು ಲಭಿಸುತ್ತದೆ. ನಮ್ಮ ದೇವಯೋನಿಯಲ್ಲಿ ಸಂಯಮವನ್ನು ಪಾಲಿಸುವ ಯೋಗ್ಯತೆ ಇಲ್ಲ. ನಿನ್ನ ಸಂಯಮವನ್ನು ನೋಡಿ ನಮಗೆ ಇವತ್ತು ಸಮ್ಯ ಗ್ದರ್ಶನವಾಯ್ತು. ನೀನು ನಮ್ಮನ್ನು ಸನ್ಮಾರ್ಗದಲ್ಲಿ ಹಚ್ಚಿರುತ್ತಿ. ನಿನ್ನ

ಈ ಉಪಕಾರವನ್ನು ನಾವು ಎಂದೂ ಮರೆಯಲಾರೆವು. ಈ ಪ್ರಕಾರ ಸ್ತುತಿ ಮಾಡಿ ಆ ದೇವತೆಗಳು ಅದೃಶ್ಯವಾದವು. ಮತ್ತು ಆ ಕನ್ಯೆಯು ಸಂಯಮ ಧರ್ಮದ ವಿಷಯದಲ್ಲಿ ಇನ್ನೂ ದೃಢಳಾದಳು. ಆ ಸಮಯ ದಲ್ಲಿ ಅವಳು ತಮ್ಮ ತಾಯಿ-ತಂದೆಗಳಿಗೆ ನಮಸ್ಕಾರ ಮಾಡಿ ಹೇಳುತ್ತಾಳೆ ಈ ಸ್ತ್ರೀ ಪರ್ಯಾಯವು ಅತ್ಯಂತ ಕಷ್ಟದಾಯಕವಾಗಿದೆ. ನಾನು ಈ ಸ್ತ್ರೀ ಪರ್ಯಾಯವನ್ನು ನಾಶ ಮಾಡುವದಕ್ಕೋಸ್ಕರವಾಗಿ ಸಂಯಮವನ್ನು ಧರಿಸುವೆನು. ನನಗೆ ಅನುಮತಿಯನ್ನು ಕೊಡಿರಿ, ಇದನ್ನು ಕೇಳಿ ತಾಯಿ-ತಂದೆಗಳು ಪುತ್ರಿ, ಸಂಯಮವನ್ನು ಧಾರಣೆ ಮಾಡುವ ಸಮಯವು ಇನ್ನೂ ಬರಲಿಲ್ಲ. ಇನ್ನೂ ಬಹಳ ದೂರವಿದೆ. ಇದನ್ನು ಕೇಳಿ ಆ ಕನ್ಯೆಯು ಹೇಳು ತ್ತಾಳೆ, ಪೂಜ್ಯರೆ! ಸಂಯಮ ಧಾರಣೆ ಮಾಡಲಿಕ್ಕೆ ಇದೇ ಯೋಗ್ಯ ಸಮಯ ತಾರುಣ್ಯಾವಸ್ಥೆಯಲ್ಲಿ ವಿಷಯ ಸುಖಗಳನ್ನು ಭೋಗಿಸಿ ಬಲಹೀನರಾದ ನಂತರ ತಪಶ್ಚರಣೆಯಾಗುವುದಿಲ್ಲ. ಆದುದರಿಂದ ಈಗಲೇ ಸಂಯಮವನ್ನು ಧರಿಸುವೆನು. ಎಂದು ಹೇಳಿ ಅದೇ ಸಮಯದಲ್ಲಿ ದೀಕ್ಷೆಯನ್ನು ತೆಗೆದು ಕೊಳ್ಳುವ ವಿಚಾರ ಮಾಡಿದಳು. ಕನ್ಯೆಯ ಈ ದೃಢ ನಿಶ್ಚಯವನ್ನು ನೋಡಿ ತಾಯಿ-ತಂದೆಗಳು ಮರುಗಿದರು.

ಮೋಹಕರ್ಮವಶ ಜೀವ ಅನಾದಿ ಭ್ರಮಣ ಕರೇ ಸಂಸಾರ
ಐಸೆ ಕಹ ಉಠ ಚಲಿಹೋ ಕನ್ಯಕೆ ಚೌಥೆ ವ್ರತ ಅಪಾರ ||

ಶೀಲ ಪಚ್ಚಿಸಿ.

ಮೋಹನೀಯ ಕರ್ಮವಶದಿಂದ ಈ ಜೀವನು ಅನಂತ ಸಂಸಾರವೆಂಬ ಸಮುದ್ರದಲ್ಲಿ ಮುಳುಗುತ್ತಿದ್ದಾನೆ. ವಿಚಾರ ಮಾಡಿದರೆ ಈ ಸಂಸಾರದಲ್ಲಿ ಯಾರೂ ಯಾರಿಗೂ ಇಲ್ಲ. ಇದೆಲ್ಲ ಪಾಪ ಪುಣ್ಯದ ಆಟವಾಗಿದೆ. ಹೀಗೆ ವಿಚಾರ ಮಾಡಿ ಅವಳು ಆರ್ಯಿಕೆಯ ಸಮೀಪ ಹೋದಳು. ಮತ್ತು ನಮ ಸ್ಕಾರ ಮಾಡಿ ಅದೇ ಸಮಯದಲ್ಲಿ ಜಿನದೀಕ್ಷೆಯನ್ನು ಧಾರಣೆ ಮಾಡಿದಳು.



ಶ್ರೀ ಸ್ಯಾದ್ವಾದ ಕೇಸರೀ ಆಚಾರ್ಯ ಪಾಯಸಾಗರ ಸ್ವಾಮಿಗಳು.

ನಿರ್ದೋಷ ಸಂಯಮವನ್ನು ಪಾಲಿಸಿ ಆಯುಷ್ಯವು ಒಂದು ತಿಂಗಳು ಮಾತ್ರ ಉಳಿದಿದೆ ಎಂದು ಗುರುಗಳಿಂದ ತಿಳಿದು ಸಕಲ ಸಲ್ಲೇಖನಾ ವ್ರತವನ್ನು ತೆಗೆದುಕೊಂಡಳು.

**ಛೇದ ಲಿಂಗ ಪ್ರತಿ ಇಂದ್ರಸೋಲನೊ ದೇವಭಯೊ ತತಕಾಲಾ।**
**ಚಯು ತಹಾತೆ ನರಜನ್ಮ ಪಾಯಿಕೆ ಮುಕ್ತಿವರೆ ಹಿತಕಾರಾ ॥**

ಮರಣ ಸಮಯದ ವರೆಗೆ ದೋಷರಹಿತವಾದಂಥಾ ಸಂಯಮವನ್ನು ಪರಿಪಾಲಿಸಿ ಸಮಾಧಿಮರಣವನ್ನು ಸಾಧಿಸಿಕೊಂಡಳು. ಹಾಗೇಯೇ ಸ್ತ್ರೀ ಪರ್ಯಾಯವನ್ನು ಛೇದಿಸಿ ೧೬ ನೇ ಸ್ವರ್ಗದಲ್ಲಿ ಇಂದ್ರನಾಗಿ ಹುಟ್ಟಿದಳು. ನೋಡಿರಿ. ನಿರ್ದೋಷವಾದ ಸಂಯಮವನ್ನು ಪಾಲಿಸುವದರಿಂದ ಅವಳು ಸ್ತ್ರೀ ಪರ್ಯಾಯವನ್ನು ನಾಶ ಮಾಡಿ ದೇವೇಂದ್ರನ ಪದವಿಯನ್ನು ಪಡೆದಳು. ಆದುದರಿಂದ ಭವ್ಯರೇ ! ಸಂಯಮ ಧರ್ಮದ ಮಹಿಮೆಯು ಅಚಿಂತ್ಯವಾಗಿದೆ, ಆದುದರಿಂದ ನೀವು ನಿರ್ದೋಷವಾದ ಸಂಯಮವನ್ನು ಪಾಲಿಸಿ ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ.

ಹೀಗೆ ಆಚಾರ್ಯರ ವಚನವಾಗಿದೆ, ನಿಮ್ಮ ಮುಂದಿನ ಗತಿಯು ಒಳ್ಳೆಯದಾಗುವುದಿದೆ ಎಂದು ನಿಮಗೆ ಸಂಯಮವನ್ನು ಧರಿಸುವ ಭಾವ ಉಂಟಾಯಿತ್ತು. ಯಾರಿಗೆ ಮುಂದಿನ ಗತಿಯು ಒಳ್ಳೆಯದಾಗುವುದಿದೆಯೋ ಅವರಿಗೇನೇಯೇ ಸಂಯಮವನ್ನು ಧರಿಸುವ ಇಚ್ಛೆಯಾಗುತ್ತದೆ, ಯಾರಿಗೆ ದುರ್ಗತಿಯು ಬಂಧವಾಗಿದೆಯೋ ಅವರಿಗೆ ಸಂಯಮವನ್ನು ಧರಿಸುವ ಇಚ್ಛೆಯೇ ಆಗುವುದಿಲ್ಲ. ದೇವಗತಿಯ ಬಂಧ ಆದವರಿಗೇನೇಯೇ ಸಂಯಮವಾಗುತ್ತದೆ. ಅಥವಾ ದೇವಗತಿಗೆ ಯಾರು ಹೋಗುವವರಿದ್ದಾರೆಯೋ ಅವರಿಗೇನೆಯೇ ಸಂಯಮವಾಗುತ್ತದೆ.

ಆದುದರಿಂದ ಸಂಯಮದ ಪ್ರಾಪ್ತಿಯಾಗುವುದು ಬಹಳ ದುರ್ಲಭ, ಅಂಥಹ ದುರ್ಲಭವಾದ ಸಂಯಮವನ್ನು ಧಾರಣೆ ಮಾಡಿರಿ. ಯಾವ ಮೂ

ಳಿನು ಕಷಾಯದ ವಶೀಭೂತನಾಗಿ ಲೋಭದಿಂದ ಸಂಯಮವನ್ನು ಬಿಡು ತ್ತಾನೆಯೋ ಅವನು ಅನಂತಕಾಲದವರೆಗೆ ಜನ್ಮಮರಣರೂಪವಾದ ಸಂಸಾ ರದಲ್ಲಿ ಭ್ರಮಣೆಮಾಡುತ್ತಾನೆ. ಯಾರು ಸಂಯಮವನ್ನು ಗ್ರಹಣ ಮಾಡಿ ನಂತರ ಬಿಡುತ್ತಾನೆಯೋ ಅವನು ತ್ರಸ ಸ್ಥಾವರಗಳಲ್ಲಿ ಜನ್ಮವೆತ್ತುತ್ತಾನೆ. ಅವನಿಗೆ ಸದ್ಗತಿಯಾಗಲಾರದು. ವಿಷಯ ಕಷಾಯಗಳ ಅಧೀನನಾದವನೇ ಸಂಯಮದಿಂದ ಭ್ರಷ್ಟನಾಗುವನು.

> ಕ್ರೋಧೋ ಮೂಲಮನರ್ಥಾನಾಂ|
> ಕ್ರೋಧಃ ಸಂಸಾರ ಬಂಧನಂ
> ಧರ್ಮ ಧ್ವಂಸಕರಃ ಕ್ರೋಧ-
> ಸ್ತಸ್ಮಾತ್ಕ್ರೋಧಂ ವಿವರ್ಜಯೇತ್ ||

ಕ್ರೋಧವು ಅನರ್ಥಗಳ ಮೂಲವಾಗಿದೆ. ಕ್ರೋಧದಿಂದ ಆತ್ಮನಿಗೆ ಸಂಸಾರದ ಬಂಧನವಾಗುತ್ತದೆ. ಕ್ರೋಧದಿಂದ ಧರ್ಮದ ನಾಶವಾಗುತ್ತದೆ. ಆದುದರಿಂದ ಕ್ರೋಧವನ್ನು ಬಿಡಬೇಕು. ಕ್ರೋಧವನ್ನು ಬಿಟ್ಟು ಸಂಯಮ ವನ್ನು ಧರಿಸುವುದರಿಂದ ಆತ್ಮಸಿದ್ಧಿಯಾಗುತ್ತದೆ. ಕ್ರೋಧವನ್ನು ಜಯಿಸದೆ ಸಂಯಮಿಯಾದರೂ ಸಂಯಮದಿಂದ ಭ್ರಷ್ಟನಾಗುವನು. ಯಾರು ಸಂಯ ಮವನ್ನು ಬಿಡುತ್ತಾರೆಯೋ ಅವರು ಒಂದು ಕವಡಿಗೋಸ್ಕರ ಚಿಂತಾಮಣಿ ರತ್ನವನ್ನು ಕೊಟ್ಟ ಹಾಗೆ ಆಯ್ತು. ಅವರು ಕಬ್ಬಿಣಕ್ಕೋಸ್ಕರ ಕಲ್ಪವೃಕ್ಷ ವನ್ನು ಕಡಿದಂತಾಯ್ತು. ಆದುದರಿಂದ ಸಂಯಮಕ್ಕೆ ಕಲಂಕವನ್ನು ಹಚ್ಚದೆ ನಿರ್ದೋಷವಾದ ಸಂಯಮವನ್ನು ಪಾಲಿಸಬೇಕು. ಸಂಯಮ ವಿಲ್ಲದೆ ಉತ್ತಮ ಸುಖವು ಸಿಗಲಾರದು. ಮೊದಲೂ ಅನೇಕರು ವಿಷಯ ಸುಖವನ್ನು ಜಯಿಸದೆ ಸಾಧುಗಳಾಗಿ ಅನೇಕ ವಿಧವಾಗಿ ಕಾಯಕ್ಲೇಶಾದಿಗ ಳನ್ನು ಸಹಿಸಿ, ಬಾಹ್ಯತಪನ್ನು ಮಾಡಿದರು. ಆದರೆ ಕರ್ಮದ ಮರ್ಮವನ್ನು ತಿಳಿಯದೆ ಮಾಡಿದ ಆ ತಪಸ್ಸಿನ ಏನೂ ಫಲವಿಲ್ಲ. ಬೇರೆ ಶಾಸ್ತ್ರಗಳಲ್ಲಿಯೂ

ವಿಶ್ವಾಮಿತ್ರ, ಪಾರಾಶರ ಮೊದಲಾದ ಸಾಧುಗಳು ಅನೇಕ ಕಷ್ಟಗಳನ್ನು ಸಹಿಸಿ ಘೋರ ತಪಶ್ಚರ್ಯೆಯನ್ನು ಮಾಡಿದ ಉಲ್ಲೇಖವಿದೆ. ಆದರೂ ಪರಿಣಾಮಶುದ್ಧಿ ಇಲ್ಲದೆ ಕರ್ಮನಿರ್ಜರೆ ಯಾಗುವುದಿಲ್ಲ. ಆತ್ಮಶುದ್ಧಿ ಇಲ್ಲದೆ ಮುಕ್ತಿ ಯಾಗಲಾರದು.

**ವಿಶ್ವಾಮಿತ್ರಪರಾಶರಪ್ರಭೃತಯೋ ವಾತಾಂಬು ಪರ್ಣಾಶನಾ**
**ಸ್ತೇಪಿ ಸ್ತ್ರೀಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂಗತಾ**
**ಶಾಲ್ಯನ್ನಂ ಸಘೃತಂ ಪಯೋದಧಿಯುತಂ ಯೇಭುಜ್ಜತೇ ಮಾನವಾ**
**ಸ್ತೇಷಾಮಿಂದ್ರಿಯನಿಗ್ರಹೋ ಯದಿ ಭವೇದ್ವಿಂಧ್ಯಸ್ತರೇತ್‌ಸಾಗರೇ**

ಪ್ರಾಚೀನ ಕಾಲದಲ್ಲಿ ವಿಶ್ವಾಮಿತ್ರ ಪರಾಶರ ಮೊದಲಾದ ಸಾಧುಗಳು ಕಾಡಿನಲ್ಲಿ ವಾಯು, ನೀರು, ಎಲೆಗಳನ್ನು ಭಕ್ಷಣೆ ಮಾಡುತ್ತಾ ಇದ್ದರೂ, ಸ್ತ್ರೀಯರ ಸುಂದರವಾದ ಮುಖಕಮಲಗಳನ್ನು ನೋಡಿ ಮೋಹಿತರಾದರು, ತಪೋಭ್ರಷ್ಟರಾದರು. ಅವರು ಮಾಡಿದ ತಪಸ್ಸೆಲ್ಲಾ ವ್ಯರ್ಥ ವಾಯಿತು. ಹೀಗಿರುವಾಗ ಒಳ್ಳೆಯ ಒಳ್ಳೆಯ ಭಕ್ಷ್ಯಭೋಜ್ಯಗಳನ್ನು, ದುಗ್ಧ ಘೃತ ಮೊದಲಾದ ರಸಗಳನ್ನು ಸೇವಿಸುತ್ತಿರುವರು ಒಂದು ವೇಳೆ ಇಂದ್ರಿಯ ನಿಗ್ರಹ ಮಾಡುತ್ತಾರೆಂದು ಹೇಳಿದರೆ ವಿಂಧ್ಯ ಪರ್ವತವು ಸಮುದ್ರದ ಮೇಲೆ ತೇಲುತ್ತದೆಂದು ಹೇಳಿದ ಹಾಗಲ್ಲವೇ ? ಅಂದರೆ ಅದು ಹೇಗೆ ಅಸಂಭವವೋ ಹಾಗೆಯೇ ಇದೂ ಅಸಂಭವವೆಂದರ್ಥ.

ಒಂದಾನೊಂದು ಸಮಯದಲ್ಲಿ ಆ ಋಷಿಗಳು ಕಾಡಿನಲ್ಲಿ ತಪಶ್ಚರ್ಯೆಯನ್ನು ಮಾಡುತ್ತಿದ್ದರು. ಅವರ ಸಂಯಮದ ಪರೀಕ್ಷೆಗೋಸ್ಕರ ಸ್ವರ್ಗದ ಅಪ್ಸರೆಯು ಮನುಷ್ಯ ಸ್ತ್ರೀಯ ರೂಪವನ್ನು ಧರಿಸಿ ಹಾವ ಭಾವ ವಿಲಾಸಗಳನ್ನು ಮಾಡಿ ಅವರೆದುರಿನಲ್ಲಿ ಗಾಯನ ನೃತ್ಯವನ್ನು ಮಾಡತೊಡಗಿದಳು. ಆಗ ಅವರು ಅವಳ ರೂಪವೈಯಾರದಿಂದ ಮೋಹಿತರಾಗಿ ವಿನಯದಿಂದ ಅನುನಯ ಮಾಡತೊಡಗಿದರು. ದೇವೀ ! ನೀನು ಇಲ್ಲಿ ನಮ್ಮ

ಸಮೀಪಕ್ಕೆ ಬಾ. ಆಗ ಅವಳು ' ಋಷಿರಾಜ ! ನಾನು ಆ ಕಡೆ ಬಂದರೆ ನಿಮ್ಮ ಶರೀರ, ಸಂಯಮದಿಂದ ಭ್ರಷ್ಟವಾಗಬಹುದು. ನೀವು ಬಹಳ ಕಷ್ಟ ಪಟ್ಟು ಗಳಿಸಿದ ಸಂಯಮವು ನಷ್ಟವಾಗುವುದು. ಆದುದರಿಂದ ನಾನು ನಿಮ್ಮ ಸಮೀಪಕ್ಕೆ ಬರುವುದಿಲ್ಲ. ಆಗ ಆ ಋಷಿಗಳು ಹೇಳುತ್ತಾರೆ, ದೇವಿ! ನಿನ್ನಿಂದ ಹೆಚ್ಚು ಆ ಸಂಯಮದಲ್ಲಿ ಏನಿದೆ. ಸಂಯಮ ಭ್ರಷ್ಟರಾದರೆ ಪುನಃ ಸಂಯಮವನ್ನು ಪಡೆಯಬಹುದು. ಆದರೆ ನಿನ್ನಂಥ ರೂಪವತಿ, ಗುಣವತಿ ಯುರಾದ ಸ್ತ್ರೀಯನ್ನು ಪಡೆಯುವುದು ಬಹು ಕಷ್ಟವೆಂದು. ಆ ಋಷಿಗಳು ಸಂಯಮ ಭ್ರಷ್ಟರಾಗಿ ಅವಳ ಹಿಂದೆ ಓಡ ಹತ್ತಿದರು. ಆಗ ಅಪ್ಸರೆಯು ಅವರನ್ನು ಪರಿಹಾಸ್ಯ ಮಾಡಲಿಕ್ಕೆಂದು ಆಕಾಶದ ಮೇಲೆ ಹೋದಳು. ಆಗ ಆ ಸಂಯಮ ಭ್ರಷ್ಟರಾದ ಸನ್ಯಾಸಿಗಳು ಪುನಃ ವಿಚಾರ ಮಾಡ ತೊಡಗಿದರು.

ಧನಕೀ ತೃಷ್ಣಾ ಪ್ರೀತಿವನಿತಾ ಸೋ
ಮೋಹರಹ್ಯೋ ವಿಷಿಯನ ವಿಷ ಭೋಯೋ
ಚಿಂತಾಮಣಿಸೇ ಕನ್ಯೋ ವಾಯಸಕೋ
ಪಿಂಜರ ಸರಪರ ಈಂಧನ ಡೋಯೋ

ಅಧ್ಯಾತ್ಮಪದಸಂಗ್ರಹ

ಅಜ್ಞಾನೀ ಮನುಷ್ಯನಿಗೆ ಸಂಯಮ ರತ್ನವು ಸಿಕ್ಕಿದರೂ ಅವರಿಗೆ ಅದರ ಮೂಲ್ಯವಿಲ್ಲ. ಅವನು ಚಿಂತಾಮಣಿ ರತ್ನವನ್ನು ಕಟ್ಟಿಗೆಗೆ ಕೊಡುತ್ತಾನೆ. ಚಿಂತಾಮಣಿ ರತ್ನವು ಅವನಿಗೆ ಸಿಕ್ಕಿದ್ದರೂ ಅದರ ಮೂಲ್ಯವನ್ನು ತಿಳಿಯದೆ ಅದನ್ನು ಕಾಗೆಯನ್ನು ಓಡಿಸುವುದಕ್ಕೋಸ್ಕರ ಎಸೆಯುತ್ತಾನೆ. ಮತ್ತು ಗಾಜನ್ನು ಹಿಡಿದು ಕೊಳ್ಳುತ್ತಾನೆ. ಒಳ್ಳೆಯ ಆನೆ ಸಿಕ್ಕಿದರೂ ಅದನ್ನು ಕಟ್ಟಿಗೆಯನ್ನು ಹೊರಿಸಲಿಕ್ಕೆ ಉಪಯೋಗಿಸುತ್ತಾನೆ. ಹೀಗೆಯೇ ಅಜ್ಞಾನಿಯು ಬಹು ಮೂಲ್ಯವಾದ ಸಂಯಮವನ್ನು ಬಿಟ್ಟು ದುರ್ಗತಿಯ ಬಂಧನವನ್ನು ಮಾಡಿಕೊಳ್ಳುತ್ತಾನೆ.

ಆ ಸಮಯದಲ್ಲಿ ಆ ದೇವಿಯು 'ನೀವು ನನ್ನನ್ನು ವರಿಸುವುದ ಕ್ಕೋಸ್ಕರ ಇನ್ನು ೧೨ ವರ್ಷಗಳ ತಪಶ್ಚರ್ಯವನ್ನು ಮಾಡಿರಿ ಎಂದು ಹೇಳಿ ಅದೃಶ್ಯಳಾದಳು.

ಭವ್ಯರೇ ! ನೋಡಿರಿ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳದೆ ಅರಣ್ಯದಲ್ಲಿ ತಿರುಗಿದರೂ ಏನೂ ಪ್ರಯೋಜನವಿಲ್ಲ. ಆದರಿಂದ ಕರ್ಮ ಬಂಧವಾಗಿ ದುರ್ಗತಿಗೆ ಕಾರಣವಾಗುತ್ತದೆ. ಆದುದರಿಂದ ನೀವು ಮಿಥ್ಯಾತ್ವವನ್ನು ಬಿಟ್ಟು ಸಮ್ಯಗ್‌ದರ್ಶನಪೂರ್ವಕ ಸಂಯಮವನ್ನು ಧರಿಸಿರಿ. ಆ ಸಂಯಮವು ನಿಮಗೆ ಇಹಪರಲೋಕಗಳಲ್ಲಿ ಸುಖವನ್ನು ಕೊಡುವುದಾಗಿದೆ. ಆದುದರಿಂದ ಸಂಯಮರತ್ನವನ್ನು ನಿಮ್ಮ ಹೃದಯವೆಂಬ ಭಂಡಾರದಲ್ಲಿ ಭದ್ರವಾಗಿಟ್ಟುಕೊಳ್ಳಿರಿ. ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಹೀಗೆ ಆಚಾರ್ಯರ ಉಪದೇಶವಾಗಿದೆ,

ಹೇ ಆತ್ಮನ್ ! ನಿನಗೆ ಇಹಲೋಕ ಮತ್ತು ಪರಲೋಕದ ಸುಖವು ಬೇಕಾದರೆ ಇಂದ್ರಿಯ ಸುಖದ ಮೋಹವನ್ನು ಬಿಟ್ಟು ನಿತ್ಯ ಸುಖದ ಅನುಭವವನ್ನು ಮಾಡು.

ಲೋಕದ್ವಯ ಹಿತಾಯಾತ್ಮನ್ನೈರಾಶ್ಯನಿರತೋ ಭವ,
ಧರ್ಮ ಸೌಖ್ಯಚ್ಛಿದಾಶಾ ತೇ ತರುಚ್ಛೇದಃ ಫಲಾರ್ಥಿನಾಂ ||

ನಿತ್ಯವಾದ ಸುಖವೆಂಬ ಫಲವು ಧರ್ಮದಿಂದ ಪ್ರಾಪ್ತವಾಗುತ್ತದೆ. ಆದುದರಿಂದ ನೀನು ಧರ್ಮವೆಂಬ ವೃಕ್ಷವನ್ನು ರಕ್ಷಿಸು, ಆಗ ಧರ್ಮವೆಂಬ ವೃಕ್ಷದಲ್ಲಿ ಮೋಕ್ಷವೆಂಬ ಫಲವು ಬರುವುದು. ಅದನ್ನು ತಿಂದು ನೀನು ಸುಖಿಯಾಗು. ಆ ಸುಖವೇ ಲೋಕದಲ್ಲಿ ಯಥಾರ್ಥವಾದ ಸುಖವೆಂದು ಹೇಳಲಾಗಿದೆ. ಆ ಸುಖದಲ್ಲಿಯೇ ನಿರಾಕುಲತೆ ಮತ್ತು ನಿಜವಾದ ಆನಂದ ವಿದೆ. ಅಖಂಡ ಅವಿನಾಶಿಯಾದ ಆ ಸುಖವೇ ನಿಜವಾದ ಸುಖ. ವಿವೇಕಿಗಳಿಗೆ ಅನುಭವಿಸಲು ಆ ಸುಖವೇ ಯೋಗ್ಯವಾದುದು. ಇಂದ್ರಿಯಜನ್ಯವಾದ ಸುಖವು ಕ್ಷಣಭಂಗುರವಾಗಿದ್ದು ನರಕಾದಿ ದುರ್ಗತಿಗೆ ಕಾರಣವಾ

ಗಿದೆ. ಕಿಂಪಾಕ ಫಲವೆಂಬ ವಿಷಫಲವು ತಿನ್ನುವಾಗ ಮಧುರವಾಗಿ ಇತ್ತಿದರೂ ಫಲತಃ ಅದು ವಿಷವಾಗಿರುವುದರಿಂದ ಅನೇಕ ದುಃಖಗಳಿಗೆ ಕಾರಣವಾಗಿರುತ್ತದೆ. ಅದರಿಂದ ಮರಣವೂ ಆಗುತ್ತದೆ. ಹಾಗೆಯೇ ವಿಷಯ ಭೋಗದಿಂದ ಸ್ವಲ್ಪ ಸಮಯದ ವರೆಗೆ ಅಜ್ಞಾನೀ ಜೀವನಿಗೆ ಸುಖವೆಂದು ಕಂಡರೂ ಅದರ ಫಲದಿಂದ ಅನಂತಕಾಲದ ವರೆಗೆ ಈ ಸಂಸಾರದಲ್ಲಿ ಸಂಭ್ರಮಣೆ ಮಾಡಿ ದುಃಖವನ್ನನುಭವಿಸ ಬೇಕಾಗುತ್ತದೆ.

ಆದುದರಿಂದ ಸಂಯಮದ ರಕ್ಷಣೆಯನ್ನು ಮಾಡಿರಿ. ಪಂಚೇಂದ್ರಿಯಗಳನ್ನು ತಮ್ಮ ವಿಷಯಗಳ ಸಂಬಂಧದಿಂದ ನಿರೋಧ ಮಾಡುವುದಕ್ಕೆ ಸಂಯಮವೆಂದು ಹೇಳಲಾಗಿದೆ.

ಕ್ರೋಧವೆಂದರೆ ಸಂಯಮವನ್ನು ಸುಡಲು ಅಗ್ನಿಯ ಹಾಗಿದೆ.

**ದಹೇತ್‌ಸ್ವಮೇವ ರೋಷಾಗ್ನಿರ್ನಾಪರಂ ವಿಷಯಂ ತತಃ**
**ಕ್ರುಧ್ಯನ್ನಿಕ್ಷಿಪತಿ ಸ್ವಾಂಗೇ ವಹ್ನಿಮನ್ಯದಿಧಕ್ಷಯಾ ||**

ಕ್ಷತ್ರಚೂಡಾಮಣಿ.

ಕ್ರೋಧವೆಂಬ ಬೆಂಕಿಯು ತನ್ನ ಅನೇಕ ಗುಣಗಳನ್ನು ಸುಟ್ಟು ಹಾಕುತ್ತದೆ. ಅದು ಬೇರೆಯವರನ್ನು ಸುಡುವುದಕ್ಕೆ ಪ್ರಯತ್ನ ಪಡುತ್ತದೆ. ಆದುದರಿಂದ ಕೋಪವನ್ನು ಮಾಡುವ ಮನುಷ್ಯನೇ ಸ್ವಯಂ ದೊಡ್ಡ ಬೆಂಕಿಯ ಹಾಗೆ ಆಗುತ್ತಾನೆ. ಆದುದರಿಂದ ನೀವು ವಿವೇಕದಿಂದ ಕ್ರೋಧವನ್ನು ನಾಶ ಮಾಡಿರಿ. ಸಂಯಮ ಧರ್ಮವನ್ನು ಪರಿಪಾಲಿಸಿರಿ, ಸಜ್ಜನರ ಸಂಗತಿಯನ್ನು ಬಿಡಿರಿ. ದುರ್ಜನರ ಸಂಗತಿಯಿಂದ ಅನಂತ ಕಾಲದ ವರೆಗೆ ಈ ಸಂಸಾರದಲ್ಲಿ ದುಃಖವನ್ನು ಅನುಭವಿಸ ಬೇಕಾಗುತ್ತದೆ. ದುಷ್ಟ ಸಂಗತಿಯಿಂದ ತಮ್ಮ ಅನೇಕ ಸಮ್ಯಕ್ತ್ವ ಮೊದಲಾದ ಉತ್ತಮ ಗುಣಗಳು ನಷ್ಟವಾಗುವವು. ಆದುದರಿಂದ ನೀವು ದುರ್ಜನರ ಸಂಗತಿಯಿಂದ ದೂರವಿರಬೇಕು, ಸಜ್ಜನರ ಸಂಗತಿಯನ್ನು ಮಾಡಿ ಸುಖವನ್ನು ಪಡೆಯಿರಿ.

ಜಾಗ್ರತ್ವಂ ಸೌಮನಸ್ಯಂ ಚ ಕುರ್ಯಾತ್ ಸದ್ವಾಗಲಂ ಪರೈಃ
ಅಜಲಾಶಯಸಂಭೂತಮಮೃತಂ ಹಿ ಸತಾಂ ವಚಃ ||

ಕ್ಷತ್ರಚೂಡಾಮಣಿ.

ಸಜ್ಜನರ ವಚನವು ಅಮೃತದಂತೆ ಹಿತಕಾರಿಯಾಗಿದೆ. ಆದುದರಿಂದ ಸಜ್ಜನರ ಮಾತಿನಲ್ಲಿ ವಿಶ್ವಾಸವಿಟ್ಟು ಆತ್ಮ ಕಲ್ಯಾಣವನ್ನು ಮಾಡಿಕೊಳ್ಳಬೇಕು. ಸಜ್ಜನರ ಸಂಗತಿಯಿಂದ ನೀಚರೂ ಕೂಡ ಉಚ್ಚರಾಗುತ್ತಾರೆ.

ನೋಡಿ, ಒಂದಾನೊಂದು ಸಮಯದಲ್ಲಿ ಒಬ್ಬ ಕಳ್ಳನನ್ನು ಗಲ್ಲಕ್ಕೆ ಏರಿಸಿದ್ದರು. ಆ ಸಮಯದಲ್ಲಿ ಅದೇ ಮಾರ್ಗದಿಂದ ಒಬ್ಬ ಸಮ್ಯಗ್ದೃಷ್ಟಿ ಸಾಹುಕಾರನು ಜಿನಪೂಜೆಗೋಸ್ಕರ ದೇವಸ್ಥಾನಕ್ಕೆ ಹೋಗುತ್ತಿದ್ದನು. ಆ ಕಳ್ಳನನ್ನು ನೋಡಿ ಸಾಹುಕಾರನಿಗೆ ಮನಸ್ಸಿನಲ್ಲಿ ದಯೆ ಹುಟ್ಟಿತು, ಅವನು ಆ ಕಳ್ಳನ ಸಮೀಪಕ್ಕೆ ಹೋಗಿ ' ನೀನು ಣಮೋಕಾರ ಮಂತ್ರವನ್ನು ಕೇಳು ' ಎಂದನು. ಆಗ ಕಳ್ಳನು ' ನೀವು ದಯಾಳುಗಳಾಗಿದ್ದೀರಿ, ನನಗೆ ಸ್ವಲ್ಪ ನೀರು ಕೊಡಿರಿ ಎಂದನು. ಆಗ ಸಾಹುಕಾರನು ' ನೀನು ಈ ಪಂಚ ನಮಸ್ಕಾರವನ್ನು ಜಪಿಸುತ್ತಾ ಇರು, ನಾನು ಈಗ ನೀರು ತೆಗೆದುಕೊಂಡು ಬರುತ್ತೇನೆಂದು ಹೇಳಿ ಹೊರಟು ಹೋದನು. ಆ ಕಳ್ಳನು ಣಮೋಕಾರ ಮಂತ್ರವನ್ನು ಜಪಿಸುತ್ತಾ ಪ್ರಾಣವನ್ನು ಬಿಟ್ಟನು. ಆ ಣಮೋಕಾರ ಮಂತ್ರದ ಪ್ರಭಾವದಿಂದ ಅವನು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಜಿನದಾಸ ಶ್ರೇಷ್ಠಿಯು ಜಿನ ಮಂದಿರದಲ್ಲಿ ಪೂಜೆ ಮಾಡುತ್ತಿದ್ದನು. ಶ್ರೇಷ್ಠಿ ಗಲ್ಲಕ್ಕೇರಿಸಿದ ಕಳ್ಳನ ಕಿವಿಯಲ್ಲಿ ಏನೋ ಹೇಳಿದನೆಂದು ರಾಜದೂತರು ಹೋಗಿ ರಾಜನೊಡನೆ ಚಾಡಿ ಹೇಳಿದರು. ರಾಜನಿಗೆ ಬಹಳ ಸಿಟ್ಟು ಬಂತು. ಅವನು ಜಿನದಾಸ ಶ್ರೇಷ್ಠಿಯನ್ನು ಹಿಡಿದು ತರಲು ಜಿನಮಂದಿರಕ್ಕೆ ದೂತರನ್ನು ಕಳುಹಿಸಿದನು. ಈ ಪ್ರಕರಣವನ್ನು ಸ್ವರ್ಗದಲ್ಲಿ ಹುಟ್ಟಿದ ದೇವನು ಅವಧಿಜ್ಞಾನದಿಂದ ತಿಳಿದು ಒಬ್ಬ ಮುದುಕನ ವೇಷವನ್ನು ಧರಿಸಿ ಕೈಯಲ್ಲಿ ಕಟ್ಟಿಗೆಯನ್ನು ಹಿಡಿದುಕೊಂಡು ಶ್ರೇಷ್ಠಿಯ ರಕ್ಷಣೆಗೋಸ್ಕರವಾಗಿ

ಮಂದಿರದ ಬಾಗಿಲಿನಲ್ಲಿ ಕುಳಿತು ಕೊಂಡನು. ರಾಜದೂತರು ಬಂದು ನೀನು ಯಾರು ಇಲ್ಲಿ ಏಕೆ ಕೂತು ಕೊಂಡಿದ್ದಿಯೇ ಎಂದು ಕೇಳಲು ಆ ಮುದುಕನು ' ನಾನು ಜಿನದಾಸ ಶ್ರೇಷ್ಠಿಯ ಸೇವಕನಾಗಿದ್ದೇನೆ. ಎಂದನು. ಆಗ ಬಂದ ದೂತರು ಇಲ್ಲಿಂದ ಏಳು, ನಿನ್ನ ಕೆಲಸವೇನಿದೆ ಎಂದು ' ಅವನನ್ನು ಅಲ್ಲಿಂದ ನೂಕಿದರು. ಕಾಲು ಹಿಡಿದು ಎಳೆಯ ಹತ್ತಿದರು. ಅಷ್ಟರಲ್ಲಿ ಅವನು ತನ್ನ ವೈಕ್ರಿಯಿಕ ಶಕ್ತಿಯಿಂದ ತನ್ನ ಕಾಲನ್ನು ಉದ್ದ ಮಾಡಿ ಚಾಚಿದನು. ಅವರು ಆ ಕಾಲನ್ನು ಎಳೆದಷ್ಟು ಉದ್ದವಾಗುತ್ತಾ ಹೋಯಿತು. ಅರಮನೆಯವರೆಗೆ ಉದ್ದವಾಯ್ತು. ಆದರೆ ಆ ಮುದುಕನು ಮಾತ್ರ ಅಲ್ಲಿಯೇ ಇದ್ದನು. ಅನೇಕ ದೂತರು ಈ ವಿಚಿತ್ರ ಮುದುಕನ ಎದುರಿನಲ್ಲಿ ನಮ್ಮದೇನೂ ಆಟ ನಡೆಯುವುದಿಲ್ಲ ವೆಂದು ಗಾಬರಿಯಾದರು. ಇದನ್ನ ನೋಡಿ ರಾಜನು ಅದೇ ಸಮಯದಲ್ಲಿ ಜಿನ ಮಂದಿರಕ್ಕೆ ಬಂದನು ಈ ಮುದುಕನನ್ನು ನೋಡಿ, ಇವನು ಯಾವನಾದರೊಬ್ಬ ಮಹಾ ಪುರುಷನಾಗಿರಬೇಕು ಎಂದು ತಿಳಿದು ಆ ಮುದುಕನ ಶಕ್ತಿಯನ್ನು ತಿಳಿಯುವುದಕ್ಕೋಸ್ಕರ ಅರಮನೆಯ ಸಹಸ್ರಭಟ ಮಹಾಯೋದ್ಧ ವೀರರನ್ನು ಕರೆದು ಆ ಮುದುಕನನ್ನು ಕಟ್ಟಿ ತೆಗೆದುಕೊಂಡು ಬರಲಿಕ್ಕೆ ಹೇಳಿದನು. ಆ ಯೋದ್ಧರು ಬಂದು ಅವನನ್ನು ಕಟ್ಟಲು ಪ್ರಯತ್ನಿಸಿದರು. ಆದರೆ ಆ ದೇವನು ತನ್ನ ಶಕ್ತಿಯಿಂದ ಅವರೆಲ್ಲರನ್ನು ನಾಗಪಾಶದಿಂದ ಕಟ್ಟಿದನು. ಇದನ್ನು ನೋಡಿ ರಾಜನು ಆಶ್ಚರ್ಯ ಚಕಿತನಾಗಿ ಜಿನದಾಸ ಶ್ರೇಷ್ಠಿಯ ಹತ್ತಿರ ಹೋಗಿ ಹೇಳಿದನು. ' ನಿನ್ನ ಸೇವಕನು ನಮ್ಮ ಅರಮನೆಯ ಎಲ್ಲಾ ಸೈನಿಕರನ್ನು ಕಟ್ಟಿ ಹಾಕಿದ್ದಾನೆ. ಅವರನ್ನು ಬಿಡಿಸು. ಅದನ್ನು ಕೇಳಿ ಜಿನದಾಸ ಶ್ರೇಷ್ಠಿಯು ' ನನ್ನ ಸೇವಕರು ಯಾರೂ ಇಲ್ಲವಲ್ಲ ' ಎಂದನು. ಆಗ ರಾಜನು ಪುನಃ ಆ ಮುದುಕನಿಗೆ ಕೇಳಿದನು. ' ನೀನು ಯಾರು ? ಸತ್ಯ ಹೇಳು ' ಆ ಮುದುಕನು ಪುನಃ ನಾನು ಜಿನದಾಸ ಶ್ರೇಷ್ಠಿಯ ಸೇವಕನೆಂದೇ ಹೇಳಿದನು. ನಂತರ ಜಿನದಾಸ ಶ್ರೇಷ್ಠಿಯು ಸಮೀಪ ಹೋಗಿ ಪುಷ್ಪ ವೃಷ್ಟಿಯನ್ನು ಮಾಡಿ ಅವನಿಗೆ ನಮಸ್ಕಾರವನ್ನು ಮಾಡಿದನು. ಆಗ ಶ್ರೇಷ್ಠಿಯು ' ನೀನು ಯಾರು ? ಎಂದು ಕೇಳಿದನು. ಆಗ ಮುದುಕನು

' ಮಾನ್ಯರೇ ! ನೀವು ನನ್ನ ಗುರುತು ಹಿಡಿಯಲಿಲ್ಲ ವೆಂದು ಕಾಣುತ್ತದೆ. ನೀವೇ ನನ್ನನ್ನು ಉದ್ಧರಿಸಿ ಪಂಚ ನಮಸ್ಕಾರದ ಫಲದಿಂದ ನನ್ನಂಥ ಪಾಪಿಯಾದ ಕಳ್ಳನಿಗೂ ಸ್ವರ್ಗದ ಸುಖವನ್ನು ಕೊಡಿಸಿದಿರಿ. ಇನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯ್ತು. ರಾಜನಿಗೂ ವೈರಾಗ್ಯ ಉಂಟಾಯಿತು. ಜೈನಧರ್ಮದ ಪ್ರಭಾವವನ್ನು ನೋಡಿರಿ ಅದೇ ಸಮಯದಲ್ಲಿ ದೇವನು ತನ್ನ ದಿವ್ಯ ರೂಪವನ್ನು ತೋರಿಸಿದನು. ದೇವನ ರೂಪವನ್ನು ನೋಡಿ ಎಲ್ಲರಿಗೂ ಧರ್ಮದ ವಿಷಯದಲ್ಲಿ ದೃಢ, ಶ್ರದ್ಧೆಯಾಯಿತು. ನೋಡಿ ಸಜ್ಜನರ ಸಂಸರ್ಗ ದಿಂದ ದೊಡ್ಡ ಪಾಪಿಯಾದ ಕಳ್ಳನ ಕೂಡ ಉದ್ಧಾರ ವಾಯಿತು.

ಮಹಾನುಭಾವ ಸಂಸರ್ಗಃ ಕಸ್ಯನೋನ್ನತಿಕಾರಕಃ ।
ರಥ್ಯಾಂಬು ಜಾಹ್ನವೀಸಂಗಾತ್ ತ್ರಿದಶೈರಪಿವಂದ್ಯತೇ ॥

ಸುಭಾಷಿತ.

ಯಾವ ಪ್ರಕಾರವಾಗಿ ಹಾದಿಯಲ್ಲಿ ಹರಿಯುವ ಕೆಸರು ನೀರೂ ಗಂಗಾ ನದಿಯಲ್ಲಿ ಹೋಗಿ ಕೂಡಿದ ನಂತರ ಪವಿತ್ರವಾಗುತ್ತದೆಯೋ ಹಾಗೆಯೇ ಮಹಾಪಾಪಿಯಾದ ಕಳ್ಳನಿಗೂ ಸಜ್ಜನರ ಸಂಗತಿಯೂ ಉಪ ಕಾರಿಯಾಗುತ್ತದೆ. ಆದುದರಿಂದ ಸಜ್ಜನರ ಸಂಗತಿಯನ್ನು ಮಾಡಿರಿ. ಅದೇ ಸಮಯದಲ್ಲಿ ರಾಜನು ಅನೇಕ ಜನರೊಡನೆ ವಿರಕ್ತನಾಗಿ ಆತ್ಮಕಲ್ಯಾ ಣಕ್ಕೋಸ್ಕರವಾಗಿ ಜೈನ ದೀಕ್ಷೆಯನ್ನು ತೆಗೆದುಕೊಂಡು ಸಂಯಮ ಧಾರಣೆ ಯನ್ನು ಮಾಡಿದನು. ನಿರ್ದೋಷ ಸಂಯಮವನ್ನು ಪರಿಪಾಲಿಸಿ, ತಮ್ಮ ತಮ್ಮ ಪರಿಣಾಮದಂತೆ ಅವರೆಲ್ಲರೂ ಸುಗತಿಯನ್ನು ಹೊಂದಿದರು. ಆದು ದರಿಂದ ಭವ್ಯರೇ, ಸಂಯಮ ಧರ್ಮವು ಎಲ್ಲಾ ಧರ್ಮಗಳಿಂದಲೂ ಶ್ರೇಷ್ಠ ವಾದುದು ಆದುದರಿಂದ ನೀವು ನಿಮ್ಮ ಪವಿತ್ರ ಹೃದಯದಲ್ಲಿ ಉತ್ತಮ ಸಂಯಮವನ್ನು ಧರಿಸಿ ಆತ್ಮ ಶುದ್ಧಿಯನ್ನು ಮಾಡಿಕೊಳ್ಳಿರಿ. ಆದರಿಂದ ನಿಶ್ಚಯವಾಗಿ ಮೋಕ್ಷಲಾಭವಾಗುವುದು. ಹೀಗೆ ಈ ಸಂಯಮ ಧರ್ಮ ವನ್ನು ಸಂಕ್ಷೇಪದಲ್ಲಿ ವಿವೇಚಿಸಲಾಗಿದೆ

ಸಂಯಮ ಧರ್ಮಾಯ ನಮಃ

# ಉತ್ತಮ ತಪೋ ಧರ್ಮಾಯ ನಮಃ

ಮಂಗಳಾಚರಣೆ.

**ಕ್ಷಾಂತ್ಯಾರ್ಜವಾದಿ ಗುಣಗಣ ಸುಸಾಧನಂ ಸಕಲಲೋಕ ಹಿತಹೇತುಂ।**
**ಶುಭ ಧಾಮನಿ ಧಾತಾರಂ ವಂದೇ ಧರ್ಮಂ ಜಿನೇಂದ್ರೋಕ್ತಂ ॥**

ಉತ್ತಮ ಕ್ಷಮೆ, ಮಾರ್ದವ, ಆರ್ಜವ ಮೊದಲಾದ ದಶಧರ್ಮಗಳೆಂಬ ಗುಣಗಳಿಗೆ ಕಾರಣವಾದ, ಸಮಸ್ತ ಪ್ರಾಣಿಗಳಿಗೆ ಹಿತಕಾರಕವಾದ. ಶುಭ ಸ್ಥಾನದಲ್ಲಿ ಇರಿಸುವ ಅಂದರೆ ಮೋಕ್ಷ ಸುಖವನ್ನು ಕೊಡುವ ಜಿನೇಂದ್ರ ಭಗವಂತನಿಂದ ಪ್ರತಿಪಾದಿಸಲ್ಪಟ್ಟ ಧರ್ಮವನ್ನು ನಾನು ಮನ ವಚನ ಕಾಯದ ವಿಶುದ್ಧಿಯಿಂದ ವಂದಿಸುತ್ತೇನೆ.

**ಇಚ್ಛಾನಿರೋಧಸ್ತಪಃ, ಕರ್ಮಕ್ಷಯಾರ್ಥಂ ತಪ್ಯತೇ ಇತಿ ತಪಃ ॥**
ಸರ್ವಾರ್ಥಸಿದ್ಧಿ.

ಇಚ್ಛೆಯ ನಿರೋಧವನ್ನು ಮಾಡುವುದಕ್ಕೆ ತಪವೆಂದು ಹೆಸರು. ಇದು ನಾಲ್ಕು ಆರಾಧನೆಗಳಲ್ಲಿಯೂ ಶ್ರೇಷ್ಠವಾದುದು. ಹೇಗೆ ಬಂಗಾರವನ್ನು ಕಾಯಿಸುವುದರಿಂದ ಅದು ಎಲ್ಲಾ ಮಲಗಳನ್ನು ಬಿಟ್ಟು ಶುದ್ಧವಾಗುತ್ತದೆಯೋ ಹಾಗೆಯೇ ಈ ಆತ್ಮನನ್ನು ದ್ವಾದಶ ವಿಧವಾದ ತಪಗಳಿಂದ ತಪಿಸುವುದರಿಂದ ಕರ್ಮ ಮಲಗಳು ಬಿಟ್ಟು ಶುದ್ಧನಾಗುತ್ತಾನೆ. ಅವಿವೇಕಿಗಳು ಶರೀರವನ್ನು ಪಂಚಾಗ್ನಿಗಳನ್ನು ಹಾಕಿ ತಪಿಸುತ್ತಾರೆ. ಹೀಗೆ ಕಾಯಕ್ಲೇಶವನ್ನು ಮಾಡುವುದಕ್ಕೆ ಅವರು ತಪವೆಂದು ಹೇಳುತ್ತಾರೆ. ಆದರೆ ಅದು ಯಥಾರ್ಥವಾದ ತಪವಲ್ಲ. ಶರೀರವನ್ನು ಸುಡುವುದರಿಂದ ಅಥವಾ ಅದಕ್ಕೆ ಕಷ್ಟ ಕೊಡುವುದರಿಂದ ಏನು ಪ್ರಯೋಜನ ! ಶರೀರದಿಂದ ಆತ್ಮನನ್ನು ವಿವೇಕ ಪೂರ್ವಕವಾಗಿ ಬೇರೆ ಮಾಡುವುದಕ್ಕೇನೇಯೇ ತಪವೆಂದು ತಿಳಿಯಬೇಕು. ಆತ್ಮನು ಕರ್ಮಮಲಕಲಂಕದಿಂದ ರಹಿತನಾಗಿ

ದ್ದಾನೆ. ಹೀಗೆ ಭೇದ ವಿಜ್ಞಾನದಿಂದ ಆತ್ಮಸ್ವರೂಪದ ಜ್ಞಾನವಾಗಿ ರಾಗ ದ್ವೇಷ ಮೋಹಾದಿ ರೂಪವಾದ ಮಲಗಳು ದೂರವಾಗುತ್ತದೆಯೋ ಮತ್ತು ಶುದ್ಧ ಜ್ಞಾನಮಯನಾದ ಆತ್ಮನು ಪ್ರಾಪ್ತನಾಗುತ್ತಾನೆಯೋ ಆಗ ಅದನ್ನು ಯಥಾರ್ಥವಾದ ತಪವೆಂದು ತಿಳಿಯಬೇಕು. ಇಂಥಹ ತಪವನ್ನು ಯಾರು ಮಾಡುತ್ತಾನೆಯೋ ಅವನೇ ನಿಜವಾದ ಜ್ಞಾನಿ ಮತ್ತು ಎಲ್ಲಾ ಶಾಸ್ತ್ರ ಗಳ ಜ್ಞಾತಾ ಎಂದು ತಿಳಿಯಬೇಕು.

ಜೋ ಅಬದ್ಧ ಆತಮುಥಕೇ ಔರ ಏಕ ಅವಿಶೇಷ ।
ಸೋ ಜಿನ ಶಾಸನ ದೇಖತಾ ದ್ರವ್ಯ ಭಾವ ಶ್ರುತಭೇಷ ॥

ಸಮಯಸಾರ,

ದೇಹದಿಂದ ಆತ್ಮನನ್ನು ವಿವೇಕ ಪೂರ್ವಕವಾಗಿ ಬೇರೆ ಮಾಡ ಬೇಕಾಗಿದೆ. ಆತ್ಮನು ಕರ್ಮಮಲ ಕಲಂಕ ರಹಿತನಾಗಿದ್ದಾನೆ. ಇಂಥಹ ಭೇದ ವಿಜ್ಞಾನದ ಬಲದಿಂದ ಆತ್ಮನ ಸ್ವಭಾವ ಮತ್ತು ರಾಗದ್ವೇಷ ಮೋಹ ರೂಪವಾದ ಮಲವನ್ನು ದೂರ ಮಾಡಬಹುದು. ಆದುದರಿಂದ ಕರ್ಮದಿಂದ ಕಲಂಕಿತನಾದ ಆತ್ಮನನ್ನು ತಪವೆಂಬ ಮೂಸೆಯಲ್ಲಿಟ್ಟು ಶುದ್ಧ ಮಾಡ ಬೇಕಾಗಿದೆ.

ವಿಷಯಾ ಶಾವ ಶಾತೀತೋ ನಿರಾರಂಭೋ ಪರಿಗ್ರಹ: ।
ಜ್ಞಾನ ಧ್ಯಾನ ತಪೋ ರಕ್ತಸ್ತಪಸ್ವೀಸ ಪ್ರಶಸ್ಯತೇ ॥

ರತ್ನಕರಂಡ

ಪಂಚೇಂದ್ರಿಯ ವಿಷಯಗಳನ್ನು ವಶಪಡಿಸಿಕೊಂಡವನೂ, ಆರಂಭ ಪರಿಗ್ರಹದಿಂದ ರಹಿತನಾದವನೂ, ಜ್ಞಾನ ಧ್ಯಾನ ಮತ್ತು ತಪಸ್ಸಿನಲ್ಲಿ ಅನುರಕ್ತನಾದವನೂ, ನಿಜವಾದ ತಪಸ್ವಿ ಎಂದು ಹೇಳಲ್ಪಡುತ್ತಾನೆ.

ಪುಟವಿಡುವಲ್ಲಿ ಕಿಚ್ಚಿನುರಿ ಗಂಜಿದೊಡಾ ಕನಕಕ್ಕೆ ಕೂಡಿದಾ
ಕುಟಿಲತೆ ಪೋಕುಮೋ ಮಲಕಲಂಕಮನೂದಿ ಕಳಲ್ಚಿ ಕಾಂತಿಸಂ

ಪುಟದೊಳಗಾತ್ಮನಂ ನಿಲಿಸಿ ನಿರ್ಮಲನಾಗುವೆನೆಂಬ ಭವ್ಯಾನು
ತ್ಕಟತಪ ದುಬ್ಬೆವಳಿದೊಡೆ ಸಿದ್ಧಿ ಪುದೆಯ ಪರಾಜಿತೇಶ್ವರಾ ||

ಅಪರಾಜಿತ ಶತಕ ೨೬

ಪರಮಾತ್ಮನ್ ! ಸುವರ್ಣವನ್ನು ಶುದ್ಧಿ ಮಾಡುವುದಕ್ಕೋಸ್ಕರ ವಾಗಿ ಮೂಸೆಯ ಬೆಂಕಿಯಲ್ಲಿಟ್ಟು ಅದನ್ನು ಸುಡಬೇಕಾಗುತ್ತದೆ ಆಗ ಅದು ಬೆಂಕಿಯ ಉರಿಗೆ ಅಂಜಿದರೆ ಅದು ಶುದ್ಧವಾಗಬಹುದೋ ? ಹಾಗೆ ಯೇ ಆತ್ಮನನ್ನು ಶುದ್ಧ ಮಾಡಿ ಪರಮಾತ್ಮ ಪದವಿಯನ್ನು ಪಡೆಯುವುದ ಕ್ಕೋಸ್ಕರವಾಗಿ ತಪವೆಂಬ ಮೂಸೆಯಲ್ಲಿಟ್ಟು ತಪ್ಪಿಸಬೇಕಾಗುತ್ತದೆ, ಆ ತಪದ ತಾಪಕ್ಕೆ ಅವನು ಅಂಜಿದರೆ ಶುದ್ಧಿಯಾಗುವನೇ, ಹಾಗೆಯೇ ಕರ್ಮಗಳ ನಾಶವಾಗುವುದೇ ? ಆಗಲಾರದು. ಮಲಸಹಿತವಾದ ಭಂಗಾರ ವನ್ನು ಅಗ್ನಿಯಲ್ಲಿ ಸುಟ್ಟು ಅದರ ಮಲವನ್ನು ದೂರ ಮಾಡಿ ಶುದ್ಧ ಸುವರ್ಣವನ್ನು ಸುವರ್ಣಕಾರನು ಬೇರೆ ಮಾಡುತ್ತಾನೆ. ಹಾಗೆಯೇ ತಪ ದಿಂದ ಕರ್ಮಮಲಗಳನ್ನು ಸುಟ್ಟು ಆತ್ಮನನ್ನು ಆ ತಪಸ್ವಿಯು ಶುದ್ಧ ಮಾಡುತ್ತಾನೆ. ತಪಸ್ಸಿನಿಂದ ಕರ್ಮ ನಿರ್ಜರೆಯಾಗುತ್ತದೆ. ತಪಸಾ ನಿರ್ಜರಾ ಚ ಎಂದು ಸೂತ್ರಕಾರರು ಹೇಳಿದ್ದಾರೆ. ಸಂಸಾರೀ ಜೀವನು ಈ ಸಂಸಾರ ಜಾಲದಲ್ಲಿ ಸಿಕ್ಕಿ ಅನೇಕ ಕರ್ಮಗಳನ್ನು ಅರ್ಜಿಸುತ್ತಾನೆ. ಮತ್ತು ಪರಿಗ್ರಹಾದಿಗಳ ವಿಯೋಗದಿಂದುಂಟಾದ ಆರ್ತಧ್ಯಾನದಿಂದ ದುರ್ಗತಿಗೆ ಹೋಗಿ ಘೋರ ದುಃಖವನ್ನು ಅನುಭವಿಸುತ್ತಾನೆ.

ತಪೋವನದ ಪ್ರಾಪ್ತಿಯಾಗುವುದು ಬಹಳ ದುರ್ಲಭವಾಗಿದೆ. ತನ್ನ ಸ್ತ್ರೀ ಪುತ್ರ ಧನ ಮೊದಲಾದ ಪರಿಗ್ರಹಗಳ ಮೇಲಿನ ಮೋಹವನ್ನು ಬಿಟ್ಟು ಪಾಪದಿಂದ ವಿರಕ್ತನಾಗುವ ಯೋಗವು ಭಾಗ್ಯವಂತರಿಗೇನೇಯೋ ಲಭಿಸು ತ್ತದೆ. ಪರಮ ವೀತರಾಗೀ ನಿರ್ಗ್ರಂಥ ಗುರುಗಳ ಚರಣ ಸನ್ನಿಧಿಯಲ್ಲಿ ಹೋಗಿ ಗುರು ಪ್ರಾಪ್ತಿಯ ಕಾರಣದಿಂದ ಯಾರ ಭಕರ್ಮದ ಉದ ಯವು ಮಂದವಾಗಿದೆಯೋ ಸಮ್ಯಕ್ತ್ವ ಸೂರ್ಯನ ಉದಯವು ಎಲ್ಲಿ

ಆಗಿದೆಯೋ ಅವನೇ ಸಂಯಮವನ್ನು ಗ್ರಹಣ ಮಾಡಿ ತಪ ಮಾಡುತ್ತಾನೆ. ತಪದಿಂದ ಕರ್ಮಮಲವನ್ನು ಭೇದ ವಿಜ್ಞಾನದ ಬಲದಿಂದ ತೊಳೆಯುತ್ತಾನೆ. ಅನಾದಿಕಾಲದಿಂದ ಅನಂತ ಕರ್ಮವೆಂಬ ಕಲಂಕವು ಆತ್ಮನಿಗೆ ತಗಲಿದೆ. ಆ ಕರ್ಮವೆಂಬ ಕಲಂಕವನ್ನು ಯೋಗಿಗಳು ತಪಸ್ಸಿನ ಪ್ರಭಾವದಿಂದ ತೊಳೆಯುತ್ತಾರೆ. ಪರಮಾನಂದ ಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ.

ದ್ರವ್ಯ ಕರ್ಮಮಲೈರ್ಮುಕ್ತಂ ಭಾವ ಕರ್ಮ ವಿವರ್ಜಿತಂ ।
ನೋಕರ್ಮ ರಹಿತಂ ವಿದ್ಧಿ ನಿಶ್ಚಯೇನ ಚಿದಾತ್ಮಕಂ ॥

ಯಾರು ಪಂಚೇಂದ್ರಿಯಗಳ ವಿಷಯ ಲಾಲಸೆಯನ್ನು ನಷ್ಟ ಮಾಡಿದ್ದಾರೋ, ಆರಂಭ ಪರಿಗ್ರಹಗಳಿಂದ ರಹಿತರಾಗಿದ್ದಾರೋ, ಅಂತಹ ಸಾಧುಗಳೇ ಪ್ರಶಂಸೆಗೆ ಯೋಗ್ಯರಾಗಿರುತ್ತಾರೆ.

ತಮ್ಮ ಆತ್ಮನು ನಿಜವಾಗಿಯೂ ಜ್ಞಾನಾವರಣಾದಿ ದ್ರವ್ಯಕರ್ಮ ಮತ್ತು ರಾಗದ್ವೇಷ ಮೊದಲಾದ ಭಾವಕರ್ಮ, ಔದಾರಿಕಾದಿ ನೋಕರ್ಮಗಳಿಂದ ರಹಿತನಾಗಿದ್ದು ಶುದ್ಧಜ್ಞಾನದರ್ಶನಮಯನಾಗಿದ್ದಾನೆ. ಈ ಆತ್ಮನಿಂದ ಹೆಚ್ಚಾದ ಪವಿತ್ರವಾದ ವಸ್ತುವು ಈ ಜಗತ್ತಿನಲ್ಲಿಲ್ಲ. ಹೀಗೆ ದು ವಿವೇಕೀ ಭೇದ ವಿಜ್ಞಾನಿಗಳು ಸರ್ವ ಪರಪದಾರ್ಥಗಳ ಮೇಲೆ ಮೋಹವನ್ನು ಬಿಟ್ಟು ತನ್ನ ಆತ್ಮ ಸ್ವರೂಪವನ್ನು ವಿಚಾರ ಮಾಡುತ್ತ ಕರ್ಮದ ನಿರ್ಜರೆಯನ್ನು ಮಾಡುತ್ತಿರುತ್ತಾರೆ. ದಶಭಕ್ತಿಯಲ್ಲಿ ಹೀಗೆ ಹೇಳಿದ್ದಾರೆ.

ವ್ರತ ಸಮಿತಿ ಗುಪ್ತಿ ಸಂಯುತಾಃ ।
ಶಮ ಸುಖ ಮಾಧಾಯ ಮನಸಿ ವೀತಮೋಹಾಃ ॥
ಧ್ಯಾನಾಧ್ಯಯನ ವಶಂಗತಾಃ ।
ವಿಶುದ್ಧಯೇ ಕರ್ಮಣಾಂ ತಪಶ್ಚರಂತಿ ॥

ಎಲ್ಲಾ ಪ್ರಕಾರದ ರಾಗದ್ವೇಷಾದಿ ವಿಕಾರಗಳ ಉಪಶಮವಾಗಲು ವೀತರಾಗ ವೃತ್ತಿಯು ಬರುತ್ತದೆ. ಆ ಸಮಯದಲ್ಲಿ ಏನು ಸುಖವಾಗುತ್ತ

ದೆಯೋ ಅದೇ ಆತ್ಮ ಸುಖನೆಂದು ತಿಳಿಯಬೇಕು. ಅದರ ಸ್ವರೂಪವನ್ನು ಇಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ. ಆ ಸುಖವು ಅತೀಂದ್ರಿಯವಾಗಿದೆ. ಇಂಥಹ ಸುಖಕ್ಕೇನೇಯೇ ಮೋಕ್ಷಸುಖವೆಂದು ಹೇಳುತ್ತಾರೆ. ಅದರ ಪ್ರಾಪ್ತಿಗೋಸ್ಕರವಾಗಿಯೇ ಮುನೀಶ್ವರರು ವ್ರತ, ಸಮಿತಿ, ಗುಪ್ತಿಗಳನ್ನು ಪರಿಪಾಲಿಸುತ್ತಾರೆ. ಕರ್ಮ ನಾಶವಾಗಲಿಕ್ಕೆ ಮೋಹವನ್ನು ದೂರ ಮಾಡಿ ಧ್ಯಾನಾಧ್ಯಯನಗಳಲ್ಲಿ ದೃಷ್ಟಿಯನ್ನಿಟ್ಟು ಕಾಯಕ್ಲೇಶವೆಂಬ ಬಾಹ್ಯ ತಪವನ್ನು ಕೂಡಿನಲ್ಲಿದ್ದು ಆನಂದದಿಂದ ಮಾಡುತ್ತಾರೆ. ತಪನೆಂಬ ನೀರಿಲ್ಲದೆ ಕರ್ಮವೆಂಬ ಮಲವು ತೊಳೆಯಲು ಸಾಧ್ಯವಿಲ್ಲ. ಆ ನೀರಿನಿಂದ ಮನಸ್ಸೆಂಬ ಪಾತ್ರದಲ್ಲಿ ತೊಳೆಯುತ್ತಾರೆ. ಅಲ್ಲಿ ತಪೋಭಾವನೆಯನ್ನು ಇಡುತ್ತಾರೆ. ಪಂಚೇಂದ್ರಿಯಗಳ ನಿರೋಧನನ್ನು ಮಾಡಿ ಸಮಸ್ತ ಪರಿಗ್ರಹಗಳನ್ನು ಬಿಟ್ಟು ಏಕಾಂತ ಸ್ಥಾನದಲ್ಲಿ ಹೋಗಿ ಧ್ಯಾನದಲ್ಲಿ ಲೀನರಾಗುತ್ತಾರೆ. ಇದಕ್ಕೇನೇಯೇ ತಪವೆಂದು ಹೇಳಲಾಗಿದೆ. ಪರಿಗ್ರಹಗಳ ಮೇಲಿನ ಮಮತ್ವವನ್ನು ಬಿಡುವುದು ಹಾಗೆಯೇ ನಿಷ್ಕಾಮ ಭಾವನೆಯಿಂದಿರುವುದು ಅದಕ್ಕೆ ತಪವೆಂಬು ಹೇಳುತ್ತಾರೆ. ಪರಿಗ್ರಹಗಳ ಮೇಲಿನ ಆಶಕ್ತಿಯನ್ನು ಬಿಡದೆ ತಪಶ್ಚರಣೆಯನ್ನು ಮಾಡುವುದರಿಂದ ಏನೂ ಪ್ರಯೋಜನವಿಲ್ಲ.

**ಏಕಾಂತೆ ಶಯನೋಪವೇಶನಕೃತಿಃ ಸಂತಾಪನಂ ತಾನವಂ ।**
**ಸಂಖ್ಯಾವೃತ್ತಿನಿಬಂಧನಾಮನಶನಂ ವಿಷ್ವಾಣಮರ್ಧೋದರಂ ॥**

ಯಾರಿಗೆ ಪರಿಣಾಮದಲ್ಲಿ ಶುದ್ಧಿ ಇಲ್ಲವೋ ಅವರೆಷ್ಟು ಅಗ್ನಿಹೋತ್ರ ಮಾಡಿದರೇನು ? ವನವಾಸ ಮಾಡಿದರೇನು ? ಬಾಹ್ಯ ತಪದಿಂದ ಶರೀರವನ್ನು ಕೃಶ ಮಾಡಿದರೇನು ? ಅಂತಃಶುದ್ಧಿ ಇಲ್ಲದೆ ಕರ್ಮ ನಿರ್ಜರೆಯಾಗಲಾರದು. ಮನಃಶುದ್ಧಿ ಇಲ್ಲದೆ ವನವಾಸ ಮಾಡಿದರೂ ಪಾಪಬಂಧವೇ ಆಗುವುದು. ಈ ವಿಷಯದಲ್ಲಿ ಒಬ್ಬ ಢೋಂಗೀ ಸಾಧುವಿನ ಕಥೆಯನ್ನು ಕೇಳಿರಿ.

ಒಬ್ಬ ಮಿಥ್ಯಾತ್ವಿ ಢೋಂಗೀ ಸಾಧು ನಾನು ದೊಡ್ಡ ತಪಸ್ವಿ ಎಂದು ಹೊರಗಿನಿಂದ ತೋರಿಸಿ ಜನರಿಂದ ಭಕ್ತಿಯನ್ನು ಮಾಡಿಸಿ ಕೊಳ್ಳುತ್ತಿದ್ದನು. ಒಳಗೆ ಮಾತ್ರ ಮಿಥ್ಯಾತ್ವ ಕರ್ಮದ ಉದಯದಿಂದ ತೀವ್ರ ಅಶುಭ ಪರಿಣಾಮವಿತ್ತು. ಒಂದು ದಿವಸ ಒಬ್ಬ ಗೃಹಸ್ಥನು ತನ್ನ ಪತ್ನಿಗೆ ಹೇಳಿದನು. ದೇವೀ ! ಈ ಸಾಧು ಮಹಾ ತಪಸ್ವಿಯಾಗಿದ್ದಾನೆ. ಅವನಿಗೆ ನೀನು ಆಹಾರವನ್ನು ಸಿದ್ಧಗೊಳಿಸು. ಆಹಾರದಾನದಿಂದ ನಿನಗೆ ಪುಣ್ಯಬಂಧವಾಗಬಹುದು. ಆ ಸಾಧ್ವಿಯು ಸಮ್ಯಗ್‌ದೃಷ್ಟಿಯಾಗಿದ್ದಳು. ಅವಳು ಶಾಂತ ರೀತಿಯಿಂದ ಹೇಳಿದಳು. ಪತಿದೇವ ! ಮೊದಲು ನಾವು ಆ ಸನ್ಯಾಸಿಯ ಪರೀಕ್ಷೆಯನ್ನು ಮಾಡೋಣ. ನಂತರ ಅವನಿಗೆ ಆಹಾರದಾನವನ್ನು ಕೊಡೋಣ. ಎಂದು ಹೇಳಿ ಅವನ ಪರೀಕ್ಷೆಗೋಸ್ಕರ ತರುಣ ಯುವತಿಯಾದ ಕನ್ಯೆಯನ್ನು ಆ ಸನ್ಯಾಸಿಯ ಬಳಿ ಕಳುಹಿಸಿದರು. ಆ ಕನ್ಯೆಯು ಬಹಳ ಚತುರಳಾಗಿದ್ದಳು. ಅವಳು ಆ ಸನ್ಯಾಸಿಯ ಹತ್ತಿರ ಹೋಗಿ ಹೇಳಿದಳು. ಮಹಾರಾಜ! ನೀವು ತಲೆ ಕೆಳಗೆ ಕಾಲು ಮೇಲೆ ಮಾಡಿ ಬಹಳ ಕಠಿಣವಾದ ತಪಸ್ಸನ್ನು ಆಚರಿಸುತ್ತೀರಿ. ನಿಮ್ಮ ತಪಸ್ಸು ಬಹಳ ಪ್ರಶಂಸನೀಯವಾಗಿದೆ. ನಿಮ್ಮಂಥಹ ಮಹಾ ತಪಸ್ವಿಗಳ ದರ್ಶನ ಲಾಭವಾದದ್ದು ನನ್ನ ಮಹದ್ಭಾಗ್ಯ. ನಿಮ್ಮ ತಪಸ್ಸು ಹೇಗಿದೆ ? ನಿಮ್ಮ ತಪಸ್ಸು ಯಮ ತಪವೋ, ನಿಯಮ ತಪವೋ ? ಒಂದು ವೇಳೆ ನಿಯಮ ತಪವಾದರೆ ನನ್ನ ಅದೃಷ್ಟ ಒಳ್ಳೆಯದೆಂದೇ ಹೇಳಬೇಕು. ಆಗ ಆ ಯುವತಿಯ ಮಾತನ್ನು ಕೇಳಿ, ಅವಳ ಸೌಂದರ್ಯವನ್ನು ನೋಡಿ ಆ ಢೋಂಗಿ ಸನ್ಯಾಸಿಯು ಕಾಮಾಂಧನಾಗಿ ಅವಳಿಗೆ ಉತ್ತರಿಸಿದನು. ಸುಂದರೀ ! ನನ್ನ ವ್ರತಗಳು ಇವತ್ತೇ ಮುಗಿಯಿತು. ನಾನು ಈಗಲೇ ನಿನ್ನೊಡನೆ ಮದುವೆ ಮಾಡಿಕೊಳ್ಳಲು ಸಿದ್ಧನಾಗಿದ್ದೇನೆ. ಹೀಗೆಂದನು. ಇಂಥಹ ಢೋಂಗಿ ತಪಸ್ವಿಗಳು ಇಂದ್ರಿಯವೆಂಬ ಮದೋನ್ಮತ್ತ ಆನೆಯನ್ನು ವಶ ಮಾಡಿ ಕೊಳ್ಳದೆ ಕಾಮನೆಂಬ ದೊಡ್ಡ ಹೊಂಡದಲ್ಲಿ ಬಿದ್ದು ಪಾಪ ಅರ್ಜನೆಯನ್ನು ಮಾಡುತ್ತಾರೆ.

ತ್ಯಾಗಂ ಚೇಂದ್ರಿಯ ದಂತಿನೋ ಮದಯತಃ ।
ಸ್ವಾದೋ ರಸ ಸ್ಯಾನಿಶಂ ॥
ಷೋಢಾ ಬಾಹ್ಯಮಹಂ ಸ್ತುವೇಶಿವಗತಿ–
ಪ್ರಾಪ್ತ್ಯೈಭ್ಯು ಪಾಯಂ ತಪಃ ॥

ಈ ಆರು ಪ್ರಕಾರದ ಬಾಹ್ಯ ತಪಗಳು ಇಂದ್ರಿಯ ನಿರೋಧ ಮತ್ತು ಇಂದ್ರಿಯ ನಿಗ್ರಹಕ್ಕೆ ಕಾರಣವಾಗಿದೆ. ಪಾಖಂಡೀ ಢೋಂಗಿ ಸಾಧುಗಳು ಇದನ್ನು ತಿಳಿಯದೆ ಇಂದ್ರಿಯಗಳ ಜಾಲದಲ್ಲಿ ಸಿಕ್ಕಿ ಎಲ್ಲಾ ಸುಖಗಳಿಂದ ವಂಚಿತರಾಗಿ ಲೋಕಾಪವಾದಕ್ಕೆ ಪಾತ್ರರಾಗಿ ಅಪರಾಧಿಗಳಾಗುತ್ತಾರೆ. ಆಗಲೇ ಆ ಢೋಂಗಿ ಸಾಧುವಿನ ವಿಷಯವನ್ನು ತಿಳಿದು ಆ ಕನ್ಯೆಯ ತಂದೆಯು ಅವನಿಗೆ ವಸ್ತ್ರ ಉಡಿಸಿ ಮನೆಗೆ ಕಳುಹಿಸಿದನು. ಆದುದರಿಂದ ಭವ್ಯರೇ ! ಮನಸ್ಸನ್ನು ವಶ ಮಾಡಿ ಕೊಳ್ಳದೆ ಸಾಧುವಾದರೂ ಏನಾಯ್ತು? ಅದರಿಂದ ಏನೂ ಪ್ರಯೋಜನವಿಲ್ಲ. ಆದುದರಿಂದ ಮನಸ್ಸನ್ನು ವಶ ಮಾಡಿ ಕೊಳ್ಳಿರಿ. ಉತ್ತಮ ತಪ ಭಾವನೆಯನ್ನು ಮನಸ್ಸಿನಲ್ಲಿಟ್ಟ ಕೊಳ್ಳಿರಿ. ಆತ್ಮನು ಮತ್ತು ಶರೀರವು ಬೇರೆ ಬೇರೆ ಯಾಗಿದೆ ಎಂದು ತಿಳಿದು ಭೇದ ವಿಜ್ಞಾನದ ಬಲದಿಂದ ಯಾರು ತಪವನ್ನು ಆಚರಿಸುತ್ತಾರೆಯೋ ಅವರು ಮೂಲ ಮತ್ತು ಉತ್ತಮ ಗುಣಗಳನ್ನು ಪರಿಪಾಲಿಸುತ್ತಾರೆ.

ವದ ಸಮಿದಿಂದಿಯರೋಹೋ ಲೋಚೋ ಅವಾಶಯ
ಮಚೇಲಮಣ್ಣಾಣಂ ।
ಖಿದಿಸಯಣ ಮದಂತವಣಂ ಠಿದಿಭೋಯಣ ಮೇಯ ಭುತ್ತಂ ಚ
ಪ್ರಶ್ನೋತ್ತರ ಮಾಣಿಕ್ಯಮಾಲಾ.

ಪಂಚ ಮಹಾವ್ರತ, ಪಂಚ ಸಮಿತಿ, ಪಂಚೇಂದ್ರಿಯ ನಿರೋಧ, ಕೇಶಲೋಚ, ಆರು ಆವಶ್ಯಕ ಕ್ರಿಯೆಗಳು, ವಸ್ತ್ರರಹಿತವಾಗಿರುವುದು, ಸ್ನಾನ ಮಾಡದಿರುವುದು, ಹಲ್ಲುಜ್ಜದಿರುವುದು, ಭೂಮಿ ಶಯನ, ನಿತ್ತು ಕೊಂಡು ಆಹಾರ ತೆಗೆದುಕೊಳ್ಳುವುದು, ಒಂದು ಸಾರಿ ನಿರ್ದೋಷ

ಆಹಾರವನ್ನು ತೆಗೆದುಕೊಳ್ಳುವುದು. ಹೀಗೆ ಇವು ಇಪ್ಪತ್ತೆಂಟು ಮೂಲ ಗುಣಗಳು ಸಾಧುಗಳಿಗೆ ಹೇಳಿದ್ದಾರೆ. ಅವರು ತಮ್ಮ ಮೂಲಗುಣಗಳಲ್ಲಿ ದೋಷವು ಬರದಂತೆ ನೋಡಿ ಕೊಳ್ಳುತ್ತಾರೆ. ಯಾವಾಗಲೂ ನಿತ್ಯಾನಂದ ಮಯವಾದ ಸಮ್ಯಗ್ದರ್ಶನದಿಂದ ಪ್ರಾಪ್ತವಾದ ಆತ್ಮರಸವನ್ನು ಕುಡಿಯು ತ್ತಿರುತ್ತಾರೆ. ಆ ಸಾಧುಗಳೇ ವಂದ್ಯರಾಗಿರುತ್ತಾರೆ. ಹಾಗೆಯೇ ಅವರೇ ತನ್ನ ಉದ್ಧಾರ ಮಾಡಿಕೊಳ್ಳುತ್ತಾರೆ. ಇತರರ ಉದ್ಧಾರವನ್ನೂ ಮಾಡು ತ್ತಾರೆ. ಇಂಥಹ ಸಾಧುಗಳ ಸಂಗತಿಯಲ್ಲಿದ್ದು ಆತ್ಮರಸ ಪಾನ ಮಾಡುವ ಭವ್ಯರೇ ತಮ್ಮ ಕಲ್ಯಾಣವನ್ನು ಮಾಡಿಕೊಳ್ಳುತ್ತಾರೆ. ಇಂಥಹ ಸಾಧು ಜನರ ಸಂಗತಿಯು ಬಹಳ ದೊಡ್ಡ ಭಾಗ್ಯದಿಂದ ಲಭಿಸುತ್ತದೆ. ಆ ಭಾಗ್ಯವು ದೊರೆತರೂ ಯಾರು ತನ್ನ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳುವುದಿಲ್ಲವೋ ಅದು ಅವರ ದುರ್ಭಾಗ್ಯವೆಂದೇ ತಿಳಿಯಬೇಕು. ಈ ವಿಷಯದಲ್ಲಿ ಒಬ್ಬ ಒಕ್ಕಲಿಗನ ಕಥೆಯನ್ನು ಕೇಳಿರಿ.

ಒಬ್ಬ ಒಕ್ಕಲಿಗನ ಹೊಲದಲ್ಲಿ ಸಾಯಂಕಾಲವಾಯ್ತೆಂದು ಮುನೀ ಶ್ವರರು ಸಾಮಾಯಿಕಕ್ಕೆ ಕುಳಿತರು, ಒಕ್ಕಲಿಗನು ಮಿಥ್ಯಾದೃಷ್ಟಿ ಅಜ್ಞಾನಿ ಯಾಗಿದ್ದನು. ಅಲ್ಲಿ ಬಂದು ಮುನಿಗಳಿಗೆ ಹೇಳುತ್ತಾನೆ. ಸಾಧು! ಇಲ್ಲಿ ಏಕೆ ಕೂತಿದ್ದೀ, ಇಲ್ಲಿಂದ ಎದ್ದು ಹೋಗು? ಇಲ್ಲವಾದರೆ ನಿನ್ನ ಗತಿ ಒಳ್ಳೆಯ ದಾಗಲಾರದು. ಮುನೀಶ್ವರರೂ ಧ್ಯಾನಮಗ್ನರಾದ ಕಾರಣ ಧ್ಯಾನವನ್ನು ಬಿಡಲಿಲ್ಲ. ಒಕ್ಕಲಿಗನು ಕ್ರುದ್ಧನಾಗಿ ಸಮೀಪ ಬಂದು, ಸಾಧು ಕೇಳುವು ದಿಲ್ಲವೋ! ನಿನ್ನನ್ನು ಈಗಲೇ ಹೊಡೆದು ಹಾಕುತ್ತೇನೆ ಎಂದು ಕಠೋರ ಶಬ್ದಗಳಿಂದ ಗದರಿಸಿದನು. ಆ ಸಮಯದಲ್ಲಿ ಮುನಿಗಳು ಸ್ವಸ್ವರೂಪವನ್ನು ಚಿಂತಿಸುತ್ತಿದ್ದರು. ಒಂದು ಅಧ್ಯಾತ್ಮ ಪದದಲ್ಲಿ ಹೀಗೆ ಹೇಳಿದ್ದಾರೆ.

ಆಪತರೇ ಪರಕೋ ತಾರೇ ಜೈಸೆ ಜಲನೈಯಾ
ಕೇವಲ ಶುದ್ಧ ಸ್ವಭಾವ ಹೈ ಸಮುಝೋ ಸಮುಝೈಯಾ
ದೇವ ಹೈ ವಹೈ ಗುರು ಹೈ ವಹೈ ಶಿವ ವಹೈ ಬಸಯ್ಯಾ
ತ್ರಿಭುವನ ಮುಕುಟ ಚಹೇ ಸದಾ ಚೇತೋ ಸಬ ಭೈಯಾ

ಈ ಪ್ರಕಾರದಿಂದ ಸ್ವಸ್ವರೂಪವನ್ನು ವಿಚಾರ ಮಾಡುತ್ತಿದ್ದರು. ಆ ಒಕ್ಕಲಿಗನು ಸಿಟ್ಟಿನಿಂದ ಕಲ್ಲು ತೆಗೆದುಕೊಂಡು ಬಂದನು. ಆಗ ಅವನಿಗೆ ಬುದ್ಧಿ ಕಲಿಸುವುದಕ್ಕೋಸ್ಕರ ವನದೇವಿಯು ಬಂದು ಸರ್ಪದ ವೇಷ ಧರಿಸಿ ಅವನ ಕೈಯನ್ನು ವೇಷ್ಟಿಸಿದಳು. ಮತ್ತು ಹೀಗೆಂದಳು ದುಷ್ಟನೇ! ನೀನು ಈ ನಿರಪರಾಧಿಯಾದ ಮುನಿಗಳಿಗೆ ಕೈಯಲ್ಲಿ ಕಲ್ಲು ಹಿಡಿದುಕೊಂಡು ಹೊಡೆಯಲಿಕ್ಕೆ ಬಂದಿರುತ್ತೀ. ಇವರು ನಿನಗೆ ಏನು ಮಾಡಿದರು? ನಿನಗೆ ಏನು ಬೇಕು ಅದು ಕೇಳು. ವ್ಯರ್ಥವಾದ ಪಾಪವನ್ನು ಮಾಡಬೇಡ.

ಒಕ್ಕಲಿಗನು ನನಗೆ ಧನ ಬೇಕಾಗಿದೆ ಎಂದನು. ಆಗ ದೇವಿಯು ಇಗೋ ತೆಗೆದುಕೋ ಎಂದು ಹೇಳಿ ಚಿಂತಾಮಣಿ ರತ್ನವನ್ನು ಅವನ ಮುಖಕ್ಕೆ ಎಸೆದಳು. ಆ ಚಿಂತಾಮಣಿ ರತ್ನವು ಅವನ ಕುತ್ತಿಗೆಗೆ ತಾಗಿ ಅವನು ಸತ್ತನು. ಆರ್ತರೌದ್ರ ಭಾವಗಳಿಂದ ಸತ್ತು ಅದೇ ಕಾಡಿನಲ್ಲಿ ವ್ಯಂತರ ದೇವನಾಗಿ ಹುಟ್ಟಿದನು. ಪುನಶ್ಚ ವೈರ ವಿರೋಧನನ್ನು ಬೆಳಿಸಿ ಸಂಸಾರದಲ್ಲಿ ತಿರುಗಾಡಿದನು. ಆದುದರಿಂದ ಭವ್ಯರೇ! ಗುರುಗಳ ಸಂಗತಿಯು ಪ್ರಾಪ್ತವಾದರೂ ಮೂರ್ಖ ಜನರು ಅದರ ಉಪಯೋಗವನ್ನು ಆತ್ಮಕಲ್ಯಾಣಕ್ಕೋಸ್ಕರವಾಗಿ ಮಾಡಿಕೊಳ್ಳದೆ ದುರುಪಯೋಗ ಮಾಡಿ ದುರ್ಗತಿಗೆ ಹೋಗುತ್ತಾರೆ. ಆದುದರಿಂದ ಭವ್ಯರೇ! ನೀವು ಮನಸ್ಸಿನ ರಾಗದ್ವೇಷಾದಿ ವಿಕಾರಗಳನ್ನು ದೂರ ಮಾಡಿ ಮನಸ್ಸನ್ನು ಪವಿತ್ರ ಮಾಡಿ ಉತ್ತಮ ತಪ ಧರ್ಮವನ್ನು ಧರಿಸಿರಿ.

ಭವ್ಯಾತ್ಮರೇ! ಸುಖ ದುಃಖಗಳನ್ನು ಕೊಡುವವರು ತಮ್ಮ ಶುಭಾಶುಭ ಕ್ರಿಯೆಗಳೇ ಆಗಿವೆ. ನಿಮಗೆ ಸುಖ ಬೇಕಾದರೆ ಶುಭ ಪರಿಣಾಮವನ್ನಿಡಿರಿ. ಅದರಿಂದ ಪುಣ್ಯಾಸ್ರವವಾಗಿ ನಿಮಗೆ ಸುಖವು ದೊರೆಯುವುದು ಆದುದರಿಂದ ಇಂದ್ರಿಯ ನಿರೋಧವನ್ನು ಮಾಡಿರಿ. ನಿಶ್ಚಿಂತರಾಗಿ ಯಥಾಶಕ್ತಿ ತಪವನ್ನು ಆಚರಿಸಿರಿ. ತಪವಿಲ್ಲದಿದ್ದರೆ ಮಾನವ ಜೀವನವು ವ್ಯರ್ಥವಾಗಿದೆ. ಮನುಷ್ಯ ಜನ್ಮದಲ್ಲಿ ತಪವನ್ನಾಚರಿಸುವ ಶಕ್ತಿಯಿದೆ. ಎಲ್ಲಾ

ಗತಿಗಳಲ್ಲಿಯೂ ಮಾನವಗತಿಯು ಶ್ರೇಷ್ಟವಾಗಿದೆ. ಆದುದರಿಂದ ನಿಮ್ಮ ಶಕ್ತಿಯನ್ನು ಮರೆ ಮಾಚದೆ ಕರ್ಮವನ್ನು ನಾಶ ಮಾಡುವುದಕ್ಕೋಸ್ಕರ ವಾಗಿ ತಪಶ್ಚರ್ಯೆಯನ್ನು ಮಾಡುವುದು ಯೋಗ್ಯವಾಗಿದೆ.

ಒಂದಾನೊಂದು ಕಾಲದಲ್ಲಿ ಒಬ್ಬ ಮುನಿಗಳು ಕಾಡಿನಲ್ಲಿ ಧ್ಯಾನ ಮಗ್ನರಾಗಿದ್ದರು. ಅದೇ ಮಾರ್ಗದಿಂದ ಒಬ್ಬ ರಾಜನು ನಡೆದಿದ್ದನು. ಅವನು ಕೋಪದಿಂದ ತನ್ನ ನಾಯಿಗಳನ್ನು ಮುನಿಗಳ ಮೇಲೆ ಬಿಟ್ಟನು. ಆದರೆ ಮುನಿಗಳ ತಪೋಬಲದೆದುರಿನಲ್ಲಿ ನಾಯಿಗಳು ಹತಬಲರಾಗಿ ಮುನಿಗಳಿಗೆ ಮೂರು ಪ್ರದಕ್ಷಿಣೆ ಕೊಟ್ಟು ಅವರೆದುರಿನಲ್ಲಿ ಕೂತುಕೊಂಡವು. ಇದನ್ನು ನೋಡಿ ರಾಜನು ಹೇಳುತ್ತಾನೆ. ಈ ಮುನಿಯು ಮಾಂತ್ರಿಕನೆಂದು ಕಾಣುತ್ತಾನೆ. ನನ್ನ ಬಲಿಷ್ಟವಾದ ನಾಯಿಗಳನ್ನು ಇವನು ವಶಮಾಡಿ ಕೊಂಡನು. ಇವನ ಶಕ್ತಿ ಎಷ್ಟಿದೆ ಎಂದು ನೋಡುತ್ತೇನೆ. ಎಂದು ಹೇಳಿ ಮುನಿಗಳ ಸಮೀಪಕ್ಕೆ ಹೋಗಿ ಅವರನ್ನು ಎತ್ತಲು ಪ್ರಯತ್ನ ಮಾಡಿದನು. ಆ ಸಮಯದಲ್ಲಿ ರಾಜನ ಕೈಯು ಆ ಬಂಡೆಯ ಕಲ್ಲಿನೆಡೆಯಲ್ಲಿ ಸಿಕ್ಕಿ ಕೊಂಡಿತು. ರಾಜನು ಬೊಬ್ಬೆ ಹೊಡೆಯ ಹತ್ತಿದನು. ಅವನು ಮುನಿಗಳಿಗೆ ನಾನಾ ಅಪಶಬ್ದಗಳಿಂದ ಬೈಯ ತೊಡಗಿದನು. ಆದರೂ ಮುನೀಶ್ವರರು ತನ್ನ ಧ್ಯಾನದಲ್ಲಿಯೇ ಮಗ್ನರಾಗಿದ್ದರು.

ಅವಿದ್ಯಾಭಿದುರಂ ಜ್ಯೋತಿಃ ಪರಂ ಜ್ಞಾನಮಯಂ ಮಹಾನ್
ತತ್ಪ್ರಷ್ಟವ್ಯಂ ತದ್‌ದ್ರಷ್ಟವ್ಯಂ ತದೇಷ್ಟವ್ಯಂ ಮುಮುಕ್ಷುಭಿಃ ॥

ಭಾವದೀಪಿಕಾ.

ಆ ಮುನಿಗಳು ಆ ಸಮಯದಲ್ಲಿ ಸಂಕಲ್ಪವಿಕಲ್ಪಗಳನ್ನು ದೂರ ಮಾಡಿ ಉತ್ತಮ ಜ್ಞಾನದರ್ಶನಮಯನಾದ ಮಹಾಜ್ಯೋತಿ ಸ್ವರೂಪ ನಾದ ಆತ್ಮನಲ್ಲಿ ತನ್ಮಯನಾಗಿ ನಿಜಾನಂದ ರಸಪಾನದಲ್ಲಿ ಮಗ್ನರಾಗಿದ್ದರು. ರಾಜನು ಪುನಃ ಕ್ರೋಧಿತನಾಗಿ ತನ್ನ ಶಸ್ತ್ರಗಳನ್ನು ತೆಗೆದುಕೊಂಡು ಮುನೀ ಶ್ವರರನ್ನು ಹೊಡೆಯಲೆಂದು ಕೈಯನ್ನು ಮೇಲಕ್ಕೆತ್ತಲು ವನದೇವತೆಯು

ಅವನ ಕೈಗಳನ್ನು ಹಾಗೆಯೇ ಬಂಧಿಸಿತು. ಆಗ ರಾಜನು ಹೆಚ್ಚಾಗಿ ಕ್ರುದ್ಧ ನಾದನು. ಆಗ ಮಂತ್ರಿಗಳು ಹೇಳುತ್ತಾರೆ. ' ರಾಜನ್ ! ನಿಮ್ಮ ಶಸ್ತ್ರ ದಿಂದ ಮುನಿಗಳ ಘಾತವಾಗದೆ ನಿಮಗೇನೇಯೋ ದುಃಖವಾಗಬಹುದು. ಇದನ್ನು ಕೇಳಿ ರಾಜನಿಗೆ ಇನ್ನೂ ಅಧಿಕ ಸಿಟ್ಟು ಬಂದು ಮುನಿಗಳನ್ನು ಹೊಡೆಯಲು ವಿಚಾರ ಮಾಡುತ್ತಾನೆ. ಆ ಸಮಯದಲ್ಲಿ ದೇವತೆಯು ವೈಕ್ರಿಯಿಕ ಪಾಶದಿಂದ ರಾಜನನ್ನು ಕಟ್ಟಿ ಹಾಕಿತು. ಅವನ ಬಾಯಿ ಯನ್ನು ಮುಚ್ಚಿ ಬಿಟ್ಟಿತು. ಆ ಸಮಯದಲ್ಲಿ ಮುನಿಗಳ ಧ್ಯಾನವು ಪೂರ್ಣ ವಾಗಿ ರಾಜನನ್ನು ನೋಡಿ ಪ್ರಸನ್ನ ಮುದ್ರೆಯಿಂದ ರಾಜನಿಗೆ ಆಶೀರ್ವಾದ ವನ್ನು ಕೊಟ್ಟರು. ರಾಜನು ಕೈಜೋಡಿಸಿ ಸ್ವಾಮಿನ್ ! ನೀವು ಅನೇಕ ವಿದ್ಯೆಗಳ ಅಧಿಪತಿಯಾಗಿರುತ್ತೀರಿ. ನಾನು ಮಾಡಿದ ಎಲ್ಲಾ ಅಪರಾಧ ಗಳನ್ನು ಸಹನೆ ಮಾಡಿ ನನ್ನನ್ನು ಬಂಧನದಿಂದ ಬಿಡಿಸಿದ್ದೀರಿ. ಇದನ್ನೆಲ್ಲಾ ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ. ನಿಮ್ಮ ವಿದ್ಯೆಯನ್ನು ನನಗೂ ಕೊಟ್ಟು ನಿಮ್ಮಂತೆ ನನ್ನನ್ನು ಮಾಡಿರಿ.

ಮುನಿಗಳು ದಿವ್ಯಜ್ಞಾನದಿಂದ ಇವನು ಆಸನ್ನ ಭವ್ಯನೆಂದು ತಿಳಿದರು ಅವನಿಗೆ ಅದೇ ಸಮಯ ಮುನಿದೀಕ್ಷೆಯನ್ನು ಕೊಡುತ್ತಾರೆ. ರಾಜನು ಮುನಿಯಾಗಿ, ಘೋರ ತಪವನ್ನು ಮಾಡಿ ಘಾತಿ ಕರ್ಮಗಳನ್ನು ನಾಶ ಮಾಡಿ ಕೇವಲಿಯಾದನು. ನಂತರ ಅವನಿಗೆ ಮುಕ್ತಿ ಸುಖವು ಲಭಿಸಿತು.

ಆದುದರಿಂದ ಭವ್ಯಾತ್ಮರೇ ! ನೀವೂ ಆತ್ಮಕಲ್ಯಾಣಕ್ಕೋಸ್ಕರವಾಗಿ ಆಲಸ್ಯವನ್ನು ಬಿಟ್ಟು ತಪಶ್ಚರ್ಯೆಯನ್ನು ಮಾಡಿ ಸುಖಿಯಾಗಿರಿ. ಇದು ಆಚಾರ್ಯ ವಚನವಾಗಿದೆ.

ಭವ್ಯಾತ್ಮನ್ ! ತಪಸ್ಸನ್ನು ಮಾಡುವ ಬುದ್ಧಿಯು ಎಲ್ಲರಿಗೂ ಆಗುವುದಿಲ್ಲ. ಯಾರಿಗಾದರೊಬ್ಬ ಪುಣ್ಯಶಾಲೀ ಜೀವನಿಗೇನೆಯೇ ಆ ಪವಿತ್ರಭಾವನೆಯಾಗುತ್ತದೆ. ಪರಿಗ್ರಹಗಳ ಮೇಲಿನ ಮಮತೆಯನ್ನು ಬಿಡುವ ಧೈರ್ಯವು ಸಾಮಾನ್ಯ ಜನರಿಗಾಗಲು ಸಾಧ್ಯವಿಲ್ಲ. ಅನಾದಿಕಾಲ

ದಿಂದ ಮೋಹನೀಯ ಕರ್ಮದ ಉದಯದಿಂದ ಧನ ಕನಕ ಮೊದಲಾದ ೨೪ ಪ್ರಕಾರದ ಪರಿಗ್ರಹಗಳಲ್ಲಿ ಈ ಆತ್ಮನು ಆಸಕ್ತನಾಗಿದ್ದಾನೆ. ಅತ್ಯಂತ ಬಲಶಾಲಿಯಾದ ಆತ್ಮನನ್ನು ಈ ಪರಿಗ್ರಹಗಳು ಅನಂತಕಾಲದಿಂದ ಕಟ್ಟಿ ಹಾಕಿವೆ. ಪರಿಗ್ರಹಗಳ ಮೇಲಿನ ಆಸಕ್ತಿಗೆ ಮೂರ್ಛೆ ಎಂದು ಹೇಳುತ್ತಾರೆ. ಪಿತ್ತದ ಉದ್ರೇಕವಾದರೆ ಮನುಷ್ಯನಿಗೆ ಮೂರ್ಛಿತಾವಸ್ಥೆಯು ಬರುತ್ತದೆ. ಅದು ಕೂಡಲೇ ದೂರವಾಗುತ್ತದೆ. ಆದರೆ ಈ ಪರಿಗ್ರಹ ಮೂರ್ಛೆಯು ಮಾತ್ರ ಅನಂತ ಕಾಲದಿಂದ ಈ ಜೀವನಿಗೆ ಬಂದಿರುತ್ತದೆ. ಸರ್ವ ಮೂರ್ಛೆಗಳಲ್ಲಿ ಈ ಮೂರ್ಛೆಯು ಹೆಚ್ಚಿನ ಬಲಶಾಲಿಯಾಗಿದೆ. ಹೀಗೆ ತಿಳಿದು ನೀವು ಈ ಪರಿಗ್ರಹದ ಪಾಶದಿಂದ ನಿಮ್ಮನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡಿರಿ. ಹಾಗಲ್ಲದೆ ಆತ್ಮಕಲ್ಯಾಣವಾಗಲಾರದು.

ವಿಪತ್ತಿಮಾತ್ಮನೋ ಮೂಢಃ ಪರೇಷಾಮಿವ ನೇಕ್ಷತೇ ।
ದಹ್ಯಮಾನಮೃಗಾಕೀರ್ಣವನಾಂತರ ತರುಸ್ಥವತ್ ॥

ಒಂದಾನೊಂದು ಸಮಯ ಕಾಡಿನಿಂದ ಒಬ್ಬ ಮನುಷ್ಯನು ತನ್ನ ಮನೆಯ ಕಡೆಗೆ ಹೋಗುತ್ತಿದ್ದನು. ಇಷ್ಟರಲ್ಲಿ ಆ ಕಾಡಿಗೆ ಕಾಡ್ಕಿಚ್ಚು ಹತ್ತಿತು, ಆ ಅಗ್ನಿಯ ಭಯದಿಂದ ಎಲ್ಲಾ ಪಶು ಪಕ್ಷಿಗಳು ಓಡಿ ಅದೇ ಹಾದಿಗೆ ಬಂದವು. ಹೀಗಿರುವಾಗ ಆ ಸಮಯದಲ್ಲಿ ಆ ಮನುಷ್ಯನು ಬೆಂಕಿಯಿಂದ ತನ್ನನ್ನು ರಕ್ಷಿಸಲು ವಿಚಾರ ಮಾಡುತ್ತಿದ್ದಾನೆ. ಏನು ಮಾಡಬೇಕೆಂದು ತೋಚುವುದಿಲ್ಲ. ಒಂದು ಸಾರಿ ವಿಚಾರ ಮಾಡುತ್ತಾನೆ ಮರದ ಮೇಲೆ ಏರಿ ಕೂತುಕೊಳ್ಳಬೇಕೆಂದು. ಆದರೆ ಮರವೂ ಸುಟ್ಟು ಭಸ್ಮವಾದರೆ ನನ್ನ ರಕ್ಷಣೆ ಹೇಗೆ? ಹೇಗಾದರೂ ಆಗಲಿ ಎಂದು ದೃಢ ನಿಶ್ಚಯ ಮಾಡಿ ಅಲ್ಲಿಯೇ ಕುಳಿತು ಕೊಂಡನು. ಇಷ್ಟರಲ್ಲಿ ಅಗ್ನಿಯು ಹಬ್ಬಿಕೊಂಡು ನಾಲ್ಕುಕಡೆಗಳಿಂದಲೂ ಬಂತು. ಇಷ್ಟರಲ್ಲಿ ಇನ್ನೊಬ್ಬ ಮನುಷ್ಯ ಭಯಭೀತನಾಗಿ ಓಡಿ ಬಂದನು. ಅವನ ಸಮೀಪದಲ್ಲಿಯೇ ಕುಳಿತು ಕೊಂಡನು. ಮತ್ತು ಭಯದಿಂದ ಕಾತರನಾಗಿ ನನ್ನನ್ನು ರಕ್ಷಿಸು ಎಂದನು. ಅವನನ್ನು

ತನ್ನ ಸಮೀಪದಲ್ಲಿಯೇ ಕುಳ್ಳಿರಿಸಿದನು. ಬೆಂಕಿಯು ನಾಲ್ಕು ಕಡೆಗಳಿಂದಲೂ ಹರಡಿತು. ಕರ್ಮದ ಗತಿಯು ವಿಚಿತ್ರವಾಗಿದೆ. ಒಂದು ಸಂಕಟವು ಮುಗಿಯುವುದರೊಳಗೆ ಇನ್ನೊಂದು ಸಂಕಟವು ಬರುತ್ತದೆ. ಇಷ್ಟರಲ್ಲಿ ಅಗ್ನಿಯ ಭಯದಿಂದ ಸಂತಪ್ತವಾದ ಒಂದು ಭಯಂಕರ ಸರ್ಪವು ಅದೇ ಮಾರ್ಗದಿಂದ ಬರುತ್ತಿತ್ತು. ಅದು ಅವನ ಸಮೀಪದಲ್ಲಿ ಕೂತುಕೊಂಡಿದ್ದ ಮನುಷ್ಯನನ್ನು ಕಚ್ಚಿತು. ಅವನು ವಿಷವೇದನೆಯಿಂದ ಗಾಬರಿಯಾದನು. ಆದರೆ ಅವನ ಸಮೀಪ ಕೂತಿದ್ದ ಧರ್ಮಾತ್ಮನು ಈ ವಿಷಯವನ್ನು ನೋಡಿ ಧೈರ್ಯದಿಂದ, ನಿಶ್ಚಿಂತನಾಗಿ ಭಗವಂತನ ಸ್ತುತಿಯನ್ನು ಮಾಡ ತೊಡಗಿದನು.

> ಕ್ರುದ್ಧಾಶೀವಿಷದುಷ್ಟದುರ್ಜಯವಿಷ
> ಜ್ವಾಲಾವಲೀ ವಿಕ್ರಮೋ-
> ವಿದ್ಯಾಭೇಷಜ ಮಂತ್ರ ತೋಯಹವನೈ
> ರ್ಯಾತಿ ಪ್ರಶಾಂತಿಂ ಯಥಾ ॥

ಶಾಂತಿಭಕ್ತಿ.

ಆ ತಪಸ್ವಿಯು ಆ ಸಮಯದಲ್ಲಿ ಧೈರ್ಯವೆಂಬ ಖಡ್ಗವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ವಿಶ್ವಾಸ ಪೂರ್ವಕವಾಗಿ ದೃಢತೆಯಿಂದ ಭಗವಂತನ ಸ್ತುತಿಯನ್ನು ಮಾಡ ತೊಡಗಿದನು. ಅವನ ಭಕ್ತಿ ಪ್ರಭಾವದಿಂದ ಆಕಾಶವಾಣಿಯಾಯಿತು. ‘ ಭದ್ರ ! ನೀನು ಹೆದರಬೇಡ. ನೀನು ಕೂತ ಸಮೀಪದಲ್ಲಿರುವ ಬಂಡೆಯ ಕೆಳಗೆ ನೀರಿನ ಒಸರಿದೆ, ಅದರಿಂದ ನೀರು ತೆಗೆದುಕೊಂಡು ಭಗವಂತನ ಸ್ತೋತ್ರವನ್ನು ಹೇಳುತ್ತಾ ನೀರನ್ನು ಊದಿಕೊಂಡು ಸರ್ಪ ಕಚ್ಚಿದ ಮನುಷ್ಯನ ಮೇಲೆ ಆ ನೀರನ್ನು ಹಾಕು. ಹಾಗೆಯೇ ನಾಲ್ಕು ಕಡೆಯಲ್ಲಿರುವ ಬೆಂಕಿಯ ಮೇಲೆಯೂ ನೀರನ್ನು ಚೆಲ್ಲು ’ ಎಂದು ಶಬ್ದವು ಕೇಳಿ ಬಂತು. ಅವನು ಧೈರ್ಯವನ್ನು ಬಿಡದೆ ಹಾಗೆಯೇ ಮಾಡಿದನು. ಮಂತ್ರ ಪ್ರಭಾವದಿಂದ ವಿಘ್ನವು ದೂರವಾಯ್ತು.

ಭಯಂಕರ ಅಗ್ನಿಯೂ ಶಾಂತವಾಯ್ತು ಸರ್ಪದ ವಿಷವೂ ದೂರವಾಯ್ತು. ಯಾರ ಹೃದಯದಲ್ಲಿ ಭಕ್ತಿ ಎಂಬ ಔಷಧವಿದೆಯೋ ಅವನಿಗೆ ಯಾವ ಬಾಧೆಯೂ ಇಲ್ಲ. ವಿಕಾರ ಭಾವನೆಗಳನ್ನು ಬಿಡುವುದರಿಂದ ತಪಸ್ಸು ಆಗುತ್ತದೆ. ನಿಸ್ಸಂಗನಾಗಿ ಧರ್ಮದಲ್ಲಿ ಸ್ಥಿರವಿರುವುದರಿಂದ ತಪಸ್ಸು ಆಚರಿಸಲಾಗತ್ತದೆ. ಆದುದರಿಂದ ಭವ್ಯರೇ! ನಿಮ್ಮ ಶಕ್ತಿಗನುಸಾರವಾಗಿ ತಪಸ್ಸನ್ನು ಆಚರಿಸಿರಿ. ಯಾರು ಧನ ಕುಟುಂಬ ಮೊದಲಾದ ಪರಿಗ್ರಹಗಳನ್ನು ಬಿಟ್ಟು ಕಾಡಿನಲ್ಲಿ ತಪಸ್ಸನ್ನು ಆಚರಿಸುತ್ತಾರೆಯೋ ಅವರು ಆತ್ಮನಿಂದ ಕರ್ಮವನ್ನು ಬೇರೆ ಮಾಡಿ ಆತ್ಮಶುದ್ಧಿಯನ್ನು ಮಾಡಿಕೊಳ್ಳುತ್ತಾರೆ. ಅಂಥಹ ಮುನಿಗಳು ಲೋಕಕಲ್ಯಾಣವನ್ನು ಮಾಡುತ್ತಾರೆ.

ದಿನಕರಕರನಿಕರಸಂತಪ್ತಶಿಲಾನಿಚಯೇಷು ನಿಸ್ಪೃಹಾಃ ।
ಮಲಪಟಲಾವಲಿಪ್ತತನವಃ ಶಿಥಿಲೀಕೃತಕರ್ಮಬಂಧನಾಃ ॥

ಯೋಗಿಭಕ್ತಿ.

ಸೂರ್ಯನ ಕಿರಣಗಳಿಂದ ಅತ್ಯಂತ ಸಂತಪ್ತವಾದ ಕಲ್ಲಿನ ಮೇಲೆ ಆ ನಿಸ್ಪೃಹರಾದ ಯೋಗಿಗಳು ಕೂತುಕೊಳ್ಳುತ್ತಾರೆ. ಆ ತಾಪದಿಂದ ಮುನಿಗಳ ಶರೀರದಲ್ಲಿ ಬೆವರು ಬಿಟ್ಟಿತು. ಗಾಳಿಯಿಂದ ಆ ಬೆವರಿನ ಮೇಲೆ ನಾಲ್ಕು ಕಡೆಗಳಿಂದಲೂ ಬರುತ್ತಿರುವ ಧೂಳುಗಳು ಬಂದು ಕೂತುಕೊಂಡು ಅವರ ಶರೀರವು ಮಲಮಯವಾಯ್ತು. ನಾಲ್ಕು ಕಡೆಗಳಿಂದಲೂ ಅವರಿಗೆ ಬಾಧೆಯಾಗುತ್ತಿದೆ. ಆದರೂ ಅವರು ತಮ್ಮ ಸ್ವರೂಪದಿಂದ ವಿಚಲಿತವಾಗದೆ ತಮ್ಮ ಪೂರ್ವ ಸಂಚಿತ ಕರ್ಮವನ್ನು ಬಿಡಿಸಲಿಕ್ಕೆ ಘೋರ ತಪಶ್ಚರ್ಯೆಯನ್ನು ಮಾಡುತ್ತಾರೆ. ಹೀಗಿರುವ ಮುನಿಗಳು ಸ್ವಯಂ ಸಿದ್ಧಿಯನ್ನು ಪಡೆಯುತ್ತಾರೆ. ಇತರರನ್ನು ಉದ್ಧರಿಸುತ್ತಾರೆ. ಅವರ ದರ್ಶನದಿಂದ ಬೇರೆಯವರು ದುಃಖದಿಂದ ಮುಕ್ತರಾಗುತ್ತಾರೆ.

ಒಂದಾನೊಂದು ಸಮಯ ಒಬ್ಬ ಬೇಡನು ಮುನಿಗಳ ನಿಂದೆಯನ್ನು ಮಾಡುತ್ತಿದ್ದನು. ಅದೇ ಸಮಯದಲ್ಲಿ ಒಬ್ಬ ಬ್ರಾಹ್ಮಣನು ಆ ಹಾದಿ

ಯಿಂದ ನಡೆದಿದ್ದನು. ' ಎಲೇ ಪಾಪಿಯೇ, ವಿನಾಕಾರಣ ಮುನಿಗಳ ನಿಂದೆಯನ್ನು ಮಾಡುತ್ತಿದ್ದೀಯೇ ? ನೀನು ವ್ಯರ್ಥವಾಗಿ ಸಾಯಬೇಡ " ಎಂದನು. ಆಗ ಆ ಬೇಡನು ' ಅವರಲ್ಲಿ ಇಷ್ಟು ಶಕ್ತಿ ಇದೇನು ? ಎಂದನು ಹೀಗೆ ಹೇಳುತ್ತಾ ಹೇಳುತ್ತಾ ಮೂರ್ಛಿತನಾಗಿ ಬಿದ್ದನು. ಇದನ್ನು ನೋಡಿ ಬ್ರಾಹ್ಮಣನಿಗೆ ಆಶ್ಚರ್ಯವಾಯ್ತು, ಮುನಿಗಳು ಅವನ ಅಪಾಯವನ್ನು ಮಾಡಲಿಲ್ಲ. ಮುನಿ ನಿಂದೆಯ ಪಾಪದಿಂದ ಅವನಿಗೆ ತತ್ಕಾಲ ಫಲ ಸಿಕ್ಕಿತು. ಮುನಿಗಳು ಶಾಂತ ಚಿತ್ತದಿಂದ ಅವನ ಕಡೆ ನೋಡಿದನು. ಕೂಡಲೇ ಅವನು ಜಾಗೃತನಾದನು. ಮುನಿಗಳಿಗೆ ನಮಸ್ಕಾರ ಮಾಡಿದನು.

**ಗುರುಭಕ್ತಿಃ ಸತೀ ಮುಕ್ತ್ಯೈ ಕ್ಷುದ್ರಂ ಕಿಂ ವಾ ನ ಸಾಧಯೇತ್**
**ತ್ರಿಲೋಕೀಮೂಲ್ಯರತ್ನೇನ ದುರ್ಲಭಃ ಕಿಂ ತುಷೋತ್ಕರಃ ||**

ಗುರುಭಕ್ತಿಯಿಂದ ಮುಕ್ತಿಯೂ ಪ್ರಾಪ್ತವಾಗುತ್ತದೆಂದ ಮೇಲೆ ಸಾಮಾನ್ಯ ಪದಾರ್ಥವು ಸಿಗಲಾರದೋ ? ಯಾವ ರತ್ನದ ಮೂಲ್ಯವು ಮೂರು ಲೋಕವಿದೆಯೋ ಅದರಿಂದ ಹುಲ್ಲಿನ ರಾಶಿಯು ಸಿಗುವುದರಲ್ಲಿ ಸಂದೇಹವೇನಿದೆ ? ಮುನಿಗಳು ಅವನಿಗೆ ಕರ್ಮಕ್ಷಯವಾಗಲಿ ಎಂದು ಆಶೀರ್ವಾದವನ್ನು ಕೊಟ್ಟರು. ಯಥಾರ್ಥವಾದ ಗುರುಭಕ್ತಿಯಿಂದ ಮುಕ್ತಿಸುಖವು ಪ್ರಾಪ್ತವಾಗುವಾಗ ಬಾಹ್ಯ ಸುಖವು ಸಿಗುವುದರಲ್ಲಿ ಏನೂ ಕಷ್ಟವಿಲ್ಲ. ಆ ಬೇಡನು ಪಾಪವಾಸನೆಯನ್ನು ಬಿಟ್ಟು ಅತ್ಯಂತ ವಿನಯದಿಂದ ' ಗುರುದೇವ, ನಾನು ಮಹಾಪಾಪಿಯಾಗಿದ್ದೇನೆ. ಅನೇಕ ಜನ್ಮಗಳಿಂದ ಪಾಪಸಂಚಯ ಮಾಡಿದ್ದೇನೆ. ನೀವು ಕರ್ಮಕ್ಷಯವಾಗಲೆಂದು ಆಶೀರ್ವಾದವನ್ನು ದಯೆಪಾಲಿಸಿದ್ದೀರಿ. ನಿಮ್ಮ ವಚನವು ಸತ್ಯವಾಗಲಿ. ಈ ಮಹಾಪಾಪಿಯ ಮೇಲೆ ತಮ್ಮ ಕೃಪಾದೃಷ್ಟಿಯು ಬಿತ್ತು. ನಾನು ಮಾಡಿರುವ ಪಾಪ ಕರ್ಮಗಳನ್ನು ನಾಶ ಮಾಡುವ ಉಪಾಯವನ್ನು ದಯವಿಟ್ಟು ಹೇಳೋಣಾಗಲಿ. ಎಂದು ಪ್ರಾರ್ಥಿಸಿದನು. ಇದನ್ನು ಕೇಳಿ

ಮುನಿಗಳು ದಿವ್ಯ ಜ್ಞಾನದಿಂದ ಎಲ್ಲಾ ವಿಷಯವನ್ನು ತಿಳಿದು 'ಪಂಚ ಪಾಪಗಳ ತ್ಯಾಗವನ್ನು ಮಾಡು' ಎಂದರು. ಅವನು ಪಂಚ ಪಾಪಗಳ ತ್ಯಾಗವನ್ನು ಮಾಡಿದ. ಅತ್ಯಂತ ಶುದ್ಧ ಪರಿಣಾಮದಿಂದ ಆ ಮುನಿಗಳ ಸಮೀಪದಲ್ಲಿ ಇರತೊಡಗಿದನು. ಸಜ್ಜನರು ಅಪಕಾರಿಯ ಮೇಲೆಯೂ ಉಪಕಾರವನ್ನೇ ಮಾಡುತ್ತಾರೆ. ಬೇಡನ ನಿಂದ್ಯ ವಚನವನ್ನು ಕೇಳಿಯೂ ಅವನ ಮೇಲೆ ಸಿಟ್ಟು ಮಾಡದೆ ಮುನಿಗಳು ಅವನ ಕಲ್ಯಾಣವನ್ನೇ ಮಾಡಿದರು. ನೋಡಿ.

**ಅಪಕುರ್ವತಿ ಕೋಪಶ್ಚೇತ್ ಕಿಂ ನ ಕೋಪಾಯ ಕುಪ್ಯಸಿ ।**
**ತ್ರಿವರ್ಗಸ್ಯಾಪವರ್ಗಸ್ಯ ಜೀವಿತಸ್ಯ ಚ ನಾಶಿನೇ ॥**

ಮುನಿಗಳು ಕ್ರೋಧ ಬಂದರೆ ಈ ಕೆಳಗಿನಂತೆ ವಿಚಾರ ಮಾಡುತ್ತಾರೆ. ಕ್ರೋಧವು ಬಹಳ ಆತ್ಮಘಾತಕವಾಗಿರುತ್ತದೆ. ಒಂದು ವೇಳೆ ಅಪಕಾರ ಮಾಡುವವರ ಮೇಲೆ ನಿಮಗೆ ಸಿಟ್ಟು ಬರುವುದಿದ್ದರೆ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ನಾಶ ಮಾಡುವ ಮಹಾನ್ ಅಪಕಾರಿಯಾದ ಕೋಪದ ಮೇಲೆಯೇ ನೀವು ಏಕೆ ಕೋಪ ಮಾಡುವುದಿಲ್ಲ. ಹೀಗೆ ವಿಚಾರ ಮಾಡಿ ಆ ಸಾಧುಗಳು ಆತ್ಮಕಲ್ಯಾಣವನ್ನು ಮಾಡಿಕೊಳ್ಳುತ್ತಾರೆ ಬೇರೆ ಭವ್ಯ ಜೀವರಿಗೆ ಉಪದೇಶವನ್ನು ಕೊಟ್ಟು ಅವರನ್ನು ದುರ್ಮಾರ್ಗದಿಂದ ಬಿಡಿಸಿ ಸನ್ಮಾರ್ಗದಲ್ಲಿ ಹಚ್ಚುತ್ತಾರೆ. ಆ ಮಹಾ ಪುರುಷರು ಜಗತ್ತಿಗೆ ವಂದನೀಯರಾಗಿರುತ್ತಾರೆ. ಅವರು ಸ್ವತಃ ಸಂಸಾರದಿಂದ ಪಾರಾಗುತ್ತಾರೆ. ಬೇರೆಯವರನ್ನು ಪಾರಗೊಳಿಸುತ್ತಾರೆ. ಅವರು ಯಾವಾಗಲೂ ಧರ್ಮಧ್ಯಾನದಲ್ಲಿ ಮಗ್ನರಾಗಿರುತ್ತಾರೆ. ಉದಯದಲ್ಲಿ ಬರುತ್ತಿರುವ ಕರ್ಮಗಳನ್ನು ಭೇದ ವಿಜ್ಞಾನದ ಬಲದಿಂದ ಜಯಿಸುತ್ತಿರುತ್ತಾರೆ. ಈ ಉದಯದಲ್ಲಿ ಬರುತ್ತಿರುವ ಕರ್ಮಗಳು ಪರೋಪಾಧಿಯಾಗಿರುತ್ತದೆ. ನಾನು ಸ್ವೋಪಾಧಿಯಿಂದ ಕೂಡಿದ್ದೇನೆ. ಹೀಗೆ ವಿಚಾರ ಮಾಡಿ ರಾಗದ್ವೇಷದಿಂದ ರಹಿತರಾಗಿರುತ್ತಾರೆ. 'ರಾಗದ್ವೇಷ ಮೋಹರಹಿತೋಹಂ' ನಾನು ರಾಗ

ಕ್ಲೇಶ ಮೋಹಗಳಿಂದ ರಹಿತನಾಗಿದ್ದೇನೆಂಬ ಭಾವನೆಯನ್ನು ಯಾವಾಗಲೂ ಮಾಡುತ್ತಿರುತ್ತಾರೆ.

ನನ್ನ ಸ್ವಭಾವವು ನಿತ್ಯಾನಂದ, ನಿರ್ವಿಕಲ್ಪ, ಸಮಾಧಿಸಹಿತವಾಗಿದೆ ಎಂದು ನಿಶ್ಚಯ ಮಾಡುತ್ತಾರೆ. ವೀತರಾಗ ನಿರ್ವಿಕಲ್ಪ, ಸಮಾಧಿಬಲದಿಂದ ಆಕುಲತಾರಹಿತ ಪರಮ ಸುಖ ಸ್ವರೂಪನಾದ ತನ್ನ ಆತ್ಮನಲ್ಲಿ ಸ್ಥಿರವಾಗಿದ್ದು ಅನಂತ ಭವಗಳಲ್ಲಿ ಮಾಡಿದ ಕರ್ಮವೆಂಬ ಮಲವನ್ನು ತಪನೆಂಬ ನೀರಿನಿಂದ ತೊಳೆಯುತ್ತಾರೆ. ಮತ್ತು ಆತ್ಮನನ್ನು ನಿಷ್ಕಲಂಕನನ್ನಾಗಿ ಮಾಡುತ್ತಾರೆ. ನಾನು ಕರ್ಮಕಲಂಕದಿಂದ ರಹಿತನಾಗಿದ್ದೇನೆಂಬ ವಿಚಾರವನ್ನು ಅವರು ಯಾವಾಗಲೂ ಮಾಡುತ್ತಿರುತ್ತಾರೆ. ಗುರುಗಳು ಎಲ್ಲಾ ಜೀವರಾಶಿಯ ಕಲ್ಯಾಣವನ್ನು ಮಾಡುತ್ತಾರೆ. ಅವರು ಸಂಸಾರದಲ್ಲಿ ತಾಯಿಯು ಹಾಗಿರುತ್ತಾರೆ, ಎಲ್ಲರಿಗೂ ಉಪದೇಶವನ್ನು ಕೊಡುತ್ತಾರೆ. ಶಿಕ್ಷೆ ಕೊಡುತ್ತಾರೆ. ಆದುದರಿಂದ ಗುರುಗಳು ತಂದೆಯು ಹಾಗಿರುತ್ತಾರೆ. ಅವರು ಮುಕ್ತಿ ಲಕ್ಷ್ಮಿಯ ಸ್ವಾಮಿಯಾಗಿದ್ದಾರೆಂದು ಎಲ್ಲರ ಬಂಧುವಿನಹಾಗಿದ್ದಾರೆ. ಅವರು ಎಲ್ಲಾ ಭವ್ಯ ಜೀವರ ಕಲ್ಯಾಣ ಮಾಡುತ್ತಾರೆಂದು ಅವರು ವಿಷ್ಣುವಿನ ಹಾಗಿದ್ದಾರೆ. ಆತ್ಮಸ್ವರೂಪದ ಜ್ಞಾನವನ್ನು ಮಾಡಿಕೊಡುತ್ತಾರೆಂದು ಅವರು ಬ್ರಹ್ಮ ಎಂದು ಹೇಳಲ್ಪಡುತ್ತಾರೆ. ಇಚ್ಛಿತ ಪದಾರ್ಥಗಳನ್ನು ಕೊಡುತ್ತಾರೆಂಬ ಅರ್ಥದಿಂದ ಅವರು ಚಿಂತಾಮಣಿಯಾಗಿದ್ದಾರೆ. ಇಂಥಹ ಶ್ರೇಷ್ಟ ಗುರುಗಳಿಗೆ ಆತ್ಮಕಲ್ಯಾಣಕ್ಕೋಸ್ಕರವಾಗಿ ಭವ್ಯ ಜೀವರು ನಮಸ್ಕಾರ ಮಾಡುತ್ತಾರೆ, ಭಕ್ತಿ ಮಾಡುತ್ತಾರೆ.

ಒಬ್ಬ ರಾಜಕುಮಾರನು ಮುನಿಗಳ ಸಮೀಪಕ್ಕೆ ಹೋಗಿ 'ಸ್ವಾಮಿನ್, ನನಗೆ ದೀಕ್ಷೆಯನು ಕೊಡಿರೆಂದು ಹೇಳಿದನು. ಆಗ ಅವನ ತಂದೆಯು ಹೇಳುತ್ತಾನೆ. ' ಗುರುದೇವ ! ಇವನು ಕೆಲವು ಸಮಯ ರಾಜ್ಯಭೋಗಗಳನ್ನು ಅನುಭವಿಸಲಿ, ಅದರ ನಂತರ ದೀಕ್ಷೆ ಕೊಡೋಣಾಗಲಿ. ಆಗ

ಗುರುಗಳು ಹೇಳುತ್ತಾರೆ. ರಾಜನ್ ! ಇವನು ಆಸನ್ನ ಭವ್ಯನಾಗಿರುತ್ತಾನೆ. ಸಂಸಾರ ಭೋಗಗಳಿಂದ ವಿರಕ್ತನಾಗಿದ್ದಾನೆ. ಆತ್ಮಕಲ್ಯಾಣದ ವಿಷಯದಲ್ಲಿ ಉತ್ಸುಕನಾಗಿದ್ದಾನೆ. ಆದುದರಿಂದ ಅವನ ದೀಕ್ಷೆಯ ವಿಷಯದಲ್ಲಿ ನೀನು ತೊಂದರೆ ಮಾಡಬೇಡ' ಎಂದರು.

ಗುರುವಚನವನ್ನು ಪ್ರಮಾಣವೆಂದು ಸ್ವೀಕರಿಸಿ ರಾಜನು ನಮಸ್ಕಾರ ಮಾಡಿದನು. ರಾಜಕುಮಾರನು ರಾಜ್ಯವೈಭವವನ್ನು ಬಿಟ್ಟು ಸಂಸಾರ ಭೋಗದಿಂದ ವಿರಕ್ತನಾಗಿ ದಿಗಂಬರ ಜೈನ ದೀಕ್ಷೆಯನ್ನು ಪರಿಗ್ರಹಿಸಿದನು. ಮತ್ತು ಉಗ್ರವಾದ ತಪಶ್ಚರ್ಯ್ನಾಚರಿಸಿದನು. ಒಂದು ಸಮಯ ಆ ಮುನೀಶ್ವರರು ಉನ್ನತವಾದ ಪರ್ವತದ ಮೇಲೆ ಧ್ಯಾನಸ್ಥರಾಗಿ ಕುಳಿತಿದ್ದರು. ಆ ಸಮಯದಲ್ಲಿ ಅವರ ಪೂರ್ವ ಜನ್ಮದ ಶತ್ರುವು ಬಂದು ಉಪಸರ್ಗವನ್ನು ಮಾಡತೊಡಗಿದನು. ಅನೇಕ ವಿಧವಾದ ಅಸ್ತ್ರ ಶಸ್ತ್ರಗಳಿಂದ ಅವರ ಶರೀರವನ್ನು ಕೊಚ್ಚಿ ಹತ್ತಿದನು. ಆದರೂ ಅವರು ತನ್ನ ಧ್ಯಾನದಿಂದ ವಿಚಲಿತರಾಗದೆ ಆತ್ಮ ಸ್ವರೂಪದಲ್ಲಿ ಸ್ಥಿರವಾಗಿದ್ದರು.

ಒಪ್ಪಿಸಿ ದೇಹಮುಂ ತಪದ ತಾಪಕೆ ತನ್ನ ನಭ ಸ್ವರೂಪಮುಂ ।
ನೆಪ್ಪರಿದಪ್ಪಿಕೊಂಡು ನಿಲೆ ಲೋಕದ ಕಣ್ಗಿದು ಯೋಗಿ ವೇಷಮೋ
ಲೆಪ್ಪದ ರೂಪೋ ಕಲ್ಲ ಪರಿಜೋ ಎನೆ ತೋರ್ಪಿನಮುಷ್ಟಕರ್ಮಮುಂ
ಕಪ್ಪನೆ ಕಂದಿ ಬೆಂದು ತಪನಂಬುಗನೇಯಪರಾಜಿತೇಶ್ವರಾ ॥

ಅಪರಾಜಿತ ಶತಕ ೯೪.

ಆ ಮುನೀಶ್ವರರು ಉಪಸರ್ಗಕ್ಕೆ ತಮ್ಮ ಶರೀರವನ್ನು ಅರ್ಪಿಸಿದರು ತಾವು ಆತ್ಮಸ್ವರೂಪದಲ್ಲಿ ಸ್ಥಿರವಾಗಿದ್ದರು. ಅವರು ತಮ್ಮ ಸ್ವಸ್ವರೂಪದಲ್ಲಿದ್ದು ಆತ್ಮರಸವನ್ನು ಕುಡಿಯುತ್ತಿದ್ದರು. ಆ ಆತ್ಮಧ್ಯಾನದ ಪ್ರಭಾವದಿಂದ ಅಷ್ಟಕರ್ಮವೆಂಬ ಬಂಧನದಿಂದ ಮುಕ್ತರಾಗಿ ಅಷ್ಟಗುಣಗಳಿಂದ ಸಹಿತರಾದ ಸಿದ್ಧರ ಅವಸ್ಥೆಯನ್ನು ಪಡೆದರು. ಆದುದರಿಂದ ಭವ್ಯರೇ ! ಆತ್ಮಸ್ವರೂಪದ ಮಹಿಮೆಯು ಅಗಾಧವಾಗಿದೆ. ಮುನಿಗಳು ಯಾವಾಗಲೂ

ಹೀಗೆ ವಿಚಾರ ಮಾಡುತ್ತಿರುತ್ತಾರೆ. ನಾನು ಆಹಾರಕ ಅನಾಹಾರಕ ಸಂಜ್ಞೀ ಅಸಂಜ್ಞೀ, ಕರ್ಮ ನಿಷ್ಕರ್ಮ, ಪರ್ಯಾಪ್ತಿ, ಪ್ರಾಣ ಮೊದಲಾದ ಭೇದಗಳಿಂದ ರಹಿತನಾಗಿದ್ದು ಶುದ್ಧ ಜ್ಞಾನದರ್ಶನಮಯನಾಗಿರುತ್ತೇನೆ. ಆ ಧ್ಯಾನ ಸಾಮರ್ಥ್ಯದಿಂದ ಅನೇಕ ತಪ ಋದ್ಧಿಗಳು ಪ್ರಾಪ್ತವಾಗುತ್ತವೆ. ಆ ತಪಋದ್ಧಿಯ ಬಲದಿಂದ ಅನೇಕ ಭವ್ಯ ಜೀವರ ದುಃಖಗಳನ್ನು ಅವರು ನಾಶ ಮಾಡುತ್ತಾರೆ.

ಒಂದಾನೊಂದು ಸಮಯದಲ್ಲಿ ಒಬ್ಬ ರಾಜಕುಮಾರನಿಗೆ ಸರ್ಪ ಕಚ್ಚಿತು. ಅವನು ಮೂರ್ಛಿತನಾದನು. ಇದನ್ನು ನೋಡಿ ಅವನು ಸತ್ತ ನೆಂದು ತಿಳಿದು ಅವನನ್ನು ಸುಡಲಿಕ್ಕೆ ಸ್ಮಶಾನ ಭೂಮಿಗೆ ತೆಗೆದುಕೊಂಡು ಹೋದರು. ಅಲ್ಲಿ ಒಬ್ಬ ಋದ್ಧಿಸಂಪನ್ನರಾದ ಮುನಿಗಳು ಧ್ಯಾನಸ್ಥರಾಗಿ ಕುಳಿತಿದ್ದರು. ಅವರ ಶರೀರದ ಗಾಳಿಯು ರಾಜಕುಮಾರನ ಶರೀರಕ್ಕೆ ತಾಗಿದ ಕೂಡಲೇ ಸರ್ಪದ ವಿಷವು ದೂರವಾಗಿ ರಾಜಕುಮಾರನು ಜಾಗೃತ ನಾದನು. ಮತ್ತು ಆಕಡೆ ಈಕಡೆ ನೋಡ ಹತ್ತಿದನು. ಇಷ್ಟರಲ್ಲಿ ಅವನ ದೃಷ್ಟಿ ಆ ಮುನಿಗಳ ಕಡೆ ಹೋಯಿತು. ಅವರನ್ನು ನೋಡಿ ಅತ್ಯಂತ ಆನಂದದಿಂದ ಅವನು ಆ ಗುರುಗಳಿಗೆ ವಿನಯ ಪೂರ್ವಕವಾಗಿ ನಮಸ್ಕಾರ ಮಾಡಿ ಕೇಳುತ್ತಾನೆ. ಗುರುದೇವ ! ಇವರು ನನ್ನನ್ನು ಕಟ್ಟಿ ಇಲ್ಲಿ ಏಕೆ ತಂದರು. ಇದರ ಕಾರಣವೇನು ? ಮುನಿಗಳು ವಿಚಾರ ಮಾಡಿ ಇವನು ಆಸನ್ನ ಭವ್ಯನೆಂದು ತಿಳಿದು ಅವನಿಗೆ ಹೇಳಿದರು. ' ರಾಜಕುಮಾರ, ನಿನಗೆ ಪೂರ್ವಜನ್ಮದ ವೈರದಿಂದ ನಿನಗೆ ಸರ್ಪ ಕಚ್ಚಿತು. ಆ ವಿಷದಿಂದ ನೀನು ಮೂರ್ಛಿತನಾಗಿದ್ದರಿಂದ ನಿನ್ನ ಪ್ರಾಣ ಹೋಯಿತೆಂದು ತಿಳಿದು ನಿನ್ನನ್ನು ಸುಡಲಿಕ್ಕೆಂದು ಈ ಸ್ಮಶಾನ ಭೂಮಿಯಲ್ಲಿ ತಂದಿದ್ದರು. ಆದರೆ ಋದ್ಧಿ ಸಂಪನ್ನರಾದ ಮುನಿಗಳ ಶರೀರದ ಗಾಳಿಯು ನಿನಗೆ ತಗಲಿದ್ದರಿಂದ ನೀನು ಜಾಗೃತನಾಗಿರುತ್ತಿ ಎಂದರು. ಆಗ ರಾಜಕುಮಾರನು ವಿನಯ

ದಿಂದ ಪುನಃ ಹೇಳುತ್ತಾನೆ. ಗುರುದೇವ! ನನಗೆ ಆತ್ಮ ಕಲ್ಯಾಣದ ಮಾರ್ಗವನ್ನು ತೋರಿಸಿ ಈ ಭವ ಸಮುದ್ರದಿಂದ ಪಾರಗೊಳಿಸಿರಿ. ಭವ್ಯಾತ್ಮರೇ! ನೋಡಿರಿ ಇಂಥಹ ಮಹಾನ್ ತಪಸ್ವಿಗಳು ಭವ್ಯ ಜೀವರನ್ನು ಈ ಸಂಸಾರ ಸಮುದ್ರದಿಂದ ಪಾರಗೊಳಿಸಲು ಹಡಗದಂತಿದ್ದಾರೆ.

ಗುರುಃ ಸಖಾ ಕೌ ಹಿತ ಚಿಂತಕತ್ವಾತ್ ।
ಸೌಖ್ಯಪ್ರದತ್ವಾತ್ ಗುರುದೇವ ವಿಷ್ಣು: ॥
ಬ್ರಹ್ಮಾ ಗುರುಃ ಸ್ವಾತ್ಮಪ್ರದಪ್ರಬೋಧಾತ್ ।
ತಸ್ಮೈ ಸದಾ ಸದ್‌ಗುರವೇ ನಮೋಸ್ತು ॥

ಬೋಧಾಮೃತ.

ಆತ್ಮಕಲ್ಯಾಣೋಸ್ಕರ ಭವ್ಯರು ಸದಾ ಸಂಸಾರದ ವಿಷಯ ಭೋಗಗಳ ವಿಷಯದಲ್ಲಿ ವಿರಕ್ತಿಯನ್ನು ಭಾವಿಸಿ ಆತ್ಮೋನ್ನತಿಯ ವಿಷಯದಲ್ಲಿ ಉತ್ಸಾಹವನ್ನಿಟ್ಟು ತಮ್ಮ ಆತ್ಮಕಲ್ಯಾಣಕ್ಕೋಸ್ಕರವಾಗಿ ಯಾವಾಗಲೂ ಪ್ರಯತ್ನಿಸಬೇಕು. ಯಾಕಂದರೆ ಆತ್ಮಕಲ್ಯಾಣಕ್ಕೋಸ್ಕರವಾಗಿ ಪ್ರಯತ್ನ ಮಾಡದಿರುವುದರಿಂದಲೇ ಅನಾದಿಕಾಲದಿಂದ ಈ ಜೀವನು ಸಂಸಾರದಲ್ಲಿ ಪರಿಭ್ರಮಣೆ ಮಾಡುತ್ತಿದ್ದಾನೆ. ಆ ಸಂಸಾರವನ್ನು ನಾಶ ಮಾಡುವುದಕ್ಕೋಸ್ಕರವಾಗಿ ಭಗವಂತನ ಉಪದೇಶವೆಂಬ ಅಮೃತವನ್ನು ಪಾನ ಮಾಡಿಂ

ಜನ್ಮಮರಣ ರುಜಸೇ ಡರೇ
ಧರ್ಮ ಮಹೌಷಧಿ ಪೀವ,
ಅವಿನಾಶೀ ತನ ಜ್ಞಾನಮಯ
ಪಾಯ ಸುಖೀ ಹೋ ಜೀವ॥

ಸ್ವಾನುಭವದರ್ಪಣ.

ಜನ್ಮಜರಾಮರಣವೆಂಬ ಮೂರು ರೋಗಗಳಿಂದ ಭಯಭೀತನಾಗಿರುವ ಜೀವಾತ್ಮನೇ! ಭಗವಂತನ ವಚನವೆಂಬ ಅಮೃತವನ್ನು ಕುಡಿ.

ಅದೇ ಔಷಧವಾಗಿದೆ. ಆ ಔಷಧಿಯಿಂದ ನಿನ್ನ ಭವರೋಗ ದೂರವಾಗು ವುದು. ನಿನಗೆ ನಿತ್ಯ ಸುಖವನ್ನು ಕೊಡುವ ಕೇವಲ ಜ್ಞಾನವು ಪ್ರಾಪ್ತ ವಾಗುವುದು. ಆ ಸುಖದ ಹೊರತು ಬೇರೆ ಎಲ್ಲಾ ಸುಖಗಳು ಸುಖವಲ್ಲ. ಸುಖಾಭಾಸವಾಗಿವೆ. ಹೀಗೆ ತತ್ವಜ್ಞಾನಿಗಳು ಸದಾ ವಿಚಾರ ಮಾಡುತ್ತಿ ರುತ್ತಾರೆ. ತನ್ನ ಜ್ಞಾನದಿಂದ ಪರಭಾವ, ಸಂಕಲ್ಪ ವಿಕಲ್ಪಜಾಲ ಮೊದ ಮೊದಲಾದವುಗಳು ಪುದ್ಗಲ ಪರಿಣಾಮರೂಪವಾಗಿವೆ. ಇದು ನನ್ನ ಸ್ವರೂ ಪವಲ್ಲ ನನ್ನ ಸ್ವರೂಪವು ಅಖಂಡ ಅವಿನಾಶೀ ಜ್ಞಾನದರ್ಶನವಾಗಿದೆ. ಹೀಗೆ ತಿಳಿದು ಭೇದವಿಜ್ಞಾನದ ಬಲದಿಂದ ಪ್ರತಿ ಸಮಯವೂ ಕರ್ಮವನ್ನು ನಾಶ ಮಾಡಿ ಅಮರ ಸುಖವನ್ನು ಪಡೆಯುತ್ತಾರೆ.

ಯೇ ಧ್ಯಾನಶೀಲಾ ಮುನಯಃ ಪ್ರಧಾನಾ-<br>
ಸ್ತೇ ದುಃಖಹೀನಾ ನಿಯಮಾದ್ ಭವಂತಿ<br>
ಸಂಪ್ರಾಪ್ಯ ಶೀಘ್ರಂ ಪರಮಾತ್ಮ ತತ್ವಂ<br>
ವ್ರಜಂತಿ ಮೋಕ್ಷಂ ಕ್ಷಣಮೇಕಮೇವ ॥

ಧರ್ಮನೀತಿಸಾರ.

ಯಾವ ಮುನಿಗಳು ಧ್ಯಾನವನ್ನೇ ಆತ್ಮ ಕಲ್ಯಾಣದ ಮುಖ್ಯ ಸಾಧ ನವೆಂದು ತಿಳಿದು ಪರಮಾತ್ಮತತ್ವ ಅಥವಾ ಧ್ಯಾನದಲ್ಲಿ ದತ್ತಚಿತ್ತರಾಗಿ ರುತ್ತಾರೆಯೋ ಅವರು ಸ್ವಲ್ಪ ಸಮಯದಲ್ಲಿಯೇ ಮುಕ್ತಿಯನ್ನು ಪಡೆಯು ತ್ತಾರೆ. ಧ್ಯಾನದ ಮಹಿಮೆಯು ಅಚಿಂತ್ಯವಾಗಿದೆ.

ಒಬ್ಬ ರಾಜಕುಮಾರನು ಅವನ ಹನ್ನೆರಡನೆಯ ವಯಸ್ಸಿನಲ್ಲಿ ಮಿತ್ರರೊಡನೆ ಆಡಿಕೊಂಡು ಕಾಡಿನಕಡೆ ಹೋದನು. ಅಲ್ಲಿ ಅಶೋಕವೃಕ್ಷದ ಕೆಳಗೆ ಒಬ್ಬ ಮುನೀಶ್ವರರು ಕೂತಿದ್ದರು. ಅವರನ್ನು ನೋಡಿದ ಕೂಡಲೇ ರಾಜಕುಮಾರನಿಗೆ ಮೂರ್ಛೆ ಬಂತು. ಜಾಗ್ರತನಾದ ನಂತರ ಬಹಳ ವಿನಯದಿಂದ ಕೇಳುತ್ತಾನೆ, ಗುರುದೇವ ! ನಿಮ್ಮನ್ನು ನೋಡಿದ ಕೂಡಲೇ

ನನಗೆ ಬಹಳ ಪ್ರೇಮ ಉಂಟಾಯಿತು. ಇದರ ಕಾರಣವೇನು ? ಇದನ್ನು ನನಗೆ ಹೇಳಿ ನನ್ನ ಸಂದೇಹವನ್ನು ದೂರ ಮಾಡೋಣಾಗಲಿ. ಎಂದನು. ಆ ಸಮಯದಲ್ಲಿ ಮುನೀಶ್ವರರು ಅವಧಿಜ್ಞಾನದಿಂದ ಈತನು ತದ್‌ಭವ ಮೋಕ್ಷ ಗಾಮಿಯಾಗಿದ್ದಾನೆ. ಇವನ ಪರಿಣಾಮದಲ್ಲಿ ಉಪಶಮ ಭಾವ ವಾಗಿದೆ ಎಂದು ತಿಳಿದು ಹೇಳುತ್ತಾರೆ ‹ ರಾಜಕುಮಾರ ! ನನ್ನ ಮತ್ತು ನಿನ್ನ ಪೂರ್ವ ಜನ್ಮದ ಸಂಬಂಧವಿದೆ. ಆದುದರಿಂದ ನಿನಗೆ ನನ್ನನ್ನು ನೋಡಿ ಪ್ರೇಮ ಉಂಟಾಯಿತು. ಎಂದರು. ಒಂದಾನೊಂದು ಭವದಲ್ಲಿ ನೀನು ಜಿಂಕೆಯಾಗಿ ಕಾಡಿನಲ್ಲಿ ತಿರುಗಾಡುತ್ತಿದ್ದಿ. ಒಬ್ಬ ಬೇಡನು ನಿನ್ನನ್ನು ಬಲೆಯಲ್ಲಿ ಹಾಕಿ ಹಿಡಿದುಕೊಂಡು ಹೋಗುತ್ತಿದ್ದನು. ಪೂರ್ವಪುಣ್ಯದ ಉದಯದಿಂದ ನೀನು ಆ ಬಲೆಯಿಂದ ತಪ್ಪಿಸಿಕೊಂಡು ನನ್ನ ಕಡೆಗೆ ಓಡಿ ಬಂದಿ. ನನ್ನನ್ನು ನೋಡಿದ ಕೂಡಲೇ ನಿನಗೆ ಉಪಶಮ ಸಮ್ಯಕ್ತ್ವದ ಪ್ರಾಪ್ತಿಯಾಯಿತು. ನೀನು ಪಂಚ ಪಾಪಗಳ ತ್ಯಾಗವನ್ನು ಮಾಡಿ ಮರಣದ ವರೆಗೆ ಆ ವ್ರತಗಳನ್ನು ಪರಿಪಾಲಿಸಿ ಸಾವಧಾನನಾಗಿ ದೇಹ ತ್ಯಾಗ ವನ್ನು ಮಾಡಿದಿ. ಆ ಸಮ್ಯಕ್ತ್ವದ ಪ್ರಭಾವದಿಂದ ರಾಜಕುಮಾರನಾಗಿ ಹುಟ್ಟಿದಿ. ಇದನ್ನು ಕೇಳಿದ ಕೂಡಲೇ ರಾಜಕುಮಾರನಿಗೆ ಸಂಸಾರ ಭೋಗದಿಂದ ವಿರಕ್ತಿಯಾಗಿ ದೀಕ್ಷೆಯನ್ನು ತೆಗೆದು ಕೊಂಡನು. ಧ್ಯಾನ ಸಾಮರ್ಥ್ಯದಿಂದ ಕೂಡಲೇ ಘಾತಿ ಕರ್ಮಗಳನ್ನು ನಾಶ ಮಾಡಿ ಕೇವಲ ಜ್ಞಾನವನ್ನು ಪಡೆದನು. ನಂತರ ಮುಕ್ತಿಗೆ ಹೋದನು.

ಭವ್ಯರೇ ! ನೋಡಿರಿ. ಧರ್ಮದ ಪ್ರಭಾವದಿಂದ ಜಿಂಕೆಯೂ ಕೂಡ ಕಾಲಲಬ್ಧಿಯಿಂದ ಉಪದೇಶವನ್ನು ಹೊಂದಿ ತನ್ನನ್ನು ಉದ್ಧರಿಸಿ ಕೊಂಡಿತು. ಧರ್ಮದ ಮಹಿಮೆಯು ಅಚಿಂತ್ಯವಾಗಿದೆ. ಆದುದರಿಂದ ಯಾವಾಗಲೂ ಧರ್ಮಾರಾಧನೆಯನ್ನು ಮಾಡಬೇಕು. ಇದು ಆತ್ಮಕಲ್ಯಾಣಕ್ಕೆ ಕಾರಣ ವಾಗಿದೆ. ಆತ್ಮಕಲ್ಯಾಣವಿಲ್ಲದಿದ್ದರೆ ಎಲ್ಲವೂ ನಿರರ್ಥಕ. ಆತ್ಮೋನ್ನತಿ ಯಿಲ್ಲದೆ ಎಷ್ಟು ಶಾಸ್ತ್ರಗಳನ್ನು ಓದಿದರೂ ಎಷ್ಟು ಜ್ಞಾನವನ್ನು ಪಡೆದರೂ

ಏನೂ ಪ್ರಯೋಜನವಿಲ್ಲ. ಅದು ಮಿಥ್ಯಾ ಜ್ಞಾನವೆಂದು ಹೇಳಲ್ಪಡುತ್ತದೆ. ಯಾವ ಜ್ಞಾನದಿಂದ ಆತ್ಮಹಿತವಾಗುವುದಿಲ್ಲವೋ ಆ ಜ್ಞಾನದಿಂದ ಏನು ಪ್ರಯೋಜನ ? ಭೇದ ವಿಜ್ಞಾನವೇ ಯಥಾರ್ಥವಾದ ಜ್ಞಾನವಾಗಿದೆ ಭೇದ ಜ್ಞಾನವೆಂಬ ಪ್ರಕಾಶವಿಲ್ಲದೆ ಮಿಥ್ಯಾತ್ವವೆಂಬ ಅಂಧಕಾರವನ್ನು ಯಾರೂ ನಾಶ ಮಾಡಲು ಸಾಧ್ಯವಿಲ್ಲ.

ದುರಿತತಿಮಿರ ಹಂಸಂ ಮೋಕ್ಷಲಕ್ಷ್ಮೀಸರೋಜಂ |
ಮದನಭುಜಗಮಂತ್ರಂ ಚಿತ್ತಮಾತಂಗಸಿಂಹಂ ||
ವ್ಯಸನಘನಸಮೀರಂ ವಿಶ್ವತತ್ವಪ್ರದೀಪಂ |
ವಿಷಯಶಫರಜಾಲಂ ಜ್ಞಾನಮಾರಾಧಯ ತ್ವಂ ||

ಪ್ರಶ್ನೋತ್ತರಮಾಣಿಕ್ಯಮಾಲಾ.

ಆ ಭೇದ ವಿಜ್ಞಾನವು ಹೇಗಿದೆ ? ಪಾಪವೆಂಬ ಅಂಧಕಾರವನ್ನು ದೂರ ಮಾಡುತ್ತಿರುವ ಪರಮಹಂಸನ ಮತ್ತು ಮೋಕ್ಷಲಕ್ಷ್ಮಿಯ ನಿವಾಸ ಸ್ಥಾನವಾಗಿದೆ. ಕಾಮನೆಂಬ ಸರ್ಪದ ವಿಷವನ್ನು ನಾಶ ಮಾಡಲು ಮಂತ್ರದಂತಿದೆ. ಮನಸ್ಸೆಂಬ ಆನೆಯನ್ನು ವಶ ಮಾಡಿಕೊಳ್ಳಲು ಸಿಂಹದ ಹಾಗಿದೆ ವ್ಯಸನವೆಂಬ ಮೋಡಗಳನ್ನು ನಾಶ ಮಾಡಲು ಗಾಳಿಯಂತಿದೆ. ಎಲ್ಲಾ ತತ್ವಗಳನ್ನು ಪ್ರಕಾಶಿಸಲು ದೀಪದಂತಿದೆ. ಇಂದ್ರಿಯಗಳನ್ನು ಜಯಿಸಲಿಕ್ಕೆ ಬಲೆಯಂತಿದೆ. ಅಂಥಹ ಭೇದ ವಿಜ್ಞಾನವನ್ನು ಪ್ರಾಪ್ತ ಮಾಡಿ ತಪಸ್ವಿಗಳು ಅನೇಕ ಭವಗಳಿಂದ ಅರ್ಜಿಸಿದ ಕರ್ಮವೆಂಬ ವೈರಿಯನ್ನು ಗೆಲ್ಲುತ್ತಾರೆ. ಇಂಥಹ ಅಭೇದ ರತ್ನತ್ರಯವನ್ನು ತನ್ನ ಸ್ವರೂಪದಲ್ಲಿರಿಸಿ ಅನೇಕ ಜನ್ಮಗಳಿಂದ ಅರ್ಜಿಸಿದ ಕರ್ಮ ಬಂಧನವನ್ನು ದೂರ ಮಾಡುತ್ತಾರೆ. ಕರ್ಮಬಂಧನವು ಹಗುರುವಾಗಲು ಆತ್ಮಜ್ಯೋತಿಯು ಪ್ರಕಟವಾಗುತ್ತದೆ. ಆ ಆತ್ಮಜ್ಯೋತಿಯಲ್ಲಿ ಅವರು ಯಾವಾಗಲೂ ಆನಂದ ಪಡುತ್ತಿರುತ್ತಾರೆ. ಯಥಾರ್ಥವಾದ ಆನಂದವೆಂದರೆ ಆತ್ಮಾನುಭವವೇ.

ನಿರ್ವಿಕಲ್ಪ ಸಮಾಧಿ ಸಂಜಾತೋಹಂ, ವೀತರಾಗ ಸಹಜಾನಂದ ಸ್ವರೂಪೋಹಂ, ಅತ್ಯಾನಂದ ರೂಪೋಹಂ, ಸ್ವಸಂವೇದನ ಜ್ಞಾನಾಮೃತಭರಿತೋಹಂ, ಹೀಗೆ ಅವರು ಭಾವಿಸುತ್ತಾರೆ. ಹೀಗೆ ನಿರಿಚ್ಛಭಾವನೆಯಿಂದ ತಪಸ್ಸನ್ನು ಮಾಡುತ್ತಿರುವ ಮುನಿಗಳಿಗೆ ಅನೇಕ ಋದ್ಧಿ ಸಿದ್ಧಿಗಳು ಪ್ರಾಪ್ತವಾಗಿ ಅದರಿಂದ ಧರ್ಮಪ್ರಭಾವನೆಯಾಗುತ್ತದೆ.

ಒಂದು ಕಾಡಿನಲ್ಲಿ ಒಂದು ದಿವಸ ಒಬ್ಬ ಬಲವಾನ್ ಇನ್ನೊಂದು ನಿರ್ಬಲ ಪಶುಗಳು ಜಗಳಾಡಿಕೊಂಡು ಮುನಿಗಳ ಸಮೀಪಕ್ಕೆ ಬಂದವು. ಮುನಿಗಳ ಶಾಂತ ಸ್ವಭಾವವನ್ನು ನೋಡಿ ಆ ಎರಡು ಪಶುಗಳೂ ಉಪಶಮ ಭಾವವುಂಟಾಗಿ ಪರಸ್ಪರ ವೈರವನ್ನು ಬಿಟ್ಟು ಶಾಂತಭಾವದಿಂದ ಅಲ್ಲಿ ಕುಳಿತು ಕೊಂಡವು. ಅತ್ಯಂತ ಭಕ್ತಿಯಿಂದ ಮುನಿಗಳ ಉಪದೇಶವನ್ನು ಕೇಳಿಕೊಂಡು ಕೂತಿದ್ದವು. ಇಷ್ಟರಲ್ಲಿ ಒಬ್ಬ ವಿದ್ಯಾಧರನು ಬಂದು 'ಗುರುದೇವ ! ಈ ಪಶುಗಳು ಶಾಂತಚಿತ್ತದಿಂದ ಕೂತು ಉಪದೇಶವನ್ನು ಕೇಳುತ್ತವೆ. ಪೂರ್ವ ಜನ್ಮದಲ್ಲಿ ಇವರು ಯಾರಾಗಿದ್ದರು ? ಎಂದು ಕೇಳಿದನು. ಆಗ ಮುನೀಶ್ವರರು ಅವರ ಭವಾಂತರವನ್ನು ಹೇಳುತ್ತೇನೆ ಕೇಳು ಎಂದರು.

ಈ ಊರಿನಲ್ಲಿ ಇವರಿಬ್ಬರೂ ಮಿತ್ರರಾಗಿದ್ದರು. ಒಂದು ದಿವಸ ಇಬ್ಬರೂ ಕೂಡಿ ತೀರ್ಥಯಾತ್ರೆಗೆಂದು ಹೊರಟಿದ್ದರು. ಒಬ್ಬ ಮಿತ್ರನ ಸ್ತ್ರೀಯು ರೂಪವತಿಯಾಗಿದ್ದಳು. ಅವಳನ್ನು ನೋಡಿ ಮತ್ತೊಬ್ಬ ಮಿತ್ರನ ಮನಸ್ಸಿನಲ್ಲಿ ಪಾಪ ಬಂತು. ಇವಳ ಪತಿಯನ್ನು ಕೊಂದರೆ ಇವಳು ನನ್ನ ವಶವಾಗುತ್ತಾಳೆ. ಹೀಗೆ ವಿಚಾರ ಮಾಡಿ ಆ ಪಾಪಿಯು ವಿಷ ಮಿಶ್ರಿತವಾದ ಭೋಜನವನ್ನು ಸಿದ್ಧ ಮಾಡಿ ಅವರಿಬ್ಬರಿಗೂ ಹೇಳುತ್ತಾನೆ. ನೀವು ಇವತ್ತು ಇಬ್ಬರೂ ನನ್ನ ಕಡೆ ಊಟ ಮಾಡಬೇಕು. ಅವರಿಬ್ಬರೂ ಸಮ್ಯಗ್‌ದೃಷ್ಟಿಗಳಾಗಿದ್ದರಿಂದ ಅವನಲ್ಲಿ ಊಟಕ್ಕೆ ಹೋದರು. ಣಮೋಕಾರ ಮಂತ್ರದ ಉಚ್ಚಾರ ಮಾಡಿ ಊಟಕ್ಕೆ ಪ್ರಾರಂಭ ಮಾಡುವ ಅವರ ಪದ್ಧತಿ

ಇತ್ತು. ಹಾಗೆಯೇ ಇವತ್ತೂ ಕೂಡ ಣಮೋಂಕಾರ ಮಂತ್ರದ ಜಪ ಬಹಳ ಭಕ್ತಿಯಿಂದ ಮಾಡಿ ಊಟಕ್ಕೆ ಪ್ರಾರಂಭ ಮಾಡಿದರು. ಪಂಚ ಮಂತ್ರದ ಪ್ರಭಾವದಿಂದ ಅದರಲ್ಲಿದ್ದ ವಿಷವು ನಿರ್ವಿಷವಾಯಿತು. ಈ ವಿಷಯದಲ್ಲಿ ೯೮ ಭಕ್ತಿಯಲ್ಲಿ ಹೀಗೆ ಹೇಳಿದ್ದಾರೆ.

ವಿಘ್ನೌಘಾಃ ಪ್ರಲಯಂ ಯಾಂತಿ
ಶಾಕಿನೀ ಭೂತ ಪನ್ನಗಾಃ
ವಿಷಂ ನಿರ್ವಿಷತಾಂ ಯಾತಿ
ಸ್ತೂಯಮಾನೇ ಜಿನೇಶ್ವರೇ ॥

ಇದನ್ನು ನೋಡಿ, ಆ ಪಾಪಿ ಮಿತ್ರನು ವಿಚಾರ ಮಾಡುತ್ತಾನೆ. ಹೀಗೇಕಾಗುತ್ತದೆ. ಈ ಅನ್ನದಲ್ಲಿ ವಿಷವನ್ನು ಕೂಡಿಸಿದರೂ ಇವನು ಸಾಯಲಿಲ್ಲವಲ್ಲ. ವಿಷವೇ ತನ್ನ ಸ್ವಭಾವವನ್ನು ಬಿಟ್ಟಿತಲ್ಲಾ ಹೀಗೆ ವಿಚಾರ ಮಾಡಿ ಆ ಅನ್ನದ ಗಂಧವನ್ನು ತೆಗೆದುಕೊಂಡು ನೋಡಿದನು. ಕೂಡಲೇ ಅವನು ಮೃತ ಪಟ್ಟನು. ಮತ್ತು ಅದೇ ಕಾಡಿನಲ್ಲಿ ಸಿಂಹದ ಜನ್ಮವನ್ನು ಪಡೆದನು, ಎರಡನೆಯ ಮಿತ್ರನು ಮಿತ್ರನ ಮರಣದಿಂದ ದುಃಖಿತನಾಗಿ ದೀಕ್ಷೆಯನ್ನು ತೆಗೆದುಕೊಂಡನು. ಮತ್ತು ತಪಸ್ಸನ್ನು ಆಚರಿಸಿದನು. ಆಗ ಆ ಸಿಂಹವು ಪೂರ್ವ ಭವದ ವೈರದಿಂದ ಆ ಮುನಿಯನ್ನು ಕೊಂದು ಹಾಕಿತು. ಮರಣದ ಸಮಯದಲ್ಲಿ ಮುನಿಯ ಪರಿಣಾಮವು ಕೆಟ್ಟು ಹೋಯಿತು. ಆರ್ತಧ್ಯಾನದಿಂದ ಮರಣವನ್ನು ಹೊಂದಿ ಅದೇ ಕಾಡಿನಲ್ಲಿ ಕಾಡು ಹಂದಿ ಯಾಗಿ ಹುಟ್ಟಿದನು. ಪುನಃ ಮೊದಲಿನ ವೈರವನ್ನು ಸ್ಮರಿಸಿ ಎರಡೂ ಪ್ರಾಣಿಗಳು ಜಗಳ ಮಾಡಿದವು. ಆದರೆ ನನ್ನನ್ನು ನೋಡಿ ಕಾಲಲಬ್ಧಿ ಯಿಂದ ಆ ವೈರವನ್ನು ಬಿಟ್ಟು ಇಲ್ಲಿ ಉಪದೇಶವನ್ನು ಕೇಳಿ ಶಾಂತಿಯಿಂದ ಕೂತಿವೆ, ಎಂದು ಮುನಿಗಳು ಹೇಳಿದ ನಂತರ ಆ ಎರಡು ಪಶುಗಳಿಗೂ ಜಾತಿಸ್ಮರಣೆಯಾಗಿ ಪೂರ್ವಜನ್ಮದ ಎಲ್ಲಾ ವಿಷಯವು ತಿಳಿದ ನಂತರ ಪಶ್ಚಾತ್ತಾಪದಿಂದ ಕಣ್ಣಿನಲ್ಲಿ ನೀರು ಸುರಿಯ ಹತ್ತಿತು. ಆ ಸಮಯದಲ್ಲಿ

ಎರಡು ಪಶುಗಳೂ ಅಣುವ್ರತವನ್ನು ಧರಿಸಿದವು. ವ್ರತ ಪ್ರಭಾವದಿಂದ ಅವುಗಳು ತಮ್ಮ ಆತ್ಮನ ಕಲ್ಯಾಣವನ್ನು ಮಾಡಿಕೊಂಡವು.

ಭವ್ಯರೇ ! ನೋಡಿರಿ. ಸತ್ಸಂಗತಿಯಿಂದ ಪಶುಗಳ ಉದ್ಧಾರವೂ ಆಗುವದು. ಆದುದರಿಂದ ಸತ್ಸಂಗತಿಯನ್ನ ಮಾಡಿರಿ. ದುರ್ಜನ ಸಂಗತಿಯಿಂದ ಇಹಲೋಕ ಮತ್ತು ಪರಲೋಕ ಸುಖವೂ ನಷ್ಟವಾಗುತ್ತದೆ. ಧರ್ಮಧ್ಯಾನದಲ್ಲಿ ಸಮಯವನ್ನು ಕಳೆಯಿರಿ. ಧರ್ಮವಲ್ಲದೆ ಆತ್ಮಕಲ್ಯಾಣ ಮಾಡುವ ಬೇರೆ ಯಾವ ಉಪಾಯವೂ ಇಲ್ಲ ಆದುದರಿಂದ ಸುಖವನ್ನು ಬಯಸುವ ಭವ್ಯರು ಯಾವಾಗಲೂ ಧರ್ಮವನ್ನು ಪಾಲಿಸಿ ಪುಣ್ಯಸಂಚಯವನ್ನು ಮಾಡಬೇಕು. ಆ ಪುಣ್ಯಾನುಬಂಧಿ ಪುಣ್ಯವು ಪರಂಪರೆಯಿಂದ ಈ ಜೀವನಿಗೆ ದೇವೇಂದ್ರ ಪದವಿ, ಚಕ್ರವರ್ತಿ ಪದವಿಯನ್ನು ಕೊಟ್ಟು, ತೀರ್ಥಂಕರ ಪದವಿಯನ್ನು ಹೊಂದಿಸಿ ಮುಕ್ತಿಯನ್ನು ಕೊಡುತ್ತದೆ. ಪುಣ್ಯವಂತನಿಗೆ ಯಾವ ವಿಷಯವೂ ಅಸಾಧ್ಯವಲ್ಲ

ಉತ್ಸಾಹಸಂಪನ್ನಮದೀರ್ಘಸೂತ್ರಂ
ಕ್ರಿಯಾವಿಧಿಜ್ಞಂ ವ್ಯಸನೇಷ್ವಸಕ್ತಂ
ಶೂರಂ ಕೃತಜ್ಞಂದೃಢಸೌಹೃದಂ ಚ
ಲಕ್ಷ್ಮೀ ಸ್ವಯಂ ಯಾತಿ ನಿವಾಸಹೇತೋಃ

ಧರ್ಮನೀತಿಸಾರ.

ನೋಡಿ, ಒಂದು ದಿವಸ ಒಬ್ಬ ಶ್ರೇಷ್ಠಿಯು ಸಭೆಯಲ್ಲಿ ಕೂತುಕೊಂಡಿರುವಾಗ ಅವನ ಭಂಡಾರದಲ್ಲಿ ಅನೇಕ ರತ್ನ, ವೈಡೂರ್ಯ ವಜ್ರಗಳು ಆಕಾಶದಿಂದ ತನ್ನಷ್ಟಕ್ಕೆ ತಾನೇ ಬೀಳುತ್ತಿದ್ದವು. ಸಾವಿರಾರು ದೇವತೆಗಳು ಆ ಭಂಡಾರವನ್ನು ರಕ್ಷಿಸುತ್ತಿದ್ದವು. ನೋಡಿ. ಪುಣ್ಯದ ಮಹಿಮೆಯು ಹೇಗಿದೆ. ಸಾಹುಕಾರನು ಆ ದೇವತೆಗಳನ್ನು ಕೇಳುತ್ತಾನೆ. ನೀವು ಇಲ್ಲಿ ಏನು ಮಾಡುತ್ತಿದ್ದೀರೆಂದು. ಅವರು ಉತ್ತರಿಸಿದರು. ಸ್ವಾಮಿನ್ ! ನಿಮ್ಮ ಭಂಡಾರದ ರಕ್ಷಣೆಗೋಸ್ಕರವಾಗಿ ಇಲ್ಲಿ ಬಂದಿದ್ದೇವೆ. ಆಗ ಸಾಹುಕಾರನು ಅವರಿಗೆ ಹೇಳುತ್ತಾನೆ, ನನಗೆ ನಿಮ್ಮ ಅಗತ್ಯವೂ ಇಲ್ಲ. ಈ ಸಂಪತ್ತಿಯ ಅಗತ್ಯವೂ ಇಲ್ಲ. ನೀವು ಬೇರೆ ಕಡೆ ಹೋಗಿ. ಎಂದನು. ಆಗ ಆ

ದೇವತೆಗಳು ‹ ಶ್ರೇಷ್ಠಿವರ್ಯ! ನಿಮ್ಮ ಪುಣ್ಯವು ಮುಗಿಯುವ ವರೆಗೆ ನಾವು ಬೇರೆ ಕಡೆಗೆ ಹೋಗಲು ಸಾಧ್ಯವಿಲ್ಲ. ಯಾವ ವ್ಯಕ್ತಿಯು ಉತ್ಸಾಹೀ ಶೀಘ್ರ ಕಾರ್ಯವನ್ನು ಮಾಡುವವ, ಕಾರ್ಯ ಪದ್ಧತಿಯನ್ನು ತಿಳಿದವ, ಮತ್ತು ಕೃತಜ್ಞನಾಗಿರುತ್ತಾನೆಯೋ ಅವನ ಸಮೀಪದಲ್ಲಿರಲು ಲಕ್ಷ್ಮಿಯು ತನ್ನಷ್ಟಕ್ಕೆ ತಾನೇ ಹೋಗುತ್ತಾಳೆ. ಆಗ ಆ ಸಾಹುಕಾರನು ವಿಚಾರ ಮಾಡುತ್ತಾನೆ. ಈ ಪುಣ್ಯವು ಜಡರೂಪವಾಗಿದೆ. ಅದರ ಅವಧಿಯು ಮುಗಿದನಂತರ ಅದು ಹೋಗಿಯೇ ಹೋಗುತ್ತದೆ. ಪುಣ್ಯ ಹೋದ ನಂತರ ಪುಣ್ಯಹೀನನಾಗಿ ಬದುಕುವದರಿಂದ ಏನೂ ಪ್ರಯೋಜನವಿಲ್ಲ, ಪುಣ್ಯವು ಮುಗಿಯುವ ಮೊದಲೇ ಆತ್ಮಕಲ್ಯಾಣವನ್ನು ಮಾಡಿಕೊಳ್ಳಬೇಕು. ಸಂಸಾರದ ವಿಷಯದಲ್ಲಿ ವಿರಕ್ತನಾಗಿ ತತ್ವವಿಚಾರ ಮಾಡುವುದು ಸತ್ಪುರುಷರ ಕರ್ತವ್ಯವಾಗಿದೆ.

ಲಹೇ ಪುಣ್ಯಸೇ ಸ್ವರ್ಗಸುಖ ಪಡೇ ನರ್ಕಪರ ಪಾಪ
ಪುಣ್ಯಪಾಪ ತಜ ಆಪನೆ ರಮೇಲಹೈ ಶಿವ ಆಪ
ವ್ರತ ತಪ ಸಂಯಮ ಶೀಲ ಜಿಯ ಶಿವಕಾರಣ ವ್ಯವಹಾರ
ನಿಶ್ಚಯ ಕಾರಣ ಮೋಕ್ಷಕೋ ಆತಮ ಅನುಭವ ಸಾರ

ಈ ಪ್ರಕಾರ ವಿಚಾರ ಮಾಡಿ ಆ ಸಾಹುಕಾರನು ಸಂಸಾರ ಭೋಗಗಳನ್ನು ಬಿಟ್ಟು ಉತ್ತಮವಾದ ದಿಗಂಬರ ದೀಕ್ಷೆಯನ್ನು ಪಡೆದನು ಮತ್ತು ಆತ್ಮಸಿದ್ಧಿಗೋಸ್ಕರವಾಗಿ ತಪಸ್ಸನ್ನು ಆಚರಿಸಿದನು. ಬಾಹ್ಯ ವಸ್ತುಗಳನ್ನು ಮತ್ತು ಮನೆಯನ್ನು ಬಿಡದೆ ತಪಸ್ಸು ಆಚರಿಸಲಾಗುವುದಿಲ್ಲ. ಮನೆಯನ್ನು ಬಿಟ್ಟರೂ ಭಾವಲಿಂಗಿ ಮುನಿಯಾಗಬೇಕು. ಭಾವಲಿಂಗಿಯಾಗದೆ ಎಷ್ಟು ತಪಶ್ಚರಣೆಯನ್ನು ಮಾಡಿದರೂ ಏನೂ ಪ್ರಯೋಜವವಿಲ್ಲ.

ಹೊರಗೆ ಸರ್ಪ ಬಿಡಬಹುದು ಚಿತ್ತದೊಳಿದ್ದ
ಕರಿಯುನೊಂದನು ಬಿಡಲರಿದು
ಅರುವೆಯ ಬಿಸುಟರೆ ತಪಸಿಯು
ಹೊರೆ ಬಿಟ್ಟರರಿಗೊಲ ವಿಷ ಹೋಯಿತೆ ಫಣಿಗೆ ॥

ಭರತೇಶವೈಭವ.

ಹೊರಗಿನ ಎಲ್ಲ ಪರಿಗ್ರಹಗಳನ್ನು ಬಿಡುವುದು ಸುಲಭ. ಆದರೆ ಅಂತರಂಗದಲ್ಲಿರುವ ರಾಗಾದಿ ವಿಕಾರಭಾವಗಳನ್ನು ಬಿಡುವುದು ಬಹಳ ಕಠಿನವಾದ ಕಾರ್ಯವಾಗಿದೆ. ವಸ್ತ್ರವನ್ನು ಬಿಟ್ಟ ಮಾತ್ರಕ್ಕೆ ಒಳಗಿನ ವಿಕಾರವು ಹೋಯಿತೆಂದರ್ಥವಲ್ಲ, ಸರ್ಪವು ಪೊರೆಯನ್ನು ಬಿಟ್ಟ ಮಾತ್ರಕ್ಕೆ ಅದರ ಹೋದಂತಾಗಲಿಲ್ಲ. ಆದ್ದರಿಂದ ಭವ್ಯರೇ! ವಿಚಾರ ಮಾಡಿರಿ. ಆತ್ಮಕಲ್ಯಾಣವಿಲ್ಲದೆ ಎಷ್ಟು ತಪಸ್ಸ ಮಾಡಿ ಶರೀರವನ್ನು ಕೃಶ ಮಾಡಿದರೂ ವ್ಯರ್ಥವೇ ಸರಿ. ಕರ್ಮದ ಮರ್ಮವನ್ನು ತಿಳಿಯಿರಿ. ಅದನ್ನು ನಾಶ ಮಾಡಿರಿ. ಕರ್ಮ ಈ ಆತ್ಮ ಗುಣಗಳನ್ನು ನಾಶ ಮಾಡಲಿಕ್ಕೆ ವಿಷದಂತಿದೆ, ಮನಸ್ಸಿನ ವಿಕಾರ ಭಾವವೆಂಬ ವಿಷವನ್ನು ವಮನ ಮಾಡಿರಿ. ಹಾಗಾಗದಿದ್ದರೆ ಕಾರ್ಯಸಿದ್ಧಿಯಾಗಲಾರದು. ಕಟ್ಟಿದ ಕರ್ಮಗಳು ಫಲ ಕೊಡದೆ ಹೋಗುವುದಿಲ್ಲ. ತೀವ್ರ ಪರಿಣಾಮದಿಂದ ಕರ್ಮವನ್ನು ಕಟ್ಟಿದರೆ ತೀವ್ರತೆಯಿಂದ ಉದಯದಲ್ಲಿ ಬರುತ್ತದೆ. ಮಧ್ಯಮ ಅಥವಾ ಮಂದ ಪರಿಣಾಮದಿಂದ ಕರ್ಮಬಂಧನವನ್ನು ಮಾಡಿದ್ದರೆ ಮಧ್ಯಮ ಅಥವಾ ಮಂದರೂಪದಲ್ಲಿ ಉದಯಕ್ಕೆ ಬರುತ್ತದೆ. ಹೀಗೆ ಪರಿಣಾಮಗಳ ಶ್ರೇಣಿಯನ್ನು ಮೂರು ರೂಪವಾಗಿ ವಿಭಾಗಿಸಬಹುದು. ಈ ವಿಷಯದಲ್ಲಿ ಒಬ್ಬ ಸುಭಾಷಿತಕಾರರು ಹೀಗೆ ಹೇಳಿದ್ದಾರೆ.

ತ್ರಿಭಿರ್ವರ್ಷೈಸ್ತ್ರಿಭಿರ್ಮಾಸೈಸ್ತ್ರಿಭಿಃ ಪಕ್ಷೈಸ್ತ್ರಿಭಿರ್ದಿನೈಃ।
ಅತ್ಯುತ್ಕಟೈಃ ಪಾಪಪುಣ್ಯೈರಿಹೈವ ಫಲಮಶ್ನುತೇ॥

ಅತ್ಯಂತ ತೀವ್ರ ಪಾಪದ ಅಥವಾ ಪುಣ್ಯದ ಫಲವನ್ನು ಈ ಜೀವನು ಮೂರು ವರ್ಷ, ಮೂರು ತಿಂಗಳು, ಮೂರು ದಿನ, ಮೂರು ಪಕ್ಷ ಅಥವಾ ಮೂರು ದಿನಗಳೊಳಗೆ ಇಲ್ಲಿಯೇ ಅನುಭವಿಸುತ್ತಾನೆ. ಅದುದರಿಂದ ನೀವು ಪರಿಣಾಮ ಶುದ್ಧಿಯನ್ನು ಮಾಡಿ ಕೊಳ್ಳಿರಿ. ಕಷಾಯವನ್ನು ಮಂದ ಮಾಡಿರಿ. ಮನಸ್ಸನ್ನು ಶುಭ ಕಾರ್ಯಗಳ ಕಡೆಗೆ ಹಚ್ಚಿರಿ. ಶುಭ ಪರಿಣಾಮದಿಂದ ಪುಣ್ಯಬಂಧವಾಗುತ್ತದೆ. ಆ ಪುಣ್ಯವು ಶುಭಗತಿಗೆ ಕಾರಣ

ವಾಗುತ್ತದೆ. ಮನುಷ್ಯನು ಶುಭಗತಿಯನ್ನು ಅರ್ಜಿಸಲು ಪ್ರಯತ್ನಿಸಬೇಕು
ಅಶುಭ ಗತಿಯಿಂದ ದುಃಖದ ಪ್ರಾಪ್ತಿಯಾಗುತ್ತದೆ. ಆದುದರಿಂದ
ಭವ್ಯಾತ್ಮರೇ ! ದೋಷವನ್ನು ಬಿಟ್ಟು ಗುಣವನ್ನು ಗ್ರಹಣೆ ಮಾಡಿರಿ.
ಜ್ಞಾನಿಗಳು ದೋಷವನ್ನು ಬಿಟ್ಟು ಗುಣವನ್ನು ಗ್ರಹಣೆ ಮಾಡುತ್ತಿರುತ್ತಾರೆ.

**ತ್ಯಜಂತಿ ಶೂರ್ಪವದ್ದೋಷಾನ್ ಗುಣಾನ್ ಗೃಣ್ಹಂತಿ ಸಾಧವಃ ।**
**ದೋಷಗ್ರಾಹೀ ಗುಣತ್ಯಾಗೀ ಚಾಲನೀವ ತು ದುರ್ಜನಾಃ ॥**

ಯಾವ ಪ್ರಕಾರವಾಗಿ ಮರವು ಧಾನ್ಯದ ಸಿಪ್ಪೆಯನ್ನು ಬಿಟ್ಟು ಧಾನ್ಯವನ್ನು ಹಿಡಿದುಕೊಳ್ಳುತ್ತದೆಯೋ ಹಾಗೆಯೇ ಸಜ್ಜನರು ದೋಷವನ್ನು ಬಿಟ್ಟು ಗುಣಗಳನ್ನು ಗ್ರಹಣೆ ಮಾಡುತ್ತಾರೆ. ಆದರೆ ದುರ್ಜನರು ಸಾರಣಿಯಂತೆ ಹಿಟ್ಟನ್ನು ಬಿಟ್ಟು ಅದರ ನಿಸ್ಸಾರವಾದ ಭುಸೆಯನ್ನು ಹಿಡಿದು ಕೊಳ್ಳುವ ಹಾಗೆ ಗುಣಗಳನ್ನು ಬಿಟ್ಟು ದೋಷಗಳನ್ನು ಗ್ರಹಣೆ ಮಾಡುತ್ತಾರೆ. ದೋಷಗ್ರಹಣೆ ಮಾಡುವುದರಿಂದ ಅನೇಕ ಭವಗಳ ವರೆಗೆ ದುಃಖವನ್ನು ಅನುಭವಿಸಬೇಕಾತ್ತದೆ. ದೋಷಗಳನ್ನಿಟ್ಟುಕೊಂಡು ಎಷ್ಟು ತಪಶ್ಚರಣ ಮಾಡಿದರೂ ಏನೂ ಪ್ರಯೋಜನವಿಲ್ಲ. ಅದು ಫಲಕಾರಿಯಾಗಲಾರದು.

ಒಬ್ಬ ಮುನೀಶ್ವರರು ಅನೇಕ ವರ್ಷಗಳಿಂದ ಘೋರ ತಪಶ್ಚರ್ಯೆಯನ್ನು ಮಾಡುತ್ತಿದ್ದರು. ಆದರೆ ಕರ್ಮದ ಗತಿ ವಿಚಿತ್ರವಾಗಿದೆ. ಒಂದು ಸಾರಿ ಒಬ್ಬ ರತ್ನ ವ್ಯಾಪಾರಿಯು ರತ್ನ ವ್ಯಾಪಾರವನ್ನು ಮಾಡಿ ಹೋಗುತ್ತಿದ್ದನು. ಆ ಸಮಯದಲ್ಲಿ ಅನೇಕರು ಅದೇ ಮಾರ್ಗದಿಂದ ಹೋಗುತ್ತಿದ್ದರು. ಆ ಸಮಯದಲ್ಲಿ ಆ ವ್ಯಾಪಾರಿಯು ಅವರೊಡನೆ ನೀವೆಲ್ಲ ಎಲ್ಲಿ ಹೋಗುತ್ತಿದ್ದೀರೆಂದು ಕೇಳುತ್ತಾನೆ. ಆಗ ಅವರು ' ಇಲ್ಲಿ ಸಮೀಪದಲ್ಲಿಯೇ ಕಾಡಿನಲ್ಲಿ ಒಬ್ಬ ಮುನೀಶ್ವರರು ಬಂದಿರುತ್ತಾರೆ. ಅವರ ದರ್ಶನಕ್ಕೋಸ್ಕರವಾಗಿ ನಾವೆಲ್ಲ ಹೋಗುತ್ತೇವೆ. ಎಂದರು. ಆ ವ್ಯಾಪಾರಿಯು ಧಾರ್ಮಿಕನಾಗಿದ್ದರಿಂದ ಅವನೂ ಅವರೊಡನೆ ದರ್ಶನಕ್ಕೆ ಹೋದನು.

ಮನಸ್ಸಿನಲ್ಲಿ ವಿಚಾರ ಮಾಡುತ್ತಿದ್ದಾನೆ. 'ಕೋಟಿ ರೂಪಾಯಿಗಳನ್ನು ವ್ಯಾಪಾರ ಮಾಡಿ ಪಡೆದೆನು. ಆಗ ಈ ಮುನಿಗಳ ದರ್ಶನದ ಭಾಗ್ಯವು ದೊರೆಯಿತು ಎಂದು ವಿಚಾರ ಮಾಡಿ ಕೋಟಿ ರತ್ನಗಳನ್ನು ದರ್ಶನಾಂಜಲಿಯಲ್ಲಿ ಹಿಡಿದುಕೊಂಡು ಮುನಿಗಳ ಚರಣದಲ್ಲಿ ಅರ್ಪಿಸಿ ಬಹಳ ಭಕ್ತಿಯಿಂದ ದರ್ಶನ ಮಾಡಿದನು. ಕರ್ಮದ ಗತಿಯನ್ನು ನೋಡಿರಿ. ಮುನೀಶ್ವರರು ವಿಚಾರ ಮಾಡುತ್ತಿದ್ದಾರೆ. ಈ ರತ್ನಗಳನ್ನು ಕಲ್ಲಿಯೇ ಬಿಟ್ಟರೆ ಯಾರಾದರೂ ಇವನ್ನು ತೆಗೆದು ಕೊಂಡು ಹೋದಾರು. ಆದುದರಿಂದ ನಾನೇ ಇವುಗಳನ್ನು ತೆಗೆದಿಟ್ಟರೆ ನನ್ನ ರಕ್ಷಣೆಯನ್ನು ಯಾರಾದರೂ ಮಾಡಿಯಾರು ಎಂದು ವಿಚಾರ ಮಾಡಿ, ರತ್ನತ್ರಯ ಭಂಡಾರದ ಪ್ರೇಮವನ್ನು ಬಿಟ್ಟು ಆ ಕಲ್ಲಿನ ರತ್ನಗಳಲ್ಲಿ ಮೋಹಿತರಾದರು. ಆ ರತ್ನಗಳನ್ನು ತೆಗೆದುಕೊಂಡು ಪಿಂಛಿಯ ಒಳಗೆ ಇಟ್ಟು ಬಿಟ್ಟರು. ಮಾಯಾಚಾರ ಮತ್ತು ಅತಿ ಲೋಭದಿಂದ ತಿರ್ಯಂಚಗತಿಯ ಬಂಧನಾಗುತ್ತದೆ. ಮಾಯಾ ತೈರ್ಯಗ್ಯೋನಸ್ಯ. ಎಂದು ಹೇಳಿದ್ದಾರೆ. ಇಂಥಹ ಮಾಯಾಚಾರಿಗೆ ಒಳ್ಳೆಯ ಗತಿಯು ಹೇಗೆ ಲಭಿಸುವುದು? ಈ ವಿಷಯದಲ್ಲಿ ಭರತೇಶ ವೈಭವದಲ್ಲಿ ಹೀಗೆ ಹೇಳಿದಾರೆ

ಕ್ರೋಧದಮಾನದ ಮಾಯೆಯ ಲೋಭದ
ಬೋಧದಿಂದೊಳಗೇನೆಂಬವರಿಗೆ
ಬೋಧವೇಕಹುದು ಸುಚಿತ್ತದೊಳಾತ್ಮಸ-
ಮಾಧಿಯೊಳಗೆ ನಿಲ್ಲಬೇಕು

ಭರತೇಶ ವೈಭವ.

ಲೋಭ ಪರಿಣಾಮದಿಂದ ರತ್ನತ್ರಯ ರೂಪವಾದ ಸಮಾಧಿಯು ಲಭಿಸಲಿಲ್ಲ. ಅಂತರಂಗದಲ್ಲಿ ಆರ್ತಧ್ಯಾನವಿದ್ದರಿಂದ ಅವನು ಸತ್ತು ಮುಂಗುಸಿಯಾಗಿ ಹುಟ್ಟಿದನು. ಆ ಮುನಿಯ ದಹನ ಕ್ರಿಯೆಯ ಸಮಯದಲ್ಲಿ ಅಲ್ಲಿ ಬಿದ್ದಿದ್ದ ಪಿಂಛಿಯ ಸಮೀಪ ಆ ಮುಂಗುಸಿಯು ಬಂದು ಅದನ್ನು ಬಾಯಿಯಿಂದ ಕಚ್ಚಿ ಬಿಡಿಸಲು ಪ್ರಯತ್ನ ಪಡುತ್ತಿತ್ತು. ಆ ಸಮಯದಲ್ಲಿ

ಅದೇ ಕಾಡಿನಲ್ಲಿ ಇನ್ನೊಂದು ಮುನಿ ಸಂಘವು ಬಂದಿತ್ತು. ಅದರೊಳಗಿನ ಒಬ್ಬ ಶಿಷ್ಯನು ಗುರುಗಳಿಗೆ ಕೇಳುತ್ತಾನೆ, 'ಗುರುದೇವ ಈ ಪಿಂಛಿಯು ಆ ಮುಂಗುಸಿಗೆ ಪ್ರಿಯವಾಗಿದೆ. ಎಂದು ಕಾಣುತ್ತದೆ. ಅದರ ಕಾರಣ ವೇನು ? ಎಂದು. ಆಗ ಗುರುಗಳು ಹೇಳುತ್ತಾರೆ. ಈ ಮುಂಗುಸಿಯ ಜೀವನೇ ಮೊದಲು ಮುನಿಯಾಗಿದ್ದ. ಪಿಂಛಿಯಲ್ಲಿ ರತ್ನಗಳನ್ನಿಟ್ಟು ಕೊಂಡು ಅದರ ಮೇಲೆ ಪ್ರೀತಿಯನ್ನಿಟ್ಟಿದ್ದ ಆರ್ತ ಧ್ಯಾನದಿಂದ ಸತ್ತು ಮುಂಗುಸಿಯಾದನು. ಆದುದರಿಂದ ಆ ಪಿಂಛಿಯ ಮೇಲೆ ಅದಕ್ಕೆ ಮೋಹ ಉಂಟಾಗಿದೆ. ಎಂದರು. ಇದನ್ನು ಕೇಳಿ ಆ ಮುಂಗುಸಿಗೆ ಜಾತಿಸ್ಮರಣೆ ಯಾಯ್ತು. ಆ ಮುನಿಗಳ ಸಮೀಪಕ್ಕೆ ಬಂದು ಅತ್ಯಂತ ಭಕ್ತಿಯಿಂದ ನಮಸ್ಕಾರ ಮಾಡಿತು. ಅದರ ಉಪಶಮ ಭಾವವನ್ನು ತಿಳಿದು ಮುನಿಗಳು ಅದಕ್ಕೆ ಪಂಚಾಣುವ್ರತವನ್ನು ಕೊಟ್ಟರು. ಆ ವ್ರತದ ಪ್ರಭಾವ ದಿಂದ ಅದರ ಮುಂದಿನ ಗತಿಯು ಸುಧಾರಿಸಿತು. ನೋಡಿ, ಮೋಹನೀಯ ಕರ್ಮದ ಗತಿಯು ಎಷ್ಟು ವಿಚಿತ್ರವಾಗಿದೆ. ಆದುದರಿಂದ ಭವ್ಯರೇ, ನೀವೂ ಮೋಹವನ್ನು ಬಿಟ್ಟು ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಮತ್ತು ಎಲ್ಲ ವ್ರತಗಳಲ್ಲಿ ಶ್ರೇಷ್ಠವಾದ ತಪೋಭಾವನೆಯನ್ನು ನಿಮ್ಮ ಹೃದಯದಲ್ಲಿಟ್ಟು ಕೊಳ್ಳಿರಿ. ಹೀಗೆ ತ್ರಿಲೋಕ ಪೂಜ್ಯನಾದ ಜಿನೇಶ್ವರನ ವಚನವಾಗಿದೆ. ಹೀಗೆ ಸಂಕ್ಷೇಪದಿಂದ ತಪ ಧರ್ಮದ ವರ್ಣನೆಯನ್ನು ಮಾಡಲಾಗಿದೆ.

**ಉತ್ತಮ ತಪೋಧರ್ಮಾಯ ನಮಃ**

# ಉತ್ತಮ ತ್ಯಾಗ ಧರ್ಮಾಯ ನಮಃ

ಮಂಗಲಾಚರಣೆ.

ಚೆಲುವರ ಚೆಲ್ವ ಚೆನ್ನಿಗರ ಚೆನ್ನ ಸುವೀರರ ವೀರ ಸತ್ಕಲಾ-
ಬಲರ ಬಲಾಢ್ಯ ಬಲ್ಲಿದರ ಬಲ್ಲಹ ದೇವರ ದೇವ ನೀತಿನಿ-
ರ್ಮಲರ ನಿಧಾನ ನಿಚ್ಚ ಮದವಕ್ಕಳ ಮಾಣಿಕಕಾಂತಿ ಶಾಂಶೀ-
ತಲರ ಶಿರೋಮಣಿ ನಿನಗೆ ಪಾಸಟಿಯಾರಪರಾಜಿತೇಶ್ವರಾ

ಉತ್ತಮರಲ್ಲಿ ಉತ್ತಮ ಸುಂದರರಲ್ಲಿ ಸುಂದರ ತಪಸ್ವಿಗಳಲ್ಲಿ ಮಹಾ ತಪಸ್ವಿ ವೀರರಲ್ಲಿ ಮಹಾವೀರ ದೇವರಲ್ಲಿ ಮಹಾದೇವ ನೀತಿವಂತರಲ್ಲಿ ಮಹಾ ನೀತಿವಂತ ಭವ್ಯ ಜೀವನನವನ್ನು ರಕ್ಷಿಸುವ ಅನಾಥ ಬಂಧು ಹೀಗಿರುವ ದೇವರಿಗೆ ಸಮಾನರಾದ ದೇವರು ಲೋಕದಲ್ಲಿ ಬೇರೆ ಇಲ್ಲ ಆದುದರಿಂದ ಭಗವನ್ ನನ್ನನ್ನು ರಕ್ಷಿಸಿರಿ. ಮತ್ತು ನನ್ನನ್ನು ಈ ಸಂಸಾರವೆಂಬ ಸಮುದ್ರದಿಂದ ಪಾರಗೊಳಿಸಿರಿ. ಆದುದರಿಂದ ನಾನು ನಿಮ್ಮ ಚರಣಗಳಿಗೆ ನಮಸ್ಕಾರ ಮಾಡುವೆನು.

ಸಂಯತಸ್ಯ ಯೋಗ್ಯಂ ಜ್ಞಾನಾದಿದಾನಂ ತ್ಯಾಗಃ ||

ಸರ್ವಾರ್ಥಸಿದ್ಧಿ.

ಧನ ಕನಕ ಮೊದಲಾದ ಪರಿಗ್ರಹಗಳು ಕರ್ಮದ ಉದಯದಿಂದ ಪ್ರಾಪ್ತವಾಗುತ್ತವೆ. ಎಂದು ತಿಳಿದು ಮತ್ತು ಆ ಪರಿಗ್ರಹಗಳು ಪರಾಧೀನ, ವಿನಾಶಕ, ಮಹಾಕಷಾಯವನ್ನು ಉತ್ಪನ್ನ ಮಾಡುವ, ಲೋಭವನ್ನು ಹೆಚ್ಚಿಸುವ ಅಹಂಕಾರವನ್ನು ಏರಿಸುವ ರಾಗದ್ವೇಷವನ್ನು ತೀವ್ರವಾಗಿ ಮಾಡುವ ಆರಂಭವನ್ನು ಹೆಚ್ಚಿಸುವ ಮತ್ತು ಹಿಂಸಾದಿ ಪಂಚ ಪಾಪಗಳಿಗೆ ಮೂಲ ಕಾರಣಗಳಾಗಿವೆ. ವಿದ್ಯೆಯೇ ತನ್ನ ಕಣ್ಣೆಂದು ತಿಳಿಯುವ ಉತ್ತಮ ಪುರುಷರು ರಾಗದ್ವೇಷ ಮೊದಲಾದ ದೋಷಗಳು ಪಾಪಕ್ಕೆ ಕಾರಣವಾಗಿವೆ ಎಂದು ತಿಳಿದು ಅವುಗಳನ್ನು ಬಿಡುತ್ತಾರೆ. ಅವರೇ ಪ್ರಶಂಸೆಗೆ ಯೋಗ್ಯವಾದವರು.

ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ಸತ್ಯಸಮಂ ತಪಃ
ನಾಸ್ತಿರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖ ||
ಸುಭಾಷಿತಾವಲಿ.

ಮನುಷ್ಯನಿಗೆ ಆತ್ಮ ವಿದ್ಯೆಯಂತಹ ಕಣ್ಣು ಬೇರೆ ಇಲ್ಲ. ಸತ್ಯ ಭಾಷಣದಂತಹ ಬೇರೆ ತಪಸಿಲ್ಲ. ಮೋಹದಂತಹ ದುಃಖ ಬೇರೆ ಇಲ್ಲ. ಹಾಗೆಯೇ ತ್ಯಾಗದಂತಹ ಸುಖವೂ ಬೇರೆ ಇಲ್ಲ. ಆದುದರಿಂದ ಈ ಪರಿಗ್ರಹವನ್ನು ಯಾವ ಮಹಾಪುರುಷರು ಸ್ವೀಕರಿಸುವುದಿಲ್ಲವೋ ಅವರೇ ಪ್ರಶಂಸೆಗೆ ಪಾತ್ರರು. ಯಾರು ಇದನ್ನು ಸ್ವೀಕರಿಸಿ ನಂತರ ಅದರ ಸ್ವರೂಪವನ್ನು ವಿಷಮಯವಾಗಿದೆ ಎಂದು ತಿಳಿದು ಅಥವಾ ಹುಲ್ಲು, ಕಸಕಡ್ಡಿ ಎಂದು ತಿಳಿದು ಬಿಡುತ್ತಾರೆಯೋ ಅವರೂ ನಿಜವಾಗಿಯೂ ಮಹಾಪುರುಷರು. ಸಂಪತ್ತು ಅನೇಕ ಪಾಪಗಳಿಗೆ ಕಾರಣವಾಗಿದೆ. ಯಾರ ಇಚ್ಛೆಯು ದೂರವಾಗಿವೆಯೋ ಅವರು ಧನ್ಯರಾಗಿದ್ದಾರೆ.

ಆಶಾಯಾ ಯೇ ದಾಸಾಸ್ತೇ ದಾಸಾಃ ಸರ್ವಲೋಕಸ್ಯ
ಆಶಾ ಏಷಾಂ ದಾಸೀ ತೇಷಾಂ ದಾಸಾಯತೇ ವಿಶ್ವಂ ||

ಮಹಾ ಪುರುಷರು ತನ್ನ ಧನವೆಂಬ ದಾಸಿಯನ್ನು ದಾನ ಪೂಜೆಯ ಕಾರ್ಯದಲ್ಲಿಯೂ, ಪರೋಪಕಾರದಲ್ಲಿಯೂ ವಿನಿಯೋಗಿಸುತ್ತಾರೆ. ಅವರು ಪ್ರಶಂಸನೀಯರು. ಮತ್ತು ಯಾರು ಆ ದಾಸಿಯ ದಾಸರಾಗಿದ್ದಾರೆಯೋ ಅವರು ಮೂರು ಲೋಕದ ದಾಸರಾಗಿದ್ದಾರೆ. ಯಾರು ಆ ಆಶೆಯನ್ನು ತನ್ನ ದಾಸಿಯೆಂದು ತಿಳಿದಿದ್ದಾರೆಯೆ ಅವರಿಗೆ ಈ ಲೋಕದ ಸಮಸ್ತ ಜನರು ಸೇವಕರಾಗುತ್ತಾರೆ.

ಆದುದರಿಂದ ಭವ್ಯರೇ! ಧನ ಲೋಭವು ಸರ್ವ ಅನರ್ಥಕ್ಕೆ ಮೂಲ ಕಾರಣವಾಗಿದೆ. ಎಷ್ಟು ಸಂಪತ್ತಿಯು ಲಭಿಸಿದರೂ ಲೋಭವು ಹೆಚ್ಚುತ್ತಾ ಹೋಗುತ್ತದೆ. ಅನಂತ ಸಾರಿ ನೀನು ಧನವೈಭವಗಳ ಅಧಿಪತಿಯಾಗಿದ್ದೀಯೇ. ಆದರೂ ನಿನ್ನ ಧನ ಕನಕಗಳ ಇಚ್ಛೆಯು ತೃಪ್ತಿಯಾಗಿಲ್ಲ.

ಧನಮಂ ಧಾನ್ಯಮನೂಟಮಂ ವನಿತೆಯಂ ಬಂಗಾರಮಂ ವಸ್ತ್ರವಾ
ಹನರಾಜ್ಯಾದಿಗಳಂ ಸದಾಬಯಸುವೀ ಭ್ರಾಂತಾತ್ಮರಾಪಾಟಿಯೋಳ್
ಜಿನರಂ ಸಿದ್ಧರನಾರ್ಯವರ್ಯರನುಪಾಧ್ಯಾಯರ್ಕಳಂಸಾಧುಸಾ
ವನರಂ ಚಿಂತಿಸಿ ಮುಕ್ತಿಗೇಕೊಡಗರೋ ರತ್ನಾಕರಾಧೀಶ್ವರಾ ॥

ರತ್ನಾಕರಶತಕ.

ಈ ಸಂಸಾರದಲ್ಲಿ ಜೀವನು ಧನ ಧಾನ್ಯ, ಊಟ, ಉಡಿಗೆ, ಸ್ತ್ರೀ, ಬಂಗಾರ, ವಾಹನ, ರಾಜ್ಯ ಮೊದಲಾದ ಭೋಗಗಳನ್ನು ಇಚ್ಛಿಸುತ್ತಾ ಅವುಗಳಿಗೋಸ್ಕರವಾಗಿ ಹೇಗೆ ಭ್ರಾಂತಿಗೊಳ್ಳುತ್ತಾನೆಯೋ ಹಾಗೆಯೇ ಜಿನಸಿದ್ಧ ಸೂರಿ ಪಾಠಕ ಮತ್ತು ಸರ್ವ ಸಾಧುಗಳೆಂಬ ಪಂಚ ಪರಮೇಷ್ಠಿಗಳನ್ನು ಆರಾಧಿಸಿ ಮುಕ್ತಿಯನ್ನು ಏಕೆ ಪಡೆಯುವುದಿಲ್ಲವೆಂಬುದೇ ಆಶ್ಚರ್ಯದ ಮಾತಾಗಿದೆ.

ಜೀವಾತ್ಮನ್ ! ನೀವು ಅನೇಕ ಭವಗಳಲ್ಲಿ ಶರೀರಸುಖ, ಇಂದ್ರಿಯ ಸುಖಗಳನ್ನು ಅನಂತ ಭವಗಳಲ್ಲಿ ಪಡೆದಿರುತ್ತೀ, ಭೋಗದಿಂದ ಈ ಜೀವನಿಗೆ ಅನೇಕ ಸಂಕಟಗಳು ಬರುತ್ತವೆ. ಆ ಆಪತ್ತಿಗಳಿಂದ ಈ ಜೀವನು ಪುನಃ ಆರ್ತಧ್ಯಾನ, ರೌದ್ರ ಧ್ಯಾನವನ್ನು ಮಾಡಿ ಅನೇಕ ನರಕಾದಿ ದುರ್ಗತಿಗಳನ್ನು ಪಡೆಯುತ್ತಾನೆ. ದುಃಖಕ್ಕೆ ಕಾರಣವಾದ ಕರ್ಮಬಂಧನವನ್ನು ಮಾಡಿಕೊಂಡು ದುಃಖಿಯಾಗುತ್ತಾನೆ. ಆದುದರಿಂದ ನೀನು ಅನೇಕ ಸುಖ ಸಂಪತ್ತಿಗಳನ್ನು ಕೊಡಲು ಸಮರ್ಥವಾದ ಪಂಚ ಪರಮೇಷ್ಠಿಗಳ ಧ್ಯಾನವನ್ನು ಮಾಡಿ ರತ್ನತ್ರಯ ಧರ್ಮವನ್ನು ಸ್ವೀಕರಿಸು. ಮನಸ್ಸಿನ ಮೋಹಪರಿಣತಿಯನ್ನು ದೂರ ಮಾಡು. ಯಾಕಂದರೆ ಮೋಹ ಪರಿಣತಿಯು ಅನೇಕ ವಿಕಾರಗಳನ್ನು ಹೆಚ್ಚಿಸುತ್ತದೆ. ಆ ವಿಕಾರಗಳನ್ನು ಬಿಡುವುದರಿಂದಲೇ ತ್ಯಾಗ ಧರ್ಮವಾಗುತ್ತದೆ. ಸಂಸಾರ ಭೋಗಗಳಲ್ಲಿ ಆಸಕ್ತನಾದ ಜೀವನು ಯಾವಾಗಲೂ ಶಂಕಿತ ವೃತ್ತಿಯಲ್ಲಿರುತ್ತಾನೆ. ಈ ಪರಿವಾರ, ಕುಟುಂಬ, ಸಂಪತ್ತಿಯೂ ಯಾವಾಗಲೂ ಸ್ಥಿರವಾಗಿ ಉಳಿಯ

ಬಹುದೋ ? ಅಥವಾ ಇವುಗಳ ನಾಶವಾಗಬಹುದೋ ? ಈ ಭಯವು ಅವನಿಗೆ ಯಾವಾಗಲೂ ಪೀಡಿಸುತ್ತಿರುತ್ತದೆ. ಈ ವಿಷಯದಲ್ಲಿ ಒಬ್ಬ ಗ್ರಂಥ ಕಾರರು ಹೇಳುತ್ತಾರೆ.

**ಪುತ್ರ ಮಿತ್ರ ಕಲಕತ್ರಾದಾ ಸತ್ಯಾಮಪಿ ಚ ಸಂಪದಿ**
**ಅತ್ಮೀಯಾಪಾಯಶಂಕಾಹಿ ಶಂಕುಃ ಪ್ರಾಣಭೃತಾಂ ಹೃದಿ ॥**

ಅಜ್ಞಾನೀ ಜೀವರ ಮನಸ್ಸಿನಲ್ಲಿ ಅನೇಕ ವಿಚಾರಗಳು ಉತ್ಪನ್ನ ವಾಗುತ್ತವೆ. ಪುತ್ರ, ಮಿತ್ರ, ಸ್ತ್ರೀ, ಮೊದಲಾದ ಸಂಪತ್ತಿಗಳನ್ನು ಭೋಗಿ ಸುತ್ತಿದ್ದರೂ, ಅವರ ಹೃದಯದಲ್ಲಿ ಈ ವೈಭವಗಳು ಹೇಗೆ ಉಳಿಯ ಬಹುದು ? ಇವುಗಳನ್ನು ಯಾರಾದರೂ ನಾಶ ಮಾಡಲಾರರಷ್ಟೇ ? ಸ್ತ್ರೀ ಪುತ್ರರು ಸಾಯಲಿಕ್ಕಿಲ್ಲವಲ್ಲ ? ಅವರು ಸತ್ತರೆ ನನ್ನ ಗತಿ ಏನು ? ಎಂಬೀ ತ್ಯಾದಿ ವಿಚಾರಗಳು ಮನಸ್ಸಿನಲ್ಲಿ ಶಸ್ತ್ರದಂತೆ ದುಃಖ ಕೊಡುತ್ತಾ ಇರುತ್ತವೆ ಆದುದರಿಂದ ಭವ್ಯರೇ ! ನೀವು ಲೋಭವನ್ನು ಬಿಟ್ಟು ಸಂಪತ್ತಿಯನ್ನು ದಾನಧರ್ಮದಲ್ಲಿ ವಿನಿಯೋಗಿಸಿ ಪುಣ್ಯ ಸಂಪಾದನೆಯನ್ನು ಮಾಡಿ ಕೊಳ್ಳಿರಿ. ನಿಮ್ಮೊಡನೆ ನೀವು ಅರ್ಜಿಸಿದ ಪುಣ್ಯವೇ ಬರುತ್ತದೆ. ನ್ಯಾಯ ದಿಂದ ಅರ್ಜಿಸಿದ ಧನವನ್ನು ಪಾತ್ರಗಳಿಗೆ ಕೊಡಿರಿ, ಮತ್ತು ಉತ್ಸಾಹ ದಿಂದ ದಾನ ಮಾಡಿರಿ, ಉತ್ಸಾಹವಿಲ್ಲದೆ ಮಾಡಿದ ದಾನದಿಂದ ಪುಣ್ಯಾ ರ್ಜನೆಯಾಗುವುದಿಲ್ಲ. ಸುಪಾತ್ರರಿಗೆ ಅನ್ನದಾನವನ್ನು ಕೊಡುವುದರಿಂದ ಪ್ರಾಪ್ತವಾದ ಪುಣ್ಯದಿಂದ ಈ ಜೀವನು ಭೋಗಭೂಮಿಯಲ್ಲಿ ಜನ್ಮವನ್ನು ಪಡೆಯುತ್ತಾನೆ.

**ಕರಿತಾ ವಂದನ ಮುನಿತೇ ಪದರಿಪಡೇ ಉಚ್ಚ ಗೋತ್ರಚೀ ಜೋಡ**
**ದೇತಾ ದಾನ ತಯಾತೇ ಸುಖ ಮಿಳತೇ ಭೋಗಭೂಮಿಚೆ ಗೋಡ**

ಮುನೀಶ್ವರರ ದರ್ಶನ ಮಾಡುವುದರಿಂದ ಉಚ್ಚ ಗೋತ್ರದ ಬಂಧ ವಾಗುತ್ತದೆ. ಹಾಗೆಯೇ ಅವರಿಗೆ ದಾನವನ್ನು ಕೊಡುವುದರಿಂದ ಭೋಗ ಭೂಮಿಯ ಸುಖವು ಲಭಿಸುತ್ತದೆ. ಒಂದು ಸಾರಿ ಅನ್ನದಾನವನ್ನು ಕೊಡು

ವುದರಿಂದ ನಾಲ್ಕು ಪ್ರಕಾರದ ದಾನವನ್ನು ಕೊಟ್ಟ ಪುಣ್ಯವು ಲಭಿಸುತ್ತದೆ ಸುಪಾತ್ರರಿಗೆ ಅನ್ನದಾನವನ್ನು ಕೊಡುವ ಭಾಗ್ಯವನ್ನು ಪ್ರಾಪ್ತ ಮಾಡುವುದು ಬಹಳ ಕಠಿನವಾಗಿದೆ. ಒಂದು ಅಂಗವು ಹೀನವಾಗಿದ್ದರೆ ಅವನಿಗೆ ಅನ್ನ ದಾನವನ್ನು ಕೊಡಲು ಅಧಿಕಾರವಿಲ್ಲ. ಭೋಗಭೂಮಿಯ ಜೀವಗಳಿಗೆ ಹಾಗೆಯೇ ಸ್ವರ್ಗದ ದೇವತೆಗಳಿಗೆ ಅನ್ನದಾನವನ್ನು ಕೊಡುವ ಅಧಿಕಾರವಿಲ್ಲ ಅನ್ನ ದಾನವನ್ನು ಕೊಡುವ ಭಾಗ್ಯವು ಕರ್ಮ ಭೂಮಿಯಲ್ಲಿ ಹುಟ್ಟಿದ ಮನುಷ್ಯರಿಗೆ ಮಾತ್ರ ಲಭಿಸುತ್ತದೆ. ಈ ಭಾಗ್ಯವು ಲಭಿಸಿಯೂ ಯಾರಿಗೆ ಅನ್ನ ದಾನವನ್ನು ಕೊಡುವ ಭಾವನೆಯಾಗುವುದಿಲ್ಲವೋ ಅವರು ದುರ್ದೈವಿಗಳೆಂದು ತಿಳಿಯಬೇಕು. ದಾನದಿಂದ ಸ್ವಪರೋಪಕಾರವಾಗುತ್ತದೆ. ಸಂಪತ್ತಿಯ ಮೇಲಿನ ಮೋಹವನ್ನು ಕಡಿಮೆ ಮಾಡುವದರ ಅರ್ಥವೇ ತನ್ನ ಮೇಲೆ ಉಪಕಾರ ಮಾಡುವುದು. ಶರೀರಧಾರೀ ಪ್ರಾಣಿಗಳಿಗೆ ಅವರ ಶರೀರ ಸ್ಥಿತಿಗೋಸ್ಕರವಾಗಿ ಅನ್ನದಾನವನ್ನು ಕೊಟ್ಟು ಉಪಕಾರವನ್ನು ಮಾಡುವುದು ಇದೇ ಪರೋಪಕಾರ. ಯಾಕೆಂದರೆ ಅನ್ನವಿಲ್ಲದೆ ಶರೀರ ಸ್ಥಿತಿಯಾಗಲಾರದು. ಶರೀರವಿಲ್ಲದೆ ತಪಾಚರಣೆ, ಧ್ಯಾನ, ಅಧ್ಯಯನ, ಮತ್ತು ರತ್ನತ್ರಯದ ಪ್ರಾಪ್ತಿಯಾಗಲಾರದು. ಆದುದರಿಂದ ಶರೀರವೆಂಬ ಗಾಡಿಯನ್ನು ರಕ್ಷಿಸುವುದಕ್ಕೋಸ್ಕರವಾಗಿ ಅನ್ನ ದಾನವನ್ನು ಕೊಡುವುದು ಅಗತ್ಯವಾಗಿದೆ. ಅನ್ನದಾನವಿಲ್ಲದೆ ಈ ಆತ್ಮನು ಧೈರ್ಯಹೀನನಾಗಿ ಸಂಕ್ಲೇಶ ಪರಿಣಾಮವನ್ನು ಹೊಂದುತ್ತಾನೆ ಅನ್ನವನ್ನು ಪಡೆಯುವುದರಿಂದ ಶರೀರದಲ್ಲಿ ಶಕ್ತಿಯು ಬಂದು ಶುಭ ಪರಿಣಾಮಗಳಿಗೆ ಅನುಕೂಲವಾಗುತ್ತದೆ. ಆದುದರಿಂದ ಶ್ರಾವಕರಿಗೆ ಆಹಾರ ದಾನದ ಪುಣ್ಯವು ಲಭಿಸುತ್ತದೆ. ಸಾಮರ್ಥ್ಯಸಹಿತವಾದ ಶರೀರವು ಶಾಸ್ತ್ರ ಅಧ್ಯಯನ, ಧ್ಯಾನ ಧಾರಣೆ ಮೊದಲಾದ ಕ್ರಿಯೆಗಳಿಗೆ ಸಹಾಯಕವಾಗುತ್ತದೆ. ಶರೀರದ ಅನೇಕ ರೋಗಗಳು ದೂರವಾಗುತ್ತವೆ. ಆದುದರಿಂದ ಅನ್ನದಾನದಿಂದ ಔಷಧ ದಾನದ ಪುಣ್ಯವೂ ಲಭಿಸುತ್ತದೆ. ಹೀಗಾಗಿ ಒಂದು ಆಹಾರದಾನ

ದಿಂದ ನಾಲ್ಕು ಪ್ರಕಾರದ ದಾನಗಳ ಪುಣ್ಯವು ಲಭಿಸುತ್ತದೆ. ಮತ್ತು ಅದು ನಿಜವಾಗಿದೆ, ಯಾಕಂದರೆ ಎಲ್ಲಾ ದಾನಗಳಲ್ಲಿಯೂ ಈ ಅನ್ನದಾನ ವನ್ನು ಶ್ರೇಷ್ಟವೆಂದು ಹೇಳಲಾಗಿದೆ. ಅನ್ನ ದಾನದಿಂದ ಶ್ರೇಯಾಂಸ ರಾಜನು ಪ್ರಸಿದ್ಧನಾಗಿದ್ದಾನೆ. ಹೀಗೆ ಅನ್ನ ದಾನವು ಭಾಗ್ಯವಿಲ್ಲದೆ ಸಿಗಲಾರದು.

**ಆಹಾರದಾನ ದೇತಾ ಪ್ರಿಯಹೋ ಶ್ರೀಷೇಣ ಕೀರ್ತಿಲಲನೇಸ**
**ಕೇಲೇ ಔಷಧ ದಾನೇ ಭೂವರವಿಖ್ಯಾತ ವೃಷಭಸೇನೇಸ**

ಒಂದು ಸಾರಿ ಒಬ್ಬ ಮುನೀಶ್ವರರ ಸಂಘವು ಊರಿಗೆ ಬಂದಾಗ ಅನೇಕ ದೊಡ್ಡ ದೊಡ್ಡ ಶ್ರೀಮಂತರು ಅವರಿಗೆ ಭಕ್ತಿಯಿಂದ ಆಹಾರ ದಾನವನ್ನು ಕೊಡಲು ಹಾದಿ ನೋಡುತ್ತಿದ್ದರು. ಅದೇ ಊರಿನಲ್ಲಿ ಒಬ್ಬ ಕಡು ಲೋಭಿಯಾದ ಸಾಹುಕಾರನಿದ್ದನು. ಅವನ ಮನೆಯ ಬಾಗಿಲಿನ ಮುಂದೆ ಮುನಿಗಳು ಬಂದ ಕೂಡಲೇ ಅವನು ಬಾಗಿಲನ್ನು ಮುಚ್ಚಿ ಬಿಟ್ಟನು. ಮತ್ತು ಮನೆಯೊಳಗೆ ಹೋಗಿ ಕೂತು ಬಿಟ್ಟನು. ಯಾಕಂದರೆ ಮುನಿಗಳು ನನ್ನ ಮನೆಯ ಕಡೆ ಬರುತ್ತಿದ್ದಾರೆ. ಅವರಿಗೆ ಏನಾದರೂ ಕೊಡಬೇಕಾದೀತು, ಆದುದರಿಂದ ಬಾಗಿಲು ಮುಚ್ಚಿ ಬಿಟ್ಟರೆ ಯಾವ ರಗಳೆಯೂ ಇಲ್ಲವೆಂದು ವಿಚಾರ ಮಾಡಿ ಹಾಗೆ ಮಾಡಿದನು. ಆದರೆ ಅವನ ಪತ್ನಿಯು ಮಾತ್ರ ಧರ್ಮಾತ್ಮಳಾಗಿದ್ದು ದಾನ ಕಾರ್ಯದಲ್ಲಿ ಉತ್ಸಾಹಿತಳಾಗಿದ್ದಳು. ಈ ವಿಷಯವನ್ನು ಅವಳು ನೋಡಿ ಬಹಳ ಕಾತರ ದಿಂದ ತನ್ನ ಪತಿಗೆ ಹೇಳುತ್ತಾಳೆ. ತನ್ನ ಮನೆಯ ಎದುರಿನಲ್ಲಿ ಬಂದ ಪುಣ್ಯಪಾತ್ರವನ್ನು ಕಳೆದುಕೊಂಡಿರಿ. ಇದು ಬಹಳ ದೊಡ್ಡ ಅನ್ಯಾಯ ವಾಯಿತು. ಎಂದು ಹೇಳಿ ಕಣ್ಣೀರು ಸುರಿಸಿದಳು. ಆದರೂ ಅವನ ಮೇಲೆ ಏನೂ ಪರಿಣಾಮವಾಗದೆ ಅವನು ಒಬ್ಬನೇ ಊಟಕ್ಕೆ ಕುಳಿತನು. ಊಟ ವನ್ನು ಬಡಿಸಿಕೊಂಡು ಊಟ ಪ್ರಾರಂಭ ಮಾಡುವದರಲ್ಲಿದ್ದ. ಇಷ್ಟರಲ್ಲಿಯೇ ಅವನ ಕೈಗಳು ಕೀಲಿಸಿದಂತಾದವು. ಆಗ ಅವನು ನಿರುಪಾಯನಾಗಿ

ವಿಚಾರ ಮಾಡುತ್ತಾನೆ. ಈ ಮುನಿಗಳು ಬಹಳ ಸಿಟ್ಟಿನವರೆಂದು ಕಾಣು ತ್ತಾರೆ. ಆದುದರಿಂದಲೇ ಸಿಟ್ಟಿನಿಂದ ನನ್ನ ಕೈಗಳನ್ನು ಕಟ್ಟಹಾಕಿದ್ದಾರೆ. ಆಗ ಹೆಂಡತಿಯು ಹೇಳುತ್ತಾಳೆ. ಪತಿದೇವ ! ಇದು ಮುನಿಗಳ ಸಿಟ್ಟಿನ ಫಲವಲ್ಲ. ನೀವು ಮಾಡಿದ ಅನ್ಯಾಯದ ಫಲವಾಗಿದೆ. ನಿಮ್ಮ ಅನ್ಯಾಯದ ವೃತ್ತಿಯನ್ನು ನೋಡಿ ಯಾರಾದರೂ ದೇವತೆಗಳು ನಿಮ್ಮ ಕೈಗಳನ್ನು ಕಟ್ಟ ಹಾಕಿರಬಹುದು. ಇದನ್ನು ಕೇಳಿ ಅವನು ಗಾಬರಿಯಾದನು. ಮತ್ತು ಹೇಳುತ್ತಾನೆ ಈ ನನ್ನ ಅಪರಾಧಕ್ಕೋಸ್ಕರವಾಗಿ ನಾನು ಮುನಿಗಳ ಹತ್ತಿರ ಹೋಗಿ ಕ್ಷಮೆಯನ್ನು ಬೇಡುತ್ತೇನೆ. ಮತ್ತು ಆದ್ದರಿಂದ ಅವನಿಗೆ ಕಾಲಲಬ್ಧಿಯಾಗಿ ಉಪಶಮ ಪರಿಣಾಮವಾಯಿತು, ಅವನು ಕೂಡಲೇ ಮುನಿಗಳ ಹತ್ತಿರ ಹೋಗಿ ಕ್ಷಮೆಯನ್ನು ಬೇಡಿದನು. ಮತ್ತು ಪ್ರತಿದಿವಸ ಆಹಾರ ಮೊದಲಾದ ನಾಲ್ಕು ಪ್ರಕಾರದ ದಾನವನ್ನು ಮಾಡುವೆನೆಂಬ ಪ್ರತಿಜ್ಞೆಯನ್ನು ಮಾಡಿದನು, ಮತ್ತು ತನ್ನ ಪ್ರತಿಜ್ಞೆಯಂತೆ ನಡೆಯಲು ನಿಶ್ಚಯಿಸಿದನು.

ನೋಡಿರಿ, ಯಾವನಾದರೊಬ್ಬ ಜೀವನ ಕರ್ಮ ಉಪಶಮವಾದರೆ ಎಷ್ಟು ಅನ್ಯಾಯಮಾರ್ಗಿಯಾಗಿದ್ದರೂ ಅವನು ಅದನ್ನು ಬಿಟ್ಟ ಕೂಡಲೇ ಸನ್ಮಾರ್ಗಗಾಮಿಯಾಗುತ್ತಾನೆ. ಈ ಪ್ರಕಾರ ಅವನು ಪ್ರತಿ ದಿನವೂ ನಾಲ್ಕು ಪ್ರಕಾರವಾದ ದಾನಗಳನ್ನು ಕೊಡುತ್ತಾ ಪುಣ್ಯ ಸಂಚಯವನ್ನು ಮಾಡಿಕೊಳ್ಳುತ್ತಿದ್ದನು. ಮತ್ತು ಆ ಪುಣ್ಯದ ಪ್ರಭಾವದಿಂದ ಮುಂದೆ ಚಿರಕಾಲ ಸುಖವನ್ನು ಅನುಭವಿಸಿದನು.

ಸುಪಾತ್ರದಾನಾಚ್ಚ ಭವೇದ್ಧನಾಢ್ಯೋ
ಧನಪ್ರಭಾವೇಣ ಕರೋತಿ ಪುಣ್ಯಂ
ಪುಣ್ಯಪ್ರಭಾವಾತ್ ಸುರಲೋಕವಾಸೀ
ಪುನರ್ಧನಾಢ್ಯಃ ಪುನರೇವ ಭೋಗೀ

ಸುಭಾಷಿತಾವಲಿ.

ಸುಪಾತ್ರ ದಾನದ ಮಹಿಮೆಯಿಂದ ಜನರು ದೊಡ್ಡ ಶ್ರೀಮಂತ ರಾಗುತ್ತಾರೆ. ಆ ಧನದ ಪ್ರಾಪ್ತಿಯಿಂದ ಅವರು ಪುನಃ ಪುಣ್ಯವನ್ನು ಗಳಿಸುತ್ತಾರೆ. ಆ ಪುಣ್ಯದ ಪ್ರಭಾವದಿಂದ ಅನೇಕ ಪ್ರಕಾರವಾದ ದೇವ ವೈಭವ ಮತ್ತು ರಾಜವೈಭವಗಳನ್ನು ಅನುಭವಿಸುತ್ತಾರೆ. ಅದರಿಂದ ಪುನಃ ಸಮ್ಯಕ್ತ್ವಪೂರ್ವಕವಾದ ಪುಣ್ಯವನ್ನು ಗಳಿಸುತ್ತಾರೆ. ಆ ಪುಣ್ಯದ ಫಲ ದಿಂದ ಸುಖವನ್ನು ಅನುಭವಿಸುತ್ತಾರೆ. ಹೀಗೆ ಆ ಪತಿಪತ್ನಿಗಳೂ ಸುಪಾತ್ರ ದಾನದ ಫಲದಿಂದ ದೇವತೆಗಳಿಂದಲೂ ಹೆಚ್ಚಾದ ಸುಖವನ್ನು ಅನುಭವಿ ಸಿದರು. ಆದುದರಿಂದ ಭವ್ಯರೇ! ನೀವು ಲೋಭವನ್ನು ಬಿಟ್ಟು ಸಂಪತ್ತಿಯ ತ್ಯಾಗವನ್ನು ಮಾಡಿ ಪುಣ್ಯಾರ್ಜನೆಯನ್ನು ಮಾಡಿರಿ. ಯಾಕಂದರೆ ಆ ಪುಣ್ಯದಿಂದ ಸುಖ ಸಂಪತ್ತಿ ವೈಭವಗಳು ಅನುಭವಿಸಲು ದೊರೆಯುತ್ತವೆ. ಇದು ಆಚಾರ್ಯರ ವಚನವಾಗಿದೆ. ಆದುದರಿಂದ ಜೀವಾತ್ಮರೇ! ನಿಮಗೆ ಮುಂದಿನ ಸುಖದ ಇಚ್ಛೆ ಇದ್ದರೆ ನಿಮ್ಮ ಧನದ ವಿನಿಯೋಗವನ್ನು ಬಡ ಬಗ್ಗರ ಅನ್ನವಸ್ತ್ರಗಳಿಗೋಸ್ಕರ ಮತ್ತು ಅವರ ಉಪಕಾರಕ್ಕೋಸ್ಕರವಾಗಿ ಮಾಡಿರಿ. ಅದರಿಂದ ಧರ್ಮದ ಪ್ರಭಾವನೆಯಾಗುವುದು. ಮತ್ತು ನಿಮಗೆ ದೊಡ್ಡ ಪುಣ್ಯಲಾಭವಾಗಬಹುದು. ಇದನ್ನು ತಿಳಿದು ನೀವು ನಿಮ್ಮ ಸಂಪ ತ್ತಿಯ ಉಪಯೋಗ ಜಿನಮಂದಿರದ ನಿರ್ಮಾಣ ಕಾರ್ಯದಲ್ಲಿ ಮಾಡಿರಿ. ಹಾಗೆಯೇ ಸಿದ್ಧಾಂತ ಗ್ರಂಥಗಳನ್ನು ಮುದ್ರಿಸಿ ಕರ್ಮನಾಶಕ್ಕೋಸ್ಕರ ಶಾಸ್ತ್ರದಾನ ಮಾಡಿರಿ. ಹಾಗೆಯೇ ದುಃಖಿ, ದೀನ, ರೋಗೀ, ದರಿದ್ರೀ ಜೀವಗಳ ಮೇಲೆ ಉಪಕಾರ ಮಾಡುವುದಕ್ಕೋಸ್ಕರವಾಗಿ ತಮ್ಮ ತನು, ಮನ ಧನವನ್ನು ಕರುಣಾ ಬುದ್ಧಿಯಿಂದ ಉಪಯೋಗಿಸಿರಿ. ಅಂದರೆ ನಿಮ್ಮ ಜೀವನ ಸಫಲವಾಗಬಹುದು. ದಾನವು ಧರ್ಮದ ಅಂಗವಾಗಿದೆ. ತಮ್ಮ ಶಕ್ತಿ ಭಕ್ತಿಯಂತೆ ಸದ್ಗುಣಶಾಲಿಯಾದ ಉತ್ತಮ ಪಾತ್ರಕ್ಕೆ ದಾನವನ್ನು ಕೊಡುವುದು ಅಂದರೆ ಪರಲೋಕಕ್ಕೆ ಹೋಗುವಾಗ ಸುಖ ಸಾಮಗ್ರಿಯನ್ನು ತನ್ನೊಡನೆ ತೆಗೆದುಕೊಂಡು ಹೋಗುವ ಹಾಗಿದೆ. ಅದು ನಿಮಗೆ ನಿಶ್ಚಯ ವಾಗಿಯೂ ಸ್ವರ್ಗ ಮತ್ತು ಭೋಗಭೂಮಿಯನ್ನು ಮುಟ್ಟಿಸುತ್ತದೆ.

ದಾನದ ಮಹಿಮೆಯನ್ನು ಬಾಲಗೋಪಾಲರು ವರ್ಣಿಸುತ್ತಾರೆ. ಯಾರು ಹಿಂದೆ ದಾನವನ್ನು ಕೊಟ್ಟಿದ್ದಾರೋ ಅವರಿಗೆ ಅನೇಕ ಪ್ರಕಾರದ ಸುಖ ಸಾಮಗ್ರಿಗಳು ಇಂದು ಪ್ರಾಪ್ತವಾದವು. ಯಾರು ಕೊಡುವರೋ ಅವರು ಪಡೆಯುವರು. ಆದುದರಿಂದ ನಿಮಗೆ ಸುಖ ಸಂಪತ್ತಿಗಳ ಇಚ್ಛೆ ಇದ್ದರೆ ನೀವು ದಾನ ಕಾರ್ಯದಲ್ಲಿ ಅನುರಾಗವನ್ನಿಡಿರಿ. ಯಾರು ದಾನ ಕಾರ್ಯದಲ್ಲಿ ಉತ್ಸಾಹಶೀಲರಾಗಿಲ್ಲವೋ ಮತ್ತು ಸಾಯುವವರೆಗೆ ಧನ ಸಂಚಯವನ್ನು ಮಾಡುತ್ತಲೇ ಇರುತ್ತಾರೆಯೋ ಅವರು ಇಲ್ಲಿ ಆರ್ತಧ್ಯಾನದಲ್ಲಿ ಜನ್ಮ ಕಳೆಯುತ್ತಾರೆ. ಅಂಥಹ ಜೀವರ ಇಹ ಮತ್ತು ಪರ ಎರಡರಲ್ಲಿಯೂ ಘಾತವಾಗುತ್ತದೆ.

ಒಂದು ಕಡೆಯಲ್ಲಿ ಹೀಗೆ ಹೇಳಿದ್ದಾರೆ. ಒಬ್ಬ ದೊಡ್ಡ ಶ್ರೀಮಂತನಾದ ರಾಜನಿದ್ದನು. ಅವನು ಸಾಯುವಾಗ ಧನದ ಲೋಭದಿಂದ ಅದರ ಆಶೆಯಲ್ಲಿಯೇ ಮರಣ ಹೊಂದಿದನು, ಮತ್ತು ಅವನು ಅವನ ಸಂಪತ್ತಿಯ ಖಜಾನೆಯಲ್ಲಿಯೇ ಸರ್ಪನಾಗಿ ಹುಟ್ಟಿದನು. ಯಾರಾದರೂ ಆ ಖಜಾನೆಗೆ ಹೋದರೆ ಆ ಸರ್ಪವು ಭುಸುಗುಟ್ಟುತ್ತಾ ಅವರ ಕಡೆಗೆ ಧಾವಿಸುತ್ತಿತ್ತು. ನೋಡಿ ಕರ್ಮದ ಉದಯವು ಹೇಗಿದೆ? ಹೀಗೆ ಈ ಜೀವನು ಕ್ರೋಧ ಮಾನ ಮಾಯಾ ಲೋಭಗಳ ಕಾರಣದಿಂದ ಅನೇಕ ಪ್ರಕಾರ ದುಃಖಗಳನ್ನು ಅನುಭವಿಸುತ್ತಾನೆ.

ಮರಣ ಸಮಯದಲ್ಲಿ ಯಾರ ಪರಿಣತಿಯು ಯಾವ ಪ್ರಕಾರವಾಗುತ್ತದೆಯೋ ಆ ಪ್ರಕಾರ ಅವರ ಮುಂದಿನ ಗತಿಯಾಗುತ್ತದೆ. ಈ ವಿಷಯದಲ್ಲಿ ಗ್ರಂಥಕಾರರು ಹೀಗೆ ಹೇಳುತ್ತಾರೆ.

ಕ್ರೋಧಾದ್ ವ್ಯಾಘ್ರೋ ಭವತಿ ಮನುಜೋ ಮಾನತೋ ರಾಸಭಃ ಸ್ಯಾತ್ । ಮಾಯಾಯಾಃ ಸ್ತ್ರೀ ಧನಸುಖರಹಿತೋ ಲೋಭತಃ ಸರ್ಪಯೋನಿಃ ॥ ಕಾಮಾತ್ ಪಾರಾವತಗತಿರತೋ ದತ್ತ ಸಂಬಂಧ ಭಾವಾದ್ । ಮೋಹಾನ್ಮೋಹೀ ಭವತಿ ಮನುಜಃ ಸ್ತ್ರೀಸುತಾ ಬಾಂಧವೇಷು ॥

ಪ್ರಶ್ನೋತ್ತರ ಮಾಣಿಕ್ಯಮಾಲಾ.

ಸಾಯುವ ಸಮಯದಲ್ಲಿ ಯಾರಿಗೆ ಕ್ರೋಧದ ಉದಯವಿರುತ್ತದೆಯೋ ಅವನು ಸತ್ತು ಹುಲಿಯಾಗಿ ಹುಟ್ಟುತ್ತಾನೆ. ಮಾನದ ಉದಯದಿಂದ ಸತ್ತೆಯಾಗಿ ಹುಟ್ಟುತ್ತಾನೆ. ಮಾಯಾಚಾರದ ಉದಯದಿಂದ ಸ್ತ್ರೀ, ಧನ ಕುಟುಂಬ ಮೊದಲಾದವರಿಂದ ರಹಿತನಾಗಿ ಹುಟ್ಟುತ್ತಾನೆ. ಲೋಭದ ಉದಯದಿಂದ ಸರ್ಪ ಯೋನಿಯಲ್ಲಿ ಹುಟ್ಟುತ್ತಾನೆ. ಹಾಗೆಯೇ ಸಾಯುವ ಸಮಯದಲ್ಲಿ ಯಾವ ಜೀವನಿಗೆ ಮೋಹದ ಉದಯವಿರುತ್ತದೆಯೋ ಅವನು ಮುಂದಿನ ಜನ್ಮದಲ್ಲಿ ಪಾರಿವಾಳ ಮೊದಲಾದ ಪಕ್ಷಿಗಳ ಯೋನಿಯಲ್ಲಿ ಜನ್ಮವೆತ್ತುತ್ತಾನೆ.

ಈ ಪ್ರಕಾರ ಈ ಜೀವನು ತನ್ನ ಕರ್ಮದ ಫಲವನ್ನು ಮೋಹದ ಕಾರಣದಿಂದ ಅನುಭವಿಸುತ್ತಾನೆ. ಅನುಭವಿಸುತ್ತಾ ಬಂದಿದ್ದಾನೆ. ನೋಡಿ, ಅವನು ರಾಜನಾಗಿದ್ದರೂ ಮೋಹಲೋಭದ ಕಾರಣದಿಂದ ತಿರ್ಯಂಚ ಯೋನಿಯಲ್ಲಿ ಸರ್ಪನಾಗಿ ಹುಟ್ಟಿ ಹತ್ತು ಸಾವಿರ ವರ್ಷಗಳ ವರೆಗೆ ಆಯುಷ್ಯವನ್ನು ಪಡೆದನು.

ಆ ರಾಜನ ಅರಮನೆಯಲ್ಲಿ ಒಂದು ಸಾರಿ ಅವಧಿಜ್ಞಾನ ಧಾರಕರಾದ ಮುನಿಗಳು ಬಂದರು. ಅವರ ಆಹಾರವಾದ ನಂತರ ಆ ಪುಣ್ಯ ಪ್ರಭಾವದಿಂದ ಅಲ್ಲಿ ಪಂಚಾಶ್ಚರ್ಯ ವೃಷ್ಟಿಯಾಯಿತು. ಮತ್ತು ದೇವದುಂದುಭಿ ಧ್ವನಿಯಾಯಿತು. ಇದನ್ನು ಕೇಳಿ ಆ ಸರ್ಪವು ಖಜಾನೆಯಿಂದ ಹೊರಗೆ ಬಂತು. ಮತ್ತು ತನ್ನ ಫಣೆಯನ್ನು ಮುನೀಶ್ವರರ ಚರಣಗಳಲ್ಲಿ ಇಟ್ಟು ನಮಸ್ಕಾರ ಮಾಡಿತು. ಅದನ್ನು ನೋಡಿ ರಾಜನ ಮಗನು ಕೇಳುತ್ತಿದ್ದಾನೆ. ಸ್ವಾಮಿನ್, ಈ ಸರ್ಪವು ನಮ್ಮ ಖಜಾನೆಯಲ್ಲಿ ಯಾವಾಗಲೂ ಇರುತ್ತದೆ ನಾನು ಹೋದರೆ ಮಾತ್ರ ಶಾಂತ ಭಾವದಿಂದ ಏನೂ ಮಾಡದೆ ಬಿದ್ದಿರುತ್ತದೆ. ಬೇರೆಯವರು ಹೋದರೆ ಅವರ ಮೇಲೆ ಸಿಟ್ಟಿನಿಂದ ಓಡಿ ಬರುತ್ತದೆ. ಇದರ ಕಾರಣವೇನು ? ಹೇಳೋಣಾಗಲಿ. ಆಗ ಮುನಿಗಳು ವತ್ಸ ! ಈ ಸರ್ಪವು ನಿನ್ನ ತಂದೆಯ ಜೀವವಾಗಿದೆ. ಧನಲೋಭದಿಂದ ಸರ್ಪನಾಗಿ

ಹುಟ್ಟಿ ಇಲ್ಲಿದ್ದಾನೆ. ಇದನ್ನು ಕೇಳಿದ ಕೂಡಲೇ ಆ ಸರ್ಪಕ್ಕೆ ಜಾತಿಸ್ಮರಣೆ ಯಾಯಿತು. ಮತ್ತು ಉಪಶಮ ಭಾವದಿಂದ ಮುನಿಗಳ ಚರಣಕ್ಕೆ ವಾರಂ ವಾರ ನಮಸ್ಕಾರ ಮಾಡತೊಡಗಿತು. ಇದನ್ನು ಮುನಿಗಳು ತಿಳಿದು ಅದಕ್ಕೆ ಪಂಚ ಪಾಪಗಳನ್ನು ಬಿಡುವ ಉಪದೇಶವನ್ನು ಕೊಟ್ಟರು. ಅನಂತರ ಮುನಿಗಳ ಉಪದೇಶವನ್ನು ಕೇಳಿ ಪಂಚಪಾಪಗಳನ್ನು ಆ ಸರ್ಪವು ಬಿಟ್ಟಿತು ಆಗ ಅದರ ಆಯುಷ್ಯವು ಎಂಟು ದಿವಸದ್ದು ಮಾತ್ರ ಉಳಿದಿತ್ತು. ಆಗ ಸಕಲ ಸಲ್ಲೇಖನಾ ಪೂರ್ವಕ ಸಮಾಧಿ ಮರಣದಿಂದ ತನ್ನ ದೇಹ ತ್ಯಾಗ ಮಾಡಿತು. ಅಂತರ್ಮುಹೂರ್ತದಲ್ಲಿ ಸ್ವರ್ಗದಲ್ಲಿ ಜನ್ಮವನ್ನು ಪಡೆ ಯಿತು. ಅಲ್ಲಿ ದಿವ್ಯವಾದ ವಿಮಾನದಲ್ಲಿ ಮಹರ್ಧಿಕ ದೇವನಾಗಿ ಹುಟ್ಟಿತು ಈ ಪ್ರಕಾರವಾಗಿ ಯಾರು ಪಂಚ ಪಾಪಗಳನ್ನು ತ್ಯಾಗ ಮಾಡುತ್ತಾ ರೆಯೋ ಅವರು ಸ್ವರ್ಗೀಯ ವೈಭವವನ್ನು ಪಡೆಯುತ್ತಾರೆ.

**ಸ್ವರ್ಗೇಸುರಾಪ್ಸರಾಂಚ್ಯಾ ರಮ್ಯಪರಿಷದೀ ಸದ್ಯೈವ ತೋ ರಮತೋ**
**ಲಾಭತಿ ಋದ್ಧಿ ಸಕಲತ್ಯಾ ಶೋಭಾ ಸಂಪನ್ನಹೀ ತಸಾ ಬನತೋ**

ರತ್ನಕರಂಡ.

ಆ ಸರ್ಪವು ಸ್ವರ್ಗದಲ್ಲಿ ದೇವನಾಗಿ ಹುಟ್ಟಿತು. ಅಂತರ್ಮುಹೂ ರ್ತದಲ್ಲಿ ಆ ದೇವನಿಗೆ ಅವಧಿಜ್ಞಾನದ ಉದಯವಾಯಿತು. ಅವಧಿಜ್ಞಾ ನದ ಬಲದಿಂದ ತನ್ನ ಪೂರ್ವಭವದ ವೃತ್ತಾಂತವನ್ನು ತಿಳಿದು ಆ ಮುನಿ ಗಳ ಸಮೀಪಕ್ಕೆ ಬಂದನು. ಮತ್ತು ಅವರ ಸ್ತುತಿ ಸ್ತೋತ್ರಗಳನ್ನು ಮಾಡಿ ಪೂಜಿಸಿದನು. ನಂತರ ಅಲ್ಲಿಂದ ತನ್ನ ಅರಮನೆಯ ಕಡೆ ಹೋದನು. ತನ್ನ ಮಗನಿಗೆ ಪ್ರೀತಿಯಿಂದ ಭೆಟ್ಟಿಯಾಗಿ ಹೇಳಿದನು. ನೀನು ನನ್ನ ಗತಿಯನ್ನು ಸುಧಾರಿಸಿ ಆತ್ಮಕಲ್ಯಾಣವನ್ನು ಮಾಡಿದಿ ನಿನ್ನ ಕಾರಣದಿಂದ ನನಗೆ ಈ ಸ್ವರ್ಗೀಯ ವೈಭವವು ಪ್ರಾಪ್ತಿಯಾಯಿತು. ಬರುವಾಗ ಸ್ವರ್ಗದ ಸ್ಮರಣೆಗಾಗಿ ಅನರ್ಘ್ಯವಾದ ರತ್ನಹಾರವನ್ನು ತಂದಿದ್ದನು. ಇದನ್ನೆಲ್ಲಾ ನೋಡಿ ಆ ರಾಜ್ಯದ ಎಲ್ಲ ಪ್ರಜೆಗಳಿಗೂ ಧರ್ಮದ ಮಹಿಮೆಯ ವಿಷಯ

ವಲ್ಲಿ ಆದರ ಹುಟ್ಟಿತು, ಮತ್ತು ಎಲ್ಲರಿಗೂ ಧರ್ಮದ ಮೇಲೆ ಶ್ರದ್ಧೆಯಾ ಯಿತು. ಆದರಿಂದ ಅನೇಕರು ತಮ್ಮ ಮನಸ್ಸಿನ ಲೋಭಾದಿ ವಿಕಾರಗಳನ್ನು ಬಿಟ್ಟು ಉತ್ತಮ ಭಾವನೆಗಳನ್ನು ಧರಿಸಿದರು.

ಆದುದರಿಂದ ಭವ್ಯರೇ ! ನೀವು ನಿಮ್ಮ ಕಲ್ಯಾಣಕ್ಕೋಸ್ಕರವಾಗಿ ತ್ಯಾಗ ಧರ್ಮದ ಈ ಉದಾಹರಣೆಯನ್ನು ಮನಸ್ಸಿನಲ್ಲಿ ಧರಿಸಿ ನಿಮ್ಮ ಅಂತಃಕರಣವನ್ನು ಪವಿತ್ರ ಮಾಡಿಕೊಳ್ಳಿರಿ. ಮತ್ತು ನಿಮ್ಮ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳಿರಿ, ಇದು ಜೈನಾಚಾರ್ಯರ ವಚನವಾಗಿದೆ

ಭವ್ಯರೇ ! ಎಲ್ಲಾ ದಾನಗಳಲ್ಲಿ ಅನ್ನದಾನವು ಶ್ರೇಷ್ಠವಾಗಿದೆ. ಹಿಂದೊಂದು ದಾನವೂ ಉತ್ತಮವಾಗಿವೆ.

ಅನ್ನದಾನಾತ್ಪರಂ ದಾನಂ ವಿದ್ಯಾದಾನಂ ತತಃ ಪರಂ
ಅನ್ನೇನ ಕ್ಷಣಿಕಾತೃಪ್ತಿ ರ್ಯಾವಜ್ಜೀವಂ ಚ ವಿದ್ಯಯಾ

ಸುಭಾಷಿತರತ್ನಾವಲಿ.

ಅನ್ನದಾನವನ್ನು ಮಾಡುವುದು ಶ್ರೇಷ್ಟವಾಗದೆ. ಆದರಿಂದಲೂ ವಿದ್ಯಾದಾನವು ಅಧಿಕ ಶ್ರೇಷ್ಠವಾಗಿದೆ. ಅನ್ನದಾನದಿಂದ ಸ್ವಲ್ಪ ಸಮಯದ ವರೆಗೆ ತೃಪ್ತಿಯಾಗುತ್ತದೆ. ನಂತರ ಪುನಃ ಹಸಿವಾಗುವುದರಿಂದ ಆಕುಲತೆ ಯಾಗುತ್ತದೆ. ಆದರೆ ವಿದ್ಯಾದಾನದಿಂದ ಈ ಭವದಲ್ಲಿಯೂ ಸುಖವಾಗುತ್ತದೆ. ಪರಭವದಲ್ಲಿಯೂ ಸುಖವಾಗುತ್ತದೆ. ಪರಭವದಲ್ಲಿಯೂ ಅದು ಈ ಆತ್ಮನೊಡನೆ ಹೋಗುತ್ತದೆ. ಆದುದರಿಂದ ನಿಮ್ಮ ವಿದ್ಯೆಯನ್ನು ಅಜ್ಞಾನಿ ಬಾಲಬುದ್ಧಿಯವರಿಗೆ ಕಲಿಸುವುದರಲ್ಲಿ ಉಪಯೋಗಿಸಿರಿ. ಹಾಗೆಯೆ ಗರ್ವರಹಿತರಾಗಿ ಎಲ್ಲರಿಗೂ ಉಪದೇಶ ಹೇಳಿ ದುರ್ಮಾರ್ಗದಿಂದ ಬಿಡಿಸಿ ಸನ್ಮಾರ್ಗದಲ್ಲಿ ಪ್ರವೃತ್ತ ಮಾಡುವ ಹಾಗೆ ಮಾಡಿರಿ. ಸಜ್ಜನರು ಯಾವಾಗಲೂ ತಮ್ಮ ವಿದ್ಯೆಯ ಉಪಯೋಗವನ್ನು ಪರೋಪಕಾರಕ್ಕೋಸ್ಕರವಾಗಿ ಮಾಡುತ್ತಾರೆ.

ವಿದ್ಯಾ ವಿವಾದಾಯ ಧನಂ ಮದಾಯ
ಶಕ್ತಿಃ ಪರೇಷಾಂ ಪರಿಪೀಡನಾಯ
ಖಲಸ್ಯ ಸಾಧೋ ವಿಪರೀತಮೇತದ್
ಜ್ಞಾನಾಯ ದಾನಾಯ ಚ ರಕ್ಷಣಾಯ

ಸುಭಾಷಿತಾವಲಿ.

ಸಜ್ಜನರು ತನ್ನ ವಿದ್ಯೆಯನ್ನು ಮತ್ತೊಬ್ಬರಿಗೆ ಜ್ಞಾನಿಗಳನ್ನಾಗಿ ಮಾಡಲು ಉಪಯೋಗಿಸುತ್ತಾರೆ. ಧನವನ್ನು ದಾನಕ್ಕೋಸ್ಕರವಾಗಿ ವಿನಿಯೋಗಿಸುತ್ತಾರೆ. ಶಕ್ತಿಯನ್ನು ಬೇರೆಯವರನ್ನು ರಕ್ಷಿಸುವುದಕ್ಕೋಸ್ಕರವಾಗಿ ಉಪಯೋಗಿಸುತ್ತಾರೆ, ಆದರೆ ದುಷ್ಟರು ವಿದ್ಯೆಯನ್ನು ವ್ಯರ್ಥವಾದ ವಿತಂಡವಾದಕ್ಕೋಸ್ಕರವಾಗಿಯೂ, ಸಂಪತ್ತನ್ನು ಮದಕ್ಕೋಸ್ಕರವಾಗಿ ಮತ್ತು ಶಕ್ತಿಯನ್ನು ಬೇರೆಯವರಿಗೆ ಪೀಡಿಸುವುದಕ್ಕೊರವಾಗಿ ಉಪಯೋಗಿಸುತ್ತಾರೆ. ಹೀಗೆ ದುಷ್ಟರ ಮತ್ತು ಶಿಷ್ಟರ ವೃತ್ತಿಯಲ್ಲಿ ಇಷ್ಟು ಭೇದವಿದೆ. ಆದುದರಿಂದ ನೀವು ಸಜ್ಜನರಾಗಿದ್ದು ವಿದ್ವಾಂಸರಾಗಿದ್ದೀರಿ. ನಿಮ್ಮ ಜ್ಞಾನದ ಉಪಯೋಗವನ್ನು ಶಾಸ್ತ್ರದಾನ ಮತ್ತು ಪರಂಪರೆಯಿಂದ ಜ್ಞಾನದಾನವನ್ನು ಮಾಡುವುದರಲ್ಲಿ ಮಾಡಿರಿ. ಹಾಗೆಯೇ ಇದಕ್ಕೋಸ್ಕರವಾಗಿ ಪಾಠಶಾಲೆಯನ್ನು ತೆಗೆಯಿರಿ. ಶಾಸ್ತ್ರಗಳನ್ನು ಬರೆಯಿಸಲು ನಿಮ್ಮ ಧನವನ್ನು ಉಪಯೋಗಿಸಿರಿ. ಶಾಸ್ತ್ರದಾನದಿಂದ ಈ ಭವದಲ್ಲಿ ನಿಮ್ಮ ಕೀರ್ತಿಯು ಬೆಳೆದು ಪರಲೋಕದಲ್ಲಿ ಜ್ಞಾನಾವರಣೀಯ ಕರ್ಮದ ಉಪಶಮವಾಗಿ ನಿಮ್ಮ ಜ್ಞಾನದಲ್ಲಿ ಅಭಿವೃದ್ಧಿಯಾಗುವುದು

ನೋಡಿ, ಒಂದು ಸಾರಿ ಕೌಂಡೇಶನೆಂಬವನು ಮುನಿಗಳಿಗೆ ಶಾಸ್ತ್ರದಾನವನ್ನು ಮಾಡಿದನು. ಅದರ ಪುಣ್ಯದಿಂದ ಅವನು ಮುಂದಿನ ಭವದಲ್ಲಿ ಶ್ರುತಕೇವಲಿಯಾದನು. ಹೀಗೆ ಹೇಳಿದ್ದಾರೆ.

ಕೌಂಡೇಶೋ ಜ್ಞಾನದಾನೇ ಸಾಹಾರಿಣ್ಯೈವ ಯಶೋಮತಿಃ ।
ಔಷಧ್ಯೈರ್ವಜ್ರದಂತಾಖ್ಯೋ ದಯಾದಾನೇನ ಭೂದರಃ ॥

ರತ್ನಕರಂಡ.

ಕೌಂಡೇಶನು ಜ್ಞಾನದಾನದಲ್ಲಿ ಪ್ರಸಿದ್ಧನಾಗಿ ಶ್ರುತ ಕೇವಲಿಯಾದನು. ಯಶೋಮತಿ ಎಂಬ ಶ್ರಾವಿಕೆಯು ಆಹಾರದಾನದಲ್ಲಿ ಪ್ರಸಿದ್ಧಳಾಗಿದ್ದಾಳೆ. ಅದರ ಪ್ರಭಾವದಿಂದ ಅವಳ ದರಿದ್ರತೆಯು ದೂರವಾಗಿ ಧನ ವೈಭವದಿಂದ ಸಂಪನ್ನಳಾದಳು. ಔಷಧದಾನದಲ್ಲಿ ವಜ್ರದಂತನೆಂಬ ವೈದ್ಯನೂ ಹಾಗೆಯೇ ದಯಾದಾನದಲ್ಲಿ ಭೂದರನೂ ಪ್ರಸಿದ್ಧನಾಗಿ ರಾಜಮಾನ್ಯನಾಗಿದ್ದಾನೆ. ಮತ್ತು ಕೀರ್ತಿಶಾಲಿಯಾಗಿದ್ದಾನೆ. ಆದುದರಿಂದ ಭವ್ಯರೇ! ನೀವೂ ಸಂಪತ್ತಿಯ ಉಪಯೋಗವನ್ನು ದಾನದಲ್ಲಿ ಮಾಡಿರಿ. ಯಾಕೆಂದರೆ ದಾನ ಕೊಡುವ ಸಂಧಿಯು ಮಹತ್ ಭಾಗ್ಯದಿಂದ ಲಭಿಸುತ್ತದೆ. ನೀವು ನಿಮ್ಮ ಆತ್ಮ ಕಲ್ಯಾಣಕ್ಕೋಸ್ಕರವಾಗಿ ದಾನವನ್ನು ಕೊಟ್ಟು ಸಂಪತ್ತಿಯನ್ನು ಸಫಲಗೊಳಿಸಿರಿ. ಈ ಸಂಪತ್ತಿಯು ನಿನ್ನೊಡನೆ ಬರಲಾರದು. ನೀವು ಮಾಡಿದ ಧರ್ಮ ದಾನ, ಪುಣ್ಯ ನಿಮ್ಮೊಡನೆ ಬರುವುದು. ಆದುದರಿಂದ ಏನೂ ಪ್ರತಿಫಲದ ಅಪೇಕ್ಷೆಯಿಲ್ಲದೆ ದಾನವನ್ನು ಮಾಡಿರಿ.

**ಐಹಿಕ ಫಲಾನಪೇಕ್ಷಾ ಕ್ಷಾಂತಿನಿಷ್ಕಪಟತಾನಸೂಯತ್ವಂ**
**ಅವಿಷಾದಿತ್ವಮುದಿತ್ವಂ ನಿರಹಂಕಾರಿತ್ವಮಿತಿ ಹಿ ದಾತೃಗುಣಾಃ ॥**

ಧರ್ಮನೀತಿಸಾರ.

ದಾನ ಕೊಡುವವರು ಇಹಲೋಕದ ಸುಖದ ಇಚ್ಛೆಯನ್ನು ಮಾಡಬಾರದು. ಹಾಗೆಯೇ ಪರಭವಸಂಬಂಧವಾದ ಸುಖದ ಆಕಾಂಕ್ಷೆಯನ್ನು ಮಾಡಬಾರದು. ದಾನ ಕಾರ್ಯದ ಸಮಯದಲ್ಲಿ ಕ್ಷಮೆ ಇರಬೇಕು. ಕಪಟ ರಹಿತವಾದ ಪರಿಣಾಮ, ಹರ್ಷವಿಷಾದ ರಹಿತವಾದ ಭಾವ, ಅಭಿಮಾನವಿಲ್ಲದಿರುವಿಕೆ, ಇದೆಲ್ಲಾ ದಾನ ಕೊಡುವ ದಾತೃವಿನ ಗುಣಗಳು. ಇದರಿಂದ ಅವನು ಇಹ ಪರಲೋಕಗಳಲ್ಲಿ ಸುಖಿಯಾಗುತ್ತಾನೆ.

ಒಂದಾನೊಂದು ಸಮಯ ಒಬ್ಬ ಮುನಿಗಳಿಗೆ ಕರ್ಮದ ಉದಯದಿಂದ ಶರೀರದಲ್ಲಿ ರೋಗವಾಗಿ ಅವರು ಅತ್ಯಂತ ಕ್ಷೀಣರಾದರು. ಇದನ್ನು ನೋಡಿ ಒಬ್ಬ ಶ್ರಾವಿಕೆಯು ಆಹಾರದ ಸಮಯದಲ್ಲಿ ಶುದ್ಧ ಭಾವನೆಯಿಂದ

ವನಸ್ಪತಿಯು ಔಷಧವನ್ನು ತಯಾರಿಸಿ ಕೊಟ್ಟಳು. ಆ ಔಷಧಿಯಿಂದ ಆ ಮುನಿಗಳ ರೋಗವು ದೂರವಾಯಿತು. ಆ ಶ್ರಾವಿಕೆಗೆ ಅವಳು ಮಾಡಿದ ಔಷಧ ದಾನದಿಂದ ದೊಡ್ಡ ಪುಣ್ಯ ಬಂಧವಾಯ್ತು. ಆ ಪುಣ್ಯದ ಪ್ರಭಾವದಿಂದ ಅವಳು ದೊಡ್ಡ ಶ್ರೀಮಂತರ ಮನೆಯಲ್ಲಿ ಜನ್ಮವೆತ್ತಿದಳು. ಅವಳು ಸ್ನಾನ ಮಾಡಿದ ನೀರಿನಲ್ಲಿ ಒಂದು ಮಹಾರೋಗವಾದ ನಾಯಿಯು ಹೊರಳಾಡಲು ಅದು ಆಗಲೇ ನಿರೋಗಿಯಾಯಿತು. ಅಲ್ಲಿಯ ರಾಜನು ಈ ವಿಷಯವನ್ನು ಕೇಳಿ ಆಶ್ಚರ್ಯಚಕಿತನಾಗಿ ಈ ನಾಯಿಯು ಹೇಗೆ ನಿರೋಗಿಯಾಯಿತೆಂದು ತನ್ನ ಮಂತ್ರಿಯನ್ನು ವಿಚಾರಿಸಿದನು. ಮಂತ್ರಿಯು 'ರಾಜನ್! ಒಬ್ಬ ಸಾಹುಕಾರನ ಮಗಳು ಸ್ನಾನ ಮಾಡಿದ ನೀರಿನಲ್ಲಿ ಇದು ಹೊರಳಾಡಲು ನಿರೋಗಿಯಾಯಿತು' ಎಂದನು. ಆ ರಾಜನಿಗೂ ಮಹಾರೋಗವಿತ್ತು. ಅವನೂ ಆ ನೀರನ್ನು ತನ್ನ ಶರೀರಕ್ಕೆ ತಾಗಿಸಲು ಅಪೇಕ್ಷಿಸಿದನು. ಆದರೆ ಮಂತ್ರಿಯು ರಾಜನಿಗೆ ಆ ಕನ್ಯೆಯ ಶರೀರದ ಸ್ಪರ್ಶವನ್ನು ಮಾಡಿಸಿದನು. ಕನ್ಯೆಯ ಶರೀರದ ಸ್ಪರ್ಶವಾಗುತ್ತಲೇ ರಾಜನು ನಿರೋಗಿಯಾದನು. ಇದನ್ನು ನೋಡಿ ರಾಜನಿಗೆ ಪರಮಾನಂದವಾಯಿತು. ಆ ಕನ್ಯೆಯೊಡನೆ ಲಗ್ನ ಮಾಡಿಕೊಂಡು ಅವಳಿಗೆ ಪಟ್ಟರಾಣಿಯ ಪದವಿಯನ್ನು ಕೊಟ್ಟನು. ಅವಳು ಸ್ನಾನ ಮಾಡಿದ ನೀರಿನಿಂದ ಸಾವಿರಾರು ಜನರು ನಿರೋಗಿಯಾದರು. ನೋಡಿರಿ, ಭವ್ಯರೇ! ಒಂದು ಸಾರಿ ಭಕ್ತಿಭಾವದಿಂದ ಔಷಧ ದಾನವನ್ನು ಕೊಟ್ಟ ಪುಣ್ಯದ ಫಲದಿಂದ ಅವಳು ರಾಜನ ಪಟ್ಟರಾಣಿಯಾದಳು. ಆದುದರಿಂದ ನೀವು ರೋಗಿಗಳಾದ ತ್ಯಾಗಿ ಮುನಿಗಳಿಗೆ ನೀವು ನ್ಯಾಯದಿಂದ ಅರ್ಜಿಸಿದ ಧನವನ್ನು ಔಷಧದಾನಕ್ಕೋಸ್ಕರವಾಗಿ ಉಪಯೋಗಿಸಿರಿ, ಔಷಧ ದಾನವು ಎಲ್ಲಾ ದಾನಗಳಲ್ಲಿ ಶ್ರೇಷ್ಠವಾದೆ,

**ರೋಗಿಣೋ ಭೇಷಜಂದೇಯಂ ರೋಗೋ ದೇಹವಿನಾಶಕಃ |**
**ದೇಹನಾಶೇ ಕುತೋ ಜ್ಞಾನಂ ತದಭಾವೇ ನ ನಿರ್ವೃತಿಃ ||**

ಔಷಧದಾನದಿಂದ ಶರೀರದ ರಕ್ಷಣೆ ಯಾಗುತ್ತದೆ. ಶರೀರವಿಲ್ಲದಿದ್ದರೆ ಜ್ಞಾನವು ಸಿಗಲಾರದು. ಜ್ಞಾನವಿಲ್ಲದಿದ್ದರೆ ಮೋಕ್ಷವು ಹೇಗೆ ಸಿಗುವುದು, ಆದುದರಿಂದ ಶರೀರವನ್ನು ರಕ್ಷಿಸುವುದು ಅಗತ್ಯವಾಗಿದೆ. ಯಾಕಂದರೆ ಶರೀರವಿಲ್ಲದೆ ಧರ್ಮಕಾರ್ಯವು ಆಗಲಾರದು. ಶರೀರವನ್ನು ರಕ್ಷಿಸಿ ಮೋಕ್ಷಮಾರ್ಗಕ್ಕೆ ಅನುಕೂಲಪಡಿಸಿಕೊಳ್ಳುವುದು ಶ್ರಾವಕರ ಕರ್ತವ್ಯವಾಗಿದೆ. ಆದುದರಿಂದ ನೀವು ಧನದ ಆಶೆಯನ್ನು ಬಿಡಿರಿ. ಸಂಪತ್ತಿಯ ಉಪಯೋಗವನ್ನು ದಾನಕಾರ್ಯದಲ್ಲಿ ಮಾಡಿರಿ. ಆ ದಾನದಿಂದ ನಿಮಗೆ ಪರಂಪರೆಯಿಂದ ಅನೇಕ ವೈಭವಗಳು ಪ್ರಾಪ್ತವಾಗಿ ಪುನಃ ನೀವು ಆ ವೈಭವಗಳ ಸುಖವನ್ನು ಅನುಭವಿಸುವಿರಿ. ಆದರಿಂದ ಪುನಃ ನೀವು ದಾನವನ್ನು ಕೊಟ್ಟು ಪುಣ್ಯವನ್ನು ಬೆಳೆಸಿರಿ. ಆ ಪುಣ್ಯವು ಜೀವನಿಗೆ ಬೀಜಾಂಕುರದಂತೆ ಸುಖವನ್ನು ಕೊಡುವುದಾಗಿದೆ. ಆದುದರಿಂದ ತ್ಯಾಗದಲ್ಲಿಯೇ ಭೋಗವಿದೆ ಎಂದು ಹೇಳಲಾಗಿದೆ. ವೈಭವ ಪ್ರಾಪ್ತವಾಗಲು ಅದನ್ನು ದಾನಕಾರ್ಯದಲ್ಲಿ ವಿನಿಯೋಗಿಸುವುದು ಆತ್ಮಕಲ್ಯಾಣಕ್ಕೆ ಸಹಕಾರಿಯಾಗಿದೆ. ನೀವು ನಿಮ್ಮ ಮನಸ್ಸಿನಲ್ಲಿ ಪರಂಪರೆಯಿಂದ ಮುಕ್ತಿಯನ್ನು ಕೊಡುವ ದಾನಧರ್ಮವನ್ನು ಸದಾ ಜಾಗೃತವಾಗಿಟ್ಟಲ್ಲಿ ಆ ತ್ಯಾಗಧರ್ಮದ ಪ್ರಭಾವದಿಂದ ನೀವು ನಿಮ್ಮ ಆತ್ಮಸಿದ್ಧಿಯನ್ನು ಮಾಡಿಕೊಳ್ಳುವಿರಿ. ಇದು ಆಚಾರ್ಯರ ಉಪದೇಶವಾಗಿದೆ. ಹೇ ಜೀವಾತ್ಮನ್ ! ನಿನ್ನ ಮಮತ್ವಭಾವವು ಕರ್ಮಬಂಧಕ್ಕೆ ಕಾರಣವಾಗಿದೆ. ನೀನು ಮೋಹದಿಂದ ಸಂಸಾರದಲ್ಲಿ ಮುಳುಗಿರುತ್ತೀಯೋ, ನಿನಗೆ ಮುಕ್ತಿಯನ್ನು ಪಡೆಯ ಬೇಕಾದರೆ ವಿಷಯವಾಸನೆಯನ್ನು ಬಿಡಬೇಕಾಗುವುದು. ನೀನು ದೀನ, ದುಃಖಿ ಮತ್ತು ಕಷ್ಟಕ್ಕೊಳಗಾದ ಪ್ರಾಣಿಗಳ ಮೇಲೆ ದಯೆಯನ್ನು ಮಾಡು. ಅವರನ್ನು ತಿರಸ್ಕರಿಸಬೇಡ. ಆಶ್ರಯವಿಲ್ಲದ ಪ್ರಾಣಿಗಳಿಗೆ ಯಥಾಶಕ್ತಿ ಸಹಾಯವನ್ನು ಮಾಡು. ಶ್ರೀಮಂತರಿಗೆ ಯಾರೂ ಸಹಾಯವನ್ನು ಮಾಡಿಯಾರು. ಆದರೆ ಆಶ್ರಯಹೀನರಾದ ಬಡಬಗ್ಗರಿಗೆ ಸಹಾಯವನ್ನು ಮಾಡುವುದರಲ್ಲಿಯೇ ಯಥಾರ್ಥವಾದ ಧರ್ಮವಿದೆ. ಅಂಥಹರು ಬಹಳ ಕಡಿಮೆ.

ವಿರಲಾಃ ಜಾನಂತಿ ಗುಣಾನ್ ವಿರಲಾಃ ಕುರ್ವಂತಿ ನಿರ್ಧನೇಸ್ನೇಹಂ
ವಿರಲಾಃ ಪರಕಾರ್ಯರತಾಃ ಪರದುಃಖೇನಾಪಿ ದುಃಖಿತಾ ವಿರಲಾಃ
ಇಷ್ಟೋಪದೇಶ.

ಯಾರಾದರೊಬ್ಬ ಮಹಾಪುರುಷರೇ ದರಿದ್ರರ ಗುಣವನ್ನು ತಿಳಿದು ಅವರೊಡನೆ ಸ್ನೇಹವನ್ನು ಮಾಡುತ್ತಾರೆ. ಮತ್ತೊಬ್ಬನ ಕಾರ್ಯವನ್ನು ಮಾಡಿ ಉಪಕಾರವನ್ನು ಮಾಡುವವರು ಬಹಳ ಕಡಿಮೆ. ಬೇರೆಯವರು ದುಃಖಿಗಳಾದರೆ ತಾವೂ ದುಃಖ ಪಡುವವರು ಮತ್ತೂ ಕಡಿಮೆ. ಈ ವಿಷಯದಲ್ಲಿ ಒಬ್ಬ ಸಾಹುಕಾರನ ಕಥೆಯನ್ನು ಕೇಳಿರಿ.

ಒಬ್ಬ ಮಿಥ್ಯಾದೃಷ್ಟಿಯು ಧರ್ಮ ಕರ್ಮಗಳನ್ನು ತಿಳಿಯದೆ ಕುದೇವತೆಯ ಎದುರಿನಲ್ಲಿ ಒಂದು ಮನುಷ್ಯ ಜೋಡಿಯನ್ನು ನಿತ್ಯ ಬಲಿ ಕೊಡುವೆನೆಂದು ಪ್ರತಿಜ್ಞೆ ಮಾಡಿದನು. ಒಂದು ದಿವಸ ಅವನಿಗೆ ಮನುಷ್ಯ ಜೋಡಿಯು ಸಿಗಲಿಲ್ಲ. ನೋಡಿ ಭವ್ಯರೇ ! ಪಾಪಿಗಳು ಎಷ್ಟು ನಿರ್ದಯರಾಗಿರುತ್ತಾರೆ. ಜೀವ ಹಿಂಸೆಯಂಥಹ ಪಾಪವು ಲೋಕದಲ್ಲಿ ಬೇರೆ ಇಲ್ಲ. ನಮ್ಮಲ್ಲಿ ಸೂಕ್ಷ್ಮಸ್ಥೂಲ ಬಾದರ ಮೊದಲಾದ ಷಟ್ಕಾಯಿಕ ಜೀವಗಳ ವಿಷಯದಲ್ಲಿ ಪ್ರಮಾದದಿಂದ ಹಿಂಸೆಯಾಗಿದ್ದರೆ ಆ ದೋಷವು ದೂರವಾಗಲೆಂದು ಮುನಿಗಳು ಮತ್ತು ಗೃಹಸ್ಥರು ಆಲೋಚನೆಯನ್ನು ಮಾಡುತ್ತಾರೆ.

ಪೃಥ್ವೀ ಜಲಾಗ್ನಿ ವಾಯುತೇಜೋವನಸ್ಪತಯಶ್ಚ ವಿಕಲತ್ರಯಾಃ
ಯೇ ಯೇ ವಿರಾಧಿತಾ: ಖಲು ಮಿಥ್ಯಾಮೇ ದುಷ್ಕೃತಂ ಭವತು

ಈ ಜೀವಗಳು ನನ್ನಿಂದ ಪ್ರಮಾದದ ಕಾರಣದಿಂದ ಹಿಂಸಿಸಲ್ಪಟ್ಟಿದ್ದರೆ ಆ ಕರ್ಮವು ದೂರವಾಗಲಿ. ಈ ಪ್ರಕಾರ ಜಾಗ್ರುತವೃತ್ತಿಯಿಂದ ವರ್ತಿಸದೆ ಮನಸ್ಸಿನಲ್ಲಿ ಹಿಂಸೆಯನ್ನು ಮಾಡುವ ಭಾವನೆ ಮಾಡಿದರೂ ಪ್ರತ್ಯಕ್ಷವಾಗಿ ಹಿಂಸೆಯಾಗದಿದ್ದರೂ ಅದು ಕರ್ಮಬಂಧಕ್ಕೆ ಕಾರಣವಾಗುತ್ತದೆ.

ವ್ಯುತ್ಥಾನಾವಸ್ಥಾಯಾಂ ನಾಗಾದೀನಾಂ ವಶಪ್ರವೃತ್ತಾಯಾಂ
ಮ್ರಿಯತಾಂ ಜೀವೋ ಮಾವಾ ಧಾವತ್ಯಗ್ರೇ ಧ್ರುವಂ ಹಿಂಸಾ

ಇಷ್ಟೋಪದೇಶ.

ಪ್ರಮಾದ ಅಥವಾ ರಾಗ ಪರಿಣಾಮದಿಂದ ಈ ಜೀವನು ಹಿಂಸೆಯನ್ನು ಮಾಡುತ್ತಾನೆ. ಮನಸ್ಸಿನಲ್ಲಿ ಹಿಂಸೆಯ ಸಂಕಲ್ಪವನ್ನು ಮಾಡುತ್ತಾನೆ. ಆಗ ಅವನ ಕಡೆಯಿಂದ ಜೀವವಧೆಯಾಗದಿದ್ದರೂ ಪಾಪಬಂಧವಾಗುತ್ತದೆ. ಮಿಥ್ಯಾದೃಷ್ಟಿ ಪಾಪಿಯು ಇಂಥಹ ಕುಭಾವನೆಯಿಂದ ದುರ್ಗತಿಯ ಬಂಧವನ್ನು ಮಾಡಿಕೊಳ್ಳುತ್ತಾನೆ. ಆ ಸಮಯದಲ್ಲಿ ಅವನು ಒಂದು ಮನುಷ್ಯ ಜೋಡಿಯು ಬಲಿ ಕೊಡಲಿಕ್ಕೆ ಸಿಕ್ಕಿದಲ್ಲಿ ಅದಕ್ಕೆ ಒಂದು ಲಕ್ಷ. ರೂಪ್ಯಾ ಕೊಡುವೆನೆಂದು ಡಂಗುರವನ್ನು ಸಾರಿಸಿದನು. ತನ್ನ ಪ್ರಾಣ ಎಲ್ಲರಿಗೂ ಪ್ರಿಯವಾಗಿದೆ. ಹಣಕ್ಕೋಸ್ಕರ ಪ್ರಾಣವನ್ನು ಯಾರು ಕೊಡುವರು. ಆ ಮಿಥ್ಯಾದೃಷ್ಟಿಯು ಒಬ್ಬ ಪತಿ–ಪತ್ನಿಯರನ್ನು ಹಗ್ಗದಿಂದ ಕಟ್ಟಿ ಬಲಿ ಕೊಡಲು ತೆಗೆದುಕೊಂಡು ಹೋಗುತ್ತಿದ್ದನು. ಆದರೆ ಅವರಿಬ್ಬರೂ ಅಳುತ್ತಿದ್ದರು. ಅದನ್ನು ನೋಡಿ ಒಬ್ಬ ಸಮ್ಯಗ್‌ದೃಷ್ಟಿ ಶ್ರಾವಕನು ಅವರ ಅಳುವ ಕಾರಣವನ್ನು ಕೇಳಿದನು. ಆಗ ಅವರು ಆ ಸಾಹುಕಾರನ ಕಾಲಿಗೆ ಬಿದ್ದು ಪುಣ್ಯಾತ್ಮನ್, ನಮ್ಮನ್ನು ರಕ್ಷಿಸಿರಿ. ಎಂದು ಪ್ರಾರ್ಥಿಸಿದರು. ನಮಗೆ ನೀವಲ್ಲದೆ ಬೇರೆ ಯಾರೂ ರಕ್ಷಕರಿಲ್ಲ. ಇದನ್ನು ಕೇಳಿ ಆ ಸಮ್ಯಗ್‌ದೃಷ್ಟಿ ಶ್ರಾವಕನ ಮನಸ್ಸಿನಲ್ಲಿ ದಯೆ ಹುಟ್ಟಿತು. ಮಹಾ ಪುರುಷರು ಸಂಸಾರದ ಎಲ್ಲಾ ಪ್ರಾಣಿಗಳನ್ನು ತಮ್ಮ ಪರಿವಾರದವರೆಂದು ತಿಳಿಯುತ್ತಾರೆ.

ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ
ಉದಾರಚರಿತಾನಾಂ ತು ವಸುಧೈವ ಕುಟುಂಬಕಂ

ಸುಭಾಷಿತಾವಲಿ.

ಇವನು ತನ್ನವನು ಇವನು ಬೇರೆಯವನು ಎಂಬ ವಿಚಾರವು ಸಾಮಾನ್ಯ ಜನರಲ್ಲಿ ಇರುತ್ತದೆ. ಆದರೆ ಮಹಾಪುರುಷರು ಲೋಕದ

ಎಲ್ಲಾ ಜೀವರನ್ನು ತನ್ನ ಕುಟುಂಬ ವರ್ಗದವರೆಂದು ತಿಳಿದು ಅವರ ರಕ್ಷಣೆಯನ್ನು ಮಾಡಲು ತನ್ನ ಬುದ್ಧಿ ಮತ್ತು ಶಕ್ತಿಯನ್ನು ಉಪಯೋಗಿಸುತ್ತಾರೆ. ಆಗ ಆ ಸಾಹುಕಾರನು. ಆ ಮಿಥ್ಯಾದೃಷ್ಟಿಗೆ ಹೇಳುತ್ತಾನೆ, ಎಲೇ, ನೀನು ಈ ಪಾಪಬಂಧವನ್ನು ಯಾಕೆ ಮಾಡಿಕೊಳ್ಳುತ್ತಿದ್ದಿಯೇ. ಇದು ಅನ್ಯಾಯವಾಗಿದೆ. ಈ ಅನ್ಯಾಯದಿಂದ ದೇವತೆಯ ಎದುರಿನಲ್ಲಿ ಬಲಿಯನ್ನು ಕೊಟ್ಟರೆ ಆ ದೇವತೆಯು ಪ್ರಸನ್ನವಾಗದೆ ನಿನ್ನನ್ನೇ ಹೊಡೆದು ಹಾಕಬಹುದು. ಎಂದು ಉಪದೇಶ ಮಾಡ ತೊಡಗಿದನು. ಆದರೂ ಪಾಪಿಗಳು ತಮ್ಮ ದುರಾಗ್ರಹವನ್ನು ಬಿಡಲಾರರು. ಆ ಪಾಪಿಯು ಸಾಹುಕಾರನಿಗೆ ಬೇಕಾದ ಅಪಶಬ್ದಗಳನ್ನು ಹೇಳತೊಡಗಿದನು. ಆದರೂ ಆ ಸಾಹುಕಾರನು ಬಹಳ ಶಾಂತ ಪರಿಣಾಮದಿಂದ ಅವನಿಗೆ ಹೇಳುತ್ತಾನೆ. ' ನಿನಗೆ ಬಲಿ ಕೊಡುವುದೇ ಇದ್ದರೆ ನಾನು ಮತ್ತು ನನ್ನ ಪತ್ನಿಯನ್ನು ಬಲಿ ಕೊಡು. ನನಗೆ ಶರಣ ಬಂದ ಜೀವಗಳನ್ನು ರಕ್ಷಿಸುವುದು ನನ್ನ ಕರ್ತವ್ಯವಾಗಿದೆ. ನಾನು ಅವರನ್ನು ಬಲಿ ಕೊಡಲು ಬಿಡಲಾರೆ. ಎಂದು ದೃಢವಾಗಿ ಹೇಳಿದನು. ನೋಡಿ ಭವ್ಯರೇ, ಸಮ್ಯಗ್ದೃಷ್ಟಿ ಜೀವರ ಸ್ವಭಾವವೇ ಹೀಗಿರುತ್ತದೆ. ಅವರು ಬೇರೆಯವರನ್ನು ರಕ್ಷಿಸುವುದಕ್ಕೋಸ್ಕರವಾಗಿ ತನ್ನ ಪ್ರಾಣವನ್ನು ಅರ್ಪಿಸಲು ಸಿದ್ಧರಾಗಿರುತ್ತಾರೆ. ಎಷ್ಟು ದೊಡ್ಡ ಪರೋಪಕಾರ. ಪರೋಪಕಾರವಿಲ್ಲದಿದ್ದರೆ ಮಾನವ ಜೀವನಕ್ಕೆ ಶೋಭೆ ಇಲ್ಲ.

ಪರೋಪಕಾರಶೂನ್ಯಸ್ಯ ಧಿಙ್ಮನುಷ್ಯಸ್ಯ ಜೀವಿತಂ ।
ಧನ್ಯಾಸ್ತೇ ಪಶವೋ ಏಷಾಂ ಚರ್ಮಾಪ್ಯುಪಕರಿಷ್ಯತಿ ॥

ಯಾವ ಮನುಷ್ಯನು ಪರೋಪಕಾರವನ್ನು ಮಾಡುವುದಿಲ್ಲವೋ ಅವನ ಜೀವನವು ವ್ಯರ್ಥವಾಗಿದೆ. ಉಪಕಾರರಹಿತ ಮನುಷ್ಯನಿಂದ ಪಶುಗಳೇ ಶ್ರೇಷ್ಠವಾಗಿವೆ. ಯಾಕಂದರೆ ಸತ್ತನಂತರ ಆ ಪ್ರಾಣಿಗಳ ಚರ್ಮದ ಉಪಯೋಗವೂ ಆಗುತ್ತದೆ. ಆದುದರಿಂದ ಪರೋಪಕಾರ ಮಾಡಿರಿ. ಆ ಸಮಯದಲ್ಲಿ ಆ ಸಾಹುಕಾರನು ಪರೋಪಕಾರಕ್ಕೋಸ್ಕರವಾಗಿ ತನ್ನ

ಪ್ರಾಣವನ್ನು ಅರ್ಪಿಸಲೂ ಸಿದ್ಧನಾದನು. ಮತ್ತು ಆ ಪತಿಪತ್ನಿಗಳನ್ನು ಸಂಕಟದಿಂದ ಬಿಡಿಸಿದನು. ಆ ದೃಢ ಮಿಥ್ಯಾ ದೃಷ್ಟಿಯು ಆ ಸಾಹುಕಾರನನ್ನು ಮತ್ತು ಅವನ ಪತ್ನಿಯನ್ನು ಕಟ್ಟಿ ಬಲಿಯನ್ನು ಕೊಡಲು ತೆಗೆದುಕೊಂಡು ಹೋದನು. ದೇವತೆಯ ಎದುರಿನಲ್ಲಿ ಹೋದ ನಂತರ ಸಾಹುಕಾರನು ಹೀಗೆ ಹೇಳಿದನು. ದೇವೀ ! ನೀನು ದೇವಿ ಎಂದು ಹೇಳಲ್ಪಡುತ್ತೀಯೇ, ಲಕ್ಷಾಂತರ ಜನರು ನಿನ್ನನ್ನು ಶ್ರೇಷ್ಠಳೆಂದು ತಮ್ಮ ರಕ್ಷಣೆಗೋಸ್ಕರ ನಿನ್ನ ಪೂಜೆಯನ್ನು ಮಾಡುತ್ತಾರೆ. ಪ್ರಾಣಿಗಳನ್ನು ಹೊಡೆದು ನನ್ನ ಪೂಜೆಯನ್ನು ಮಾಡಿರಿ ಎಂಬ ನಿನ್ನ ಅಭಿಪ್ರಾಯವಿದೆ ಎಂದು ಅವರು ಲೋಕದಲ್ಲಿ ನಿನ್ನ ಅಪಕೀರ್ತಿಯನ್ನು ಮಾಡುತ್ತಾರೆ. ದೇವೀ ನೋಡು, ನೀನು ಪ್ರಾಣಿಗಳನ್ನು ರಕ್ಷಿಸದೆ ಬಲಿಯನ್ನು ಅಪೇಕ್ಷಿಸುತ್ತೀ ಎಂದ ಮೇಲೆ ಈ ಅನ್ಯಾಯವು ಲೋಕಸಂದೆಗೆ ಕಾರಣವಾಗಬಹುದು. ನೀನು ಜಗತ್ತಿನ ತಾಯಿಯೆಂದು ಹೇಳಿಸಿಕೊಳ್ಳುತ್ತೀ. ತಾಯಿಯು ಮಕ್ಕಳನ್ನು ರಕ್ಷಿಸದೆ ಬಲಿ ತೆಗೆದುಕೊಳ್ಳುತ್ತಾಳೆಂದ ಮೇಲೆ ಇದನ್ನು ನೋಡಿ ಲೋಕವು ನೀತಿ ಭ್ರಷ್ಟವಾಗಬಹುದು. ತಾಯೀ, ನೀನು ವಿಚಾರ ಮಾಡು. ಈ ಪೂಜೆಯಿಂದ ನಿನಗೆ ಯಾವ ಲಾಭವಿದೆ ? ಇದನ್ನು ಕೇಳಿ ಆ ದೇವಿಯು ಪ್ರತ್ಯಕ್ಷ ಪ್ರಗಟಳಾದಳು. ಮತ್ತು ಹೇಳತೊಡಗಿದಳು. ಶ್ರೇಷ್ಠಿನ್ ! ನಿನ್ನ ದಯಾಮಯವಾದ ಉಪದೇಶವು ನನ್ನ ಮನಸ್ಸಿಗೆ ಹಿಡಿಯಿತು, ಇನ್ನು ಮುಂದೆ ಇಂಥಹ ಮಿಥ್ಯಾ ಅಭಿನಿವೇಶದಿಂದ ಅನ್ಯಾಯವನ್ನು ಮಾಡುವ ಭಕ್ತರಿಗೆ ಸರಿಯಾದ ದಂಡವನ್ನು ಕೊಡುವೆನು.

ವಿಪರೀತಾಭಿನಿವೇಶಂ ನಿರಸ್ಯ ಸಮ್ಯಗ್ವ್ಯವಸ್ಯ ನಿಜತತ್ವಂ
ಯತ್ತಸ್ಮಾದವಿಚಲನಂ ಸ ಏವ ಪುರುಷಾರ್ಥಸಿಧ್ಯುಪಾಯೋಽಯಂ

ಪುರುಷಾರ್ಥಸಿಧ್ಯುಪಾಯ.

ದೇವಿಯು ತನ್ನ ದಿವ್ಯವಾಣಿಯಿಂದ ಹೇಳಿದಳು:—ಎಲೇ ಭವ್ಯ ಜೀವರೇ ! ನಿಮ್ಮ ನಿಮ್ಮ ಆತ್ಮ ಹಿತ್ಮಹಿತಕ್ಕೋಸ್ಕರ ನನ್ನ ಪೂಜೆಯನ್ನು

ಮಾಡಿರಿ. ಭಕ್ತಿಯನ್ನು ಮಾಡಿರಿ. ನಾನು ಇದು ವರೆಗೆ ಹಿಂಸೆಯ ಅನುಮೋದನೆಯಿಂದ ಅನೇಕ ಪಾಪಕರ್ಮಗಳನ್ನು ಕಟ್ಟಿಕೊಂಡೆನು. ಆದರೆ ಈ ಸಾಹುಕಾರನ ಉಪದೇಶದಿಂದ ವಿವೇಕ ಜಾಗೃತಿಯಾಯಿತು. ಅವನ ಉಪದೇಶದಿಂದ ನನಗೆ ಇಂದು ಉಪಶಮಸಮ್ಯಕ್ತ್ವದ ಪ್ರಾಪ್ತಿಯಾಯಿತು. ನನ್ನ ಮನಸ್ಸನ್ನು ನಾನು ಅತ್ಯಂತ ಶುದ್ಧವನ್ನಾಗಿ ಮಾಡಿದ್ದೇನೆ. ಈ ಸಮ್ಯಗ್ದೃಷ್ಟಿಯ ಉಪಕಾರದಿಂದ ನಾನು ಈ ಸಂಸಾರವೆಂಬ ಸಮುದ್ರದಿಂದ ಅವಶ್ಯ ಪಾರಾಗಿ ಹೋಗುವೆನು.

ಅಂತರ್ಮುಹೂರ್ತಕಾಲೇನ ನಿರ್ಮಲೀಕೃತಮಾನಸಾಃ ।
ಆದ್ಯಂ ಗೃಣ್ಹಂತಿ ಸಮ್ಯಕ್ತ್ವಂ ಕರ್ಮಣಾಂ ಪ್ರಶಮೇ ಸತಿ ॥

ಧರ್ಮನೀತಿಸಾರ.

ಈ ಪ್ರಕಾರ ಆ ದೇವಿಯ ಪರಿಣಾಮವು ಅತ್ಯಂತ ಉಪಶಮವಾಗಿ ಹೇಳತೊಡಗಿದಳು. ಈಗ ನಾನು ಉಪಶಮ ಸಮ್ಯಗ್ದೃಷ್ಟಿಯಾದೆನು. ನಾನು ಜಿನೇಂದ್ರ ಭಗವಂತನ ಸೇವೆಯನ್ನು ಮಾಡುತ್ತೇನೆ. ನಾನು ಜಿನೇಂದ್ರಭಗವಂತನನ್ನು ಬಿಟ್ಟು ಯಾರನ್ನೂ ಸೇವಿಸಲಾರೆ. ನೀವು ಇನ್ನು ಈ ದಿವ್ಯಮಂದಿರದಲ್ಲಿ ಭಗವಾನ್ ಆದಿನಾಥ ತೀರ್ಥಂಕರರ ಮೂರ್ತಿಯನ್ನು ಸ್ಥಾಪಿಸಿರಿ. ಈ ಪ್ರಕಾರ ಗರ್ಜಿಸಿ, ಹೇಳಲು ದೇವಿಯ ಮಾತನ್ನು ಎಲ್ಲಾ ಜನರೂ ಒಪ್ಪಿಕೊಂಡರು. ಆ ಸಮಯದಲ್ಲಿ ಲಕ್ಷಾಂತರ ಮಿಥ್ಯಾದೃಷ್ಟಿ ಜೀವರು ಕುಧರ್ಮವನ್ನು ಬಿಟ್ಟು ಜಿನಧರ್ಮದಲ್ಲಿ ರತರಾದರು. ಜಿನಧರ್ಮವನ್ನು ಬಿಟ್ಟು ಯಾರೂ ದೇವಿದೇವತೆಗಳ ಪೂಜೆಯನ್ನು ಮಾಡುವುದಿಲ್ಲವೆಂಬ ಪ್ರತಿಜ್ಞೆಯನ್ನು ಕೈಕೊಂಡರು. ಪ್ರಭೋ ! ಸಂಸಾರವೆಂಬ ಸಮುದ್ರದಿಂದ ಪಾರಗೊಳಿಸುವ ಲೋಕದಲ್ಲಿ ಯಾವುದಾದರೂ ಧರ್ಮವಿದ್ದರೆ ಅದು ಅಹಿಂಸಾಮಯವಾದ ಜಿನಧರ್ಮವೇ. ನಾವು ಅಜ್ಞಾನದಿಂದ ಅನಂತ ಜನ್ಮಗಳನ್ನು ಕಳೆದೆವು. ಇನ್ನು ನಮ್ಮನ್ನು ರಕ್ಷಿಸಿರಿ.

ಸಂಸಾರಸಾಗರನಿಮಜ್ಜದಶೇಷಜಂತು
ಪೋತಾಯಮಾನಮಭಿನಮ್ಯ ಜಿನೇಶ್ವರಸ್ಯ
ಕಲ್ಯಾಣಮಂದಿರಸ್ತೋತ್ರ-

ಪ್ರಭೋ ! ಸಂಸಾರವೆಂಬ ಸಮುದ್ರದಲ್ಲಿ ಮುಳುಗುತ್ತಿರುವ ಪ್ರಾಣಿಗಳನ್ನು ರಕ್ಷಿಸಲು ಹಡಗಿನಂತಿರುವವರು ಬೇರೆ ಯಾರೂ ಇಲ್ಲ. ಆದುದರಿಂದ ನೀವು ನಮ್ಮನ್ನು ರಕ್ಷಿಸಿರಿ, ಇದನ್ನು ಕೇಳಿ ಅಲ್ಲಿದ್ದ ರಾಜ ಮತ್ತು ಪ್ರಜೆಗಳು ಜೈನಧರ್ಮದ ಜಯಘೋಷವನ್ನು ಮಾಡಿದರು. ಜೈನಧರ್ಮದ ಪ್ರಭಾವನೆಯಾಯಿತು. ಪ್ರಭಾವನೆಯು ಧರ್ಮದ ದೊಡ್ಡ ಅಂಗವಾಗಿದೆ. ಲಕ್ಷಾಂತರ ಜನರು ಜೈನಧರ್ಮದ ಅನುಯಾಯಿಗಳಾದರು.

ನೋಡಿ ಭವ್ಯರೇ ! ದಯಾಭಾವದಿಂದ ಜೀವರಾಶಿಗಳನ್ನು ರಕ್ಷಿಸಿದ್ದರಿಂದ ಎಷ್ಟು ಪ್ರಾಣಿಗಳಿಗೆ ಜೀವದಾನವನ್ನು ಕೊಟ್ಟನು. ಅವನು ಅಭಯದಾನವನ್ನು ಕೊಟ್ಟವನೆಂದು ಲೋಕದಲ್ಲಿ ಪ್ರಸಿದ್ಧನಾದನು. ಮತ್ತು ಕೀರ್ತಿಶಾಲಿಯಾದನು. ಮತ್ತು ಪರಭವದಲ್ಲಿಯೂ ಅನೇಕ ಸುಖಗಳನ್ನು ಅನುಭವಿಸಿ ಮುಕ್ತಿಯನ್ನು ಪಡೆದನು. ಆದುದರಿಂದ ಭವ್ಯರೇ, ನೀವು ಆತ್ಮಕಲ್ಯಾಣಕ್ಕೋಸ್ಕರವಾಗಿ ಉತ್ತಮ ತ್ಯಾಗ ಧರ್ಮವನ್ನು ಧರಿಸಿರಿ. ಮತ್ತು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಕೇವಲಿ ಭಗವಂತನ ವಚನವಾಗಿದೆ.

ಭವ್ಯರೇ ! ನಿಮಗೆ ಸುಖವು ಬೇಕಾದರೆ ಲೋಭ ಮತ್ತು ಕಷಾಯವನ್ನು ಬಿಡಿರಿ. ಲೋಭ ಮತ್ತು ಕಷಾಯವು ಅನೀತಿಗೆ ಕಾರಣವಾಗಿದೆ. ಜಗತ್ತಿನಲ್ಲಿರುವ ಶತ್ರುಗಳಲ್ಲಿ ಮೋಹವೆಂಬ ಶತ್ರು ಬಹಳ ಪ್ರಬಲನಾಗಿದ್ದಾನೆ, ಪುರುಷಾರ್ಥ ಮಾಡಿ ಪರಸ್ಪರ ವಿರೋಧವನ್ನು ಬಿಟ್ಟು ಧರ್ಮ ಅರ್ಥ ಕಾಮ ಈ ಮಹಾ ಪುರುಷಾರ್ಥಗಳನ್ನು ಸಾಧಿಸಿದರೆ ದೈವವು ಫಲ ಕೊಡುತ್ತದೆ.

ಪರಸ್ಪರಾವಿರೋಧೇನ ತ್ರಿವರ್ಗೋ ಯದಿ ಸೇವ್ಯತೇ
ಅನರ್ಗಲಮತಃ ಸೌಖ್ಯಮಪವರ್ಗೋಪ್ಯನುಕ್ರಮಾತ್

ಕ್ಷತ್ರಚೂಡಾಮಣಿ.

ಪರಸ್ಪರ ಅವಿರೋಧವಾಗಿ ಧರ್ಮ ಅರ್ಥ ಕಾಮಗಳನ್ನು ಸೇವಿಸಿದರೆ ಸಂಸಾರ ಸಂಬಂಧವಾದ ಸುಖಗಳು ಪ್ರಾಪ್ತವಾಗಿ ನಂತರ ಮುಕ್ತಿಯೂ ಲಭಿಸುತ್ತದೆ. ನಿಮಗೆ ಮೋಕ್ಷದ ಇಚ್ಛೆ ಇದ್ದರೆ ಮನಸ್ಸಿನಲ್ಲಿ ಉತ್ಪನ್ನವಾಗುವ ಪರಭಾವಗಳು ಭೀತಿದಾಯಕಗಳಾಗುತ್ತವೆ. ಮೋಹರಾಗಾದಿಗಳಿಂದ ಕೂಡಿದ ಜೀವನು ವಿಚಾರ ಮಾಡದೆ ಅನಂತ ದುಃಖಗಳಿಂದ ಕೂಡಿದ ಈ ಕುಟುಂಬವರ್ಗವನ್ನು ತನ್ನ ಸುಖಕ್ಕೆ ಕಾರಣವೆಂದು ತಿಳಿದು ಆ ಕುಟುಂಬವರ್ಗಕ್ಕೋಸ್ಕರವಾಗಿ ತನ್ನ ಪುಣ್ಯವನ್ನು ವಿನಿಯೋಗಿಸಿ ನವೀನ ಕರ್ಮಗಳನ್ನು ಕಟ್ಟಿಕೊಳ್ಳುತ್ತಾನೆ. ಇದು ಮೋಹನೀಯ ಕರ್ಮದ ತೀವ್ರ ಉದಯವೆಂದು ತಿಳಿಯಬೇಕು. ಈ ಸಂಸಾರವು ವಿಚಾರ ಮಾಡದಿದ್ದರೆ ರಮ್ಯವಾಗಿ ಕಾಣುತ್ತದೆ. ಇದನ್ನು ನಾವು ವಿಚಾರ ಮಾಡಬೇಕು.

ಕಾ ತವ ಕಾಂತಾ ಕಸ್ತೇ ಪುತ್ರಃ ಸಂಸಾರೋಯಮತೀವ ವಿಚಿತ್ರಃ ॥ ಕಸ್ತ್ವಂ ವಾ ಕುತ ಆಯಾತಸ್ತ್ವಂ ಚಿಂತಯ ತದಿದಂ ಸಕಲಂ ಭ್ರಾತ ॥

ಭವ್ಯರೇ ವಿಚಾರ ಮಾಡಿರಿ. ನಾವು ಎಲ್ಲಿಂದ ಬಂದಿದ್ದೇವೆ. ಈ ನಮ್ಮ ಹೆಂಡತಿ ಮಕ್ಕಳು ಎಲ್ಲಿಂದ ಬಂದಿದ್ದಾರೆ. ಅವರೊಡನೆ ನಮ್ಮ ಸಂಬಂಧವೇನಿದೆ ? ಇದನ್ನು ವಿಚಾರ ಮಾಡಿರಿ. ಅಂದರೆ ನಿಮಗೆ ಈ ಸಂಸಾರವು ವಿಚಿತ್ರವಾಗಿ ಕಾಣಬಹುದು.

ಭರತಂಬೋಲ್ ಸಗರಂಬೊಲಾ ದಶರಥಂಬೋಲ್
ಶ್ರೇಣಿಕಂಬೋಲ್ ಮಹೇ- । ಶ್ವರನುದ್ದಾಯನನಂತೆ ದಾನ
ರುಚಿಯೊಳ್ ಶಾಸ್ತ್ರಾರ್ಥಿಯೊಳ್ ಸತ್ಯದೊಳ್ ॥ ವಿರತಿ ಕ್ಷಾಂತಿ
ಯೊಳರ್ಚನಾವಿಭವದೊಳ್ ಸಂದೊಪ್ಪೆ ಭಾಗ್ಯಂ ಸುಖಾ । ಕರ
ಮಂತಲ್ಲದೊಡೇನೊ ದುಷ್ಕರಮಲಾ ರತ್ನಾಕರಾಧೀಶ್ವರಾ ॥

ರತ್ನಾಕರಶತಕ.

ಭವ್ಯಾತ್ಮರೇ ! ನೋಡಿ, ಷಟ್‌ಖಂಡ ವೈಭವಗಳನ್ನು ಪ್ರಾಪ್ತ
ಮಾಡಿಯೂ ಭರತೇಶ್ವರನು ಅಧ್ಯಾತ್ಮಧಾನದಲ್ಲಿ ಪ್ರಸಿದ್ಧನಾಗಿದ್ದನು.
ಸಗರ ಚಕ್ರವರ್ತಿಯು ಶಾಸ್ತ್ರ ಸ್ವಾಧ್ಯಾಯದಲ್ಲಿ ಪ್ರಸಿದ್ಧನಾದನು. ದಶರಥ
ರಾಜನು ಸತ್ಯಧರ್ಮದಲ್ಲಿ ಪ್ರಸಿದ್ಧನಾದನು. ಶ್ರೇಣಿಕ ಮಹಾಮಂಡಳೇಶ್ವ
ರನು ಮನೆಯಲ್ಲಿದ್ದೂ ಕ್ಷಾಯಿಕ ಸಮ್ಯಗ್‌ದರ್ಶನವನ್ನು ಪಡೆದನು. ದಾನ
ದಲ್ಲಿ ಶ್ರೇಯಾಂಸರಾಜನೂ, ಪೂಜೆಯಲ್ಲಿ ಉದ್ದಾಯನನೂ ಪ್ರಸಿದ್ಧನಾ
ದನು. ಹೀಗೆ ಲೋಕದಲ್ಲಿ ಪ್ರಸಿದ್ಧರಾಗಿ ಇವರೆಲ್ಲರೂ ನಂತರ ಆತ್ಮ ಸಿದ್ಧಿ
ಯನ್ನು ಮಾಡಿಕೊಂಡರು. ಮತ್ತು ಲೋಕವಂದ್ಯರಾದರು. ಈ ವಿಚಾರ
ವನ್ನು ಮಾಡಿ ನೀವು ತತ್ವಚಿಂತನೆಯನ್ನು ಮಾಡಿರಿ. ಮನಸ್ಸಿನ ವಿಕಾರ
ಭಾವಗಳನ್ನು ಬಿಡಿರಿ. ಲೋಭವನ್ನು ಬಿಡುವುದರಿಂದ ತ್ಯಾಗಧರ್ಮ
ವಾಗುತ್ತದೆ.

ನೋಡಿ, ಒಂದಾನೊಂದು ಕಾಲದಲ್ಲಿ ಒಬ್ಬನು ಲೋಭದಿಂದ ಅನ್ಯಾ
ಯ್ಯವಮಾಡಿ ಬಹಳ ಸಂಪತ್ತಿಯನ್ನು ಅರ್ಜಿಸುತ್ತಿದ್ದನು. ಅನೇಕ ಸಾಧು
ಗಳು ಅವನಿಗೆ ಉಪದೇಶವನ್ನು ಕೊಟ್ಟರು, ಆದರೆ ಏನೂ ಪರಿಣಾಮ
ವಾಗಲಿಲ್ಲ ಅವನು ತನ್ನ ಲೋಭದ ಪೂರ್ತಿಗಾಗಿ ತ್ರಸ ಸ್ಥಾವರ ಜೀವ
ಗಳ ಹಿಂಸೆಯನ್ನು ಮಾಡುತ್ತಾ ಧನಾರ್ಜನೆಯನ್ನು ಮಾಡುತ್ತಿದ್ದನು.
ಒಂದು ದಿವಸ ಅವನು ಕಾಡಿನಿಂದ ಹಿಂದೆ ಬರುತ್ತಿದ್ದನು. ಆ ಕಾಡಿನಲ್ಲಿ
ಒಬ್ಬ ಮುನೀಶ್ವರರು ಒಂದು ಮರದ ಕೆಳಗೆ ಧ್ಯಾನಸ್ಥರಾಗಿ ಕುಳಿತಿದ್ದರು.
ಅವರನ್ನು ನೋಡಿ ಅಲ್ಲಿ ಇವನೂ ಅವರ ಸಮೀಪದಲ್ಲಿ ಕುಳಿತುಕೊಂಡನು.

ಅವರ ಧ್ಯಾನವು ಪೂರ್ಣವಾದ ನಂತರ ಆ ಮುನಿಗಳಿಗೆ ನಮಸ್ಕಾರ ಮಾಡಿ 'ಸ್ವಾಮಿನ್ ! ನನ್ನ ಮನೆಯಲ್ಲಿ ೬೦-೭೦ ಜನರ ಕುಟುಂಬ ವರ್ಗವಿದೆ. ಅವರೆಲ್ಲರ ಪಾಲನೆ ಪೋಷಣೆಯನ್ನು ನಾನು ಮಾಡುತ್ತಿದ್ದೇನೆ. ಇದು ಉಪಕಾರವೋ ಅಪಕಾರವೋ ದಯವಿಟ್ಟು ತಿಳಿಸಬೇಕು. ಒಂದು ಜೀವನ ರಕ್ಷಣೆ ಮಾಡಿದರೂ ಅಭಯದಾನವಾಗುತ್ತದೆಂದೂ ಅದರಿಂದ ಪುಣ್ಯ ಲಾಭವಾಗುತ್ತದೆಂದೂ ಹೇಳುತ್ತಾರೆ. ಹೀಗಿರುವಾಗ ನಾನು ಇಷ್ಟು ಜೀವ ಗಳ ಉಪಕಾರ ಮಾಡುತ್ತಿದ್ದೇನೆ. ಎಂದನು. ಆಗ ಮುನಿಗಳು ಹೇಳು ತ್ತಾರೆ—ಎಲೇ ಭವ್ಯನೇ ! ನೀನು ಮಾಡುತ್ತಿರುವುದು ಪುಣ್ಯವಲ್ಲ. ಪಾಪವೇ ಆಗಿದೆ. ಆಗ ಅವನು ಪುನಃ 'ಗುರುದೇವ ! ನಾನು ಅವರ ಉಪಕಾರಕ್ಕೋಸ್ಕರವಾಗಿ ಭರಣ ಪೋಷಣೆ ಮಾಡುತ್ತಿರುವಾಗ ಅದರಿಂದ ಪಾಪವು ಹೇಗಾಗುತ್ತದೆ. ಆಗ ಮುನಿಗಳು ' ಪಾಪಪುಣ್ಯವನ್ನು ಮಾಡು ವವನು ಈ ಜೀವನೊಬ್ಬನೇ ಎಂದರು.

**ಕರ್ತಾ ಅಸಸೀ ಶುಭಾಶುಭಾಚಾ ಭೋಕ್ತಾ ಸುಖದುಃಖಾಚಾ**
**ತೂಚ ಏಕಟಾ ಯಾಸ್ತವ ಪಾಳೀ ಜಿನಧರ್ಮಾಚಿ ಜೋ ಸಾಚಾ**

ನೀನು ದಯಾರಹಿತನಾಗಿ, ತ್ರಸ ಸ್ಥಾವರ ಜೀವಗಳ ಹಿಂಸೆಯನ್ನು ಮಾಡಿ ಧನಾರ್ಜನೆಯಿಂದ ಅವರ ಪೋಷಣೆಯನ್ನು ಮಾಡುತ್ತೀಯೇ. ಇದು ಪಾಪಕ್ಕೆ ಕಾರಣವಾಗಿದೆ. ನ್ಯಾಯದಿಂದ ಅರ್ಜಿಸಿದ ಸಂಪತ್ತಿನಿಂದ ದೀನ ಮತ್ತು ಅರಕ್ಷಿತರನ್ನು ರಕ್ಷಿಸಿದರೆ ಅದರಿಂದ ಪುಣ್ಯ ಬಂಧವಾಗುತ್ತದೆ. ನೀನು ಅನ್ಯಾಯದಿಂದ ಅರ್ಜಿಸಿದ ಸಂಪತ್ತಿಯು ಪಾಪದ ನೀನೊಬ್ಬನೇ ಕರ್ತನಾಗಿರುತ್ತೀ. ಆಗ ಅವನು ಪುನಃ ಹೇಳುತ್ತಾನೆ. ಸ್ವಾಮಿನ್ ! ನಾನು ಆ ಪಾಪವನ್ನು ಅವರಿಗೆ ಹಂಚಿ ಕೊಡುತ್ತೇನೆ. ನಾನೊಬ್ಬನೇ ಅದನ್ನು ಭೋಗಿಸಲು ಸಾಧ್ಯವಿಲ್ಲ. ಆಗ ಮುನಿಗಳು ಸ್ಮಿತವದನದಿಂದ ಹೇಳುತ್ತಾರೆ. 'ಏನೂ ಅಡ್ಡಿ ಇಲ್ಲ.' ಹಾಗೆಯೇ ಮಾಡು. ಅವನು ಅಲ್ಲಿಂದ ಎದ್ದು ಮನೆಗೆ ಹೋಗುತ್ತಾನೆ. ಅಲ್ಲಿ ಹೋಗಿ ಎಲ್ಲಾ ಕುಟುಂಬ ವರ್ಗದವರನ್ನು

ರೆದು ಕೇಳುತ್ತಾನೆ, ' ನಿಮಗೋಸ್ಕರವಾಗಿ ನಾನು ಅನೇಕ ವಿಧದಿಂದ ಅನ್ಯಾಯ ಅತ್ಯಾಚಾರಗಳನ್ನು ಮಾಡಿ ಪಾಪಬಂಧ ಮಾಡುತ್ತಿರುವೆನು. ಈ ಪಾಪ ಬಂಧವು ದುಃಖಕ್ಕೆ ಕಾರಣವಾಗಿದೆ. ಆದುದರಿಂದ ಈ ಪಾಪ ವನ್ನು ನೀವೂ ನಿಮ್ಮ ಪಾಲಿಗೆ ಹಂಚಿಕೊಳ್ಳಿರಿ. ಇದನ್ನು ಕೇಳಿ ಅವನ ಅತಿ ಪ್ರಿಯಳಾದ ತಾಯಿಯು ಹೇಳುತ್ತಾಳೆ. ' ಮಗನೇ, ನೀನು ಮಾಡಿದ ಪಾಪಾಚರಣೆಯ ಫಲವನ್ನು ನೀನೇ ಅನುಭವಿಸಬೇಕಾಗುತ್ತದೆ ಅದನ್ನು ಬೇರೆಯವರಿಗೆ ಕೊಡಲು ಸಾಧ್ಯವಿಲ್ಲ. ಮತ್ತು ನಮಗೂ ತೆಗೆದುಕೊಳ್ಳಲು ಸಾಧ್ಯವಿಲ್ಲ. ಆಗ ಅವನು ಕ್ರೋಧಿತನಾಗಿ ' ನೀವೆಲ್ಲಾ ಮಹಾ ಪಾಪಿಗಳು ಸ್ವಾರ್ಥಿಗಳು ಮೊದಲಾಗಿ ಅನೇಕ ಕಠೋರ ಶಬ್ದಗಳಿಂದ ಬೈದನು. ಆಗ ಅವನಿಗೆ ತಾನು ಅಜ್ಞಾನದಿಂದ ಮಾಡಿದ ಮೂರ್ಖತೆಗೆ ಪಶ್ಚಾತ್ತಾಪ ವಾಯಿತು. ಸಾಧುಸಂತರು ನನಗೆ ಎಷ್ಟು ವಿಧದಿಂದ ಉಪದೇಶ ಕೊಟ್ಟಿದ್ದರು, ಆದರೆ ನಾನು ಅದನ್ನು ಕೇಳಲಿಲ್ಲ ಇನ್ನು ನಾನು ಈ ಪಾಪದ ಫಲವನ್ನು ಹೇಗೆ ನೀಗಿಸಲಿ ಎಂದು ದುಃಖಪಟ್ಟನು.

ಬತಾಯ ಹೇ ಮನ ತೂ ಕ್ಯಾ ಲೇಜಾಯಗಾ
ಕವಡೀ ಕವಡೀ ಮಾಯಾ ಜೋಡೀ ಕುಟುಂಬ ಕಬಿಲಾ ಖಾಯಗಾ
ರಾಜ ಲೇಖ ಜಬ ಲೇಖಾ ಲೇಗಾ ಕ್ಯಾ ಲೇಜಾಯಗಾ

ಈ ಪ್ರಕಾರ ವಿಚಾರ ಮಾಡಿ ತನ್ನ ಕೋಟ್ಯವಧಿ ಧನವನ್ನು ನಾಲ್ಕು ಪ್ರಕಾರದ ದಾನ ಕಾರ್ಯದಲ್ಲಿ ವಿನಿಯೋಗಿಸಿದನು, ಹಾಗೆಯೇ ಆ ಮುನಿಗಳ ಸಮೀಪಕ್ಕೆ ಹೋಗಿ ಪ್ರಾರ್ಥಿಸಿದನು. ಗುರುದೇವ! ಈ ಪಾಪಿಯನ್ನು ಹೇಗಾದರೂ ಉದ್ಧರಿಸಿ ಯಮದೇವನ ದವಡೆಯಿಂದ ರಕ್ಷಿಸಿರಿ. ಮುನಿಗಳು ' ಯಮದೇವನ ದವಡೆಯಿಂದ ಉಳಿಯಲಿಕ್ಕೆ ಒಂದೇ ಒಂದು ಉಪಾಯವೆಂದರೆ ಸಮ್ಯಗ್ದರ್ಶನ. ಅದರ ಪ್ರಾಪ್ತಿಯನ್ನು ಮಾಡಿಕೋ, ಎಂದರು. ಆಗ ಮುನಿಗಳ ವಚನವನ್ನು ಕೇಳಿ ಅವನಿಗೆ ಉಪಶಮ ಭಾವವಾಯ್ತು.

ಸಮ್ಯಗ್ದರ್ಶನ ದೀಪ ಪ್ರಕಾಶಕಾಮೇಯಬೋಧಸಂಭೂತಾ
ಭೂರಿ ಚರಿತ್ರ ಪತಾಕಾಸ್ತೇ ಸಾಧುಗಣಾಸ್ತು ಮಾಂ ಪಾಂತು

ಸಮ್ಯಗ್ದರ್ಶನವೆಂಬ ದೀಪವು ಯಾವ ಮುನಿಯ ಕೈಯಲ್ಲಿದೆಯೋ ಆ ಮುನಿಗಳು ನನ್ನ ರಕ್ಷಣೆಯನ್ನು ಮಾಡಲಿ. ನಿರ್ಮಲವಾದ ಚಾರಿತ್ರ ವೆಂಬ ಧ್ವಜವನ್ನು ಧರಿಸುತ್ತಿರುವ ಮುನಿಗಳು ನನ್ನನ್ನು ರಕ್ಷಿಸಲಿ. ಮುನೀಶ್ವರರ ಮುಖದಿಂದ ಉಪದೇಶವನ್ನು ಕೇಳಿ ಅವನು ಸಮ್ಯಕ್ತ್ವವನ್ನು ಪಡೆದುಕೊಂಡನು. ಆದರೆ ಅವನಿಗೆ ಮೊದಲೇ ಅಶುಭಗತಿಯು ಬಂಧವಾ ಗಿತ್ತು. ಆದುದರಿಂದ ಅವನು ಸತ್ತು ದುರ್ಗತಿಗೆ ಹೋದನು. ಆದುದರಿಂದ ಭವ್ಯರೇ ! ಪಾಪಪರಿಣಾಮವನ್ನು ಬಿಡಿರಿ. ಮನಸ್ಸನ್ನು ನಿರ್ಮಲವನ್ನಾಗಿ ಮಾಡಿರಿ. ಹೀಗೆ ಆಚಾರ್ಯರ ಉಪದೇಶವಿದೆ.

ಹೇ ಜೀವಾತ್ಮನ್ ! ನೀನು ಸುಖಿಯಾಗಬೇಕಾದರೆ ದುಃಖೀ ಜೀವಗಳ ಮೇಲೆ ಉಪಕಾರವನ್ನು ಮಾಡು. ದೀನರಿಗೆ ದಾನವನ್ನು ಮಾಡು. ಮಧುರ ವಚನವನ್ನು ಮಾತಾಡುವುದು ಇದೂ ಒಂದು ಪ್ರಕಾರದ ದಾನ ವಾಗಿದೆ. ಆದರ ಸತ್ಕಾರ, ವಿನಯ, ಸ್ಥಾನದಾನ, ಕುಶಲ ಪ್ರಶ್ನೆ ಮೊದಲಾ ದವುಗಳೂ ದಾನದ ಪ್ರಕಾರವಾಗಿವೆ. ದುಷ್ಟ ಸಂಕಲ್ಪ ವಿಕಲ್ಪಗಳನ್ನು ಬಿಡಿರಿ. ಅನ್ಯಾಯದಿಂದ ಸಂಪತ್ತಿಯನ್ನು ಅರ್ಜಿಸಬೇಡಿರಿ. ಅದರಿಂದ ನಮಗೆ ಸುಖವಾಗಲಾರದು. ನ್ಯಾಯದಿಂದ ಸಂಪತ್ತಿಯನ್ನು ಅರ್ಜಿಸಿ ನಾಲ್ಕು ಪ್ರಕಾರದ ದಾನಗಳಲ್ಲಿ ವಿನಿಯೋಗಿಸಿರಿ. ಕೆಲವು ಅಜ್ಞಾನಿಗಳು ಸಂಪತ್ತಿಯ ರಕ್ಷಣವನ್ನು ಮಾತ್ರ ಮಾಡುತ್ತಾರೆ. ಆದರೆ ದಾನ ಕಾರ್ಯ ಗಳಲ್ಲಿ ಅದನ್ನು ಉಪಯೋಗಿಸುವುದಿಲ್ಲ. ಅವರು ಹೊಲದಲ್ಲಿ ಒಕ್ಕಲಿಗನು ಹೊಲದ ರಕ್ಷಣೆಯನ್ನು ಮಾಡಲು ನಿರ್ಮಿಸಿದ ಬೊಂಬೆಯಂತೆ ಇರುತ್ತಾರೆ. ಆ ಬೊಂಬೆಯು ಹೊಲದ ಧಾನ್ಯಗಳನ್ನು ತಾನೂ ತಿನ್ನುವುದಿಲ್ಲ. ಇತರ ರಿಗೂ ತಿನ್ನಲು ಬಿಡುವುದಿಲ್ಲ.

ನಂ ಚ ಯೋ ನಾತ್ತಿ ದದಾತಿ ನೈವ
ಧರ್ಮಾಯ ದೇವಾಯ ನ ಬಾಂಧವಾಯ
ಮಾತ್ರೇಪಿ ಪಿತ್ರೇ ಗುರವೇಪಿ ನೈವ
ಮನ್ಯೇ ತತೋಹಂ ಧನರಕ್ಷಕಂ ತಂ ||

ಧನವು ಅಂದರೆ ಲಕ್ಷ್ಮಿಯು ಕಡು ಲೋಭಿಗಳ ಸಮೀಪ ಇರಲು ಇಚ್ಛಿಸುವುದಿಲ್ಲ. ಎಲ್ಲಿ ಧನವನ್ನು ಬಚ್ಚಿಡುತ್ತಾರೋ ಅಲ್ಲಿಯೇ ಎಷ್ಟೋ ಸಾರಿ ನಷ್ಟವಾಗುತ್ತದೆ. ಹೀಗಿದ್ದರೂ ಅವನ್ನು ಖರ್ಚ ಮಾಡುವುದಿಲ್ಲ. ಬೇರೆಯವರಿಗೆ ಕೊಡುವುದಿಲ್ಲ. ನೋಡಿ, ಒಂದು ಸಾರಿ ದೊಡ್ಡ ಕ್ಷಾಮವು ಬಿದ್ದಿತ್ತು. ಆ ಸಮಯದಲ್ಲಿ ಮಳೆ ಬೆಳೆ ಇಲ್ಲದಿದ್ದರಿಂದ ಒಬ್ಬ ಲೋಭಿಯ ತಂಗಿಯು ಬಂದು ಅಣ್ಣನಿಗೆ ಹೇಳುತ್ತಾಳೆ. ಅಣ್ಣಾ, ಕ್ಷಾಮ ಬಿದ್ದಿದ್ದರಿಂದ ಶರೀರ ಪೋಷಣೆಗೆ ನಮ್ಮ ಹತ್ತಿರ ಸಾಧನವಿಲ್ಲ. ನಿನ್ನ ಹತ್ತಿರ ಕೋಠಾರದಲ್ಲಿ ಧಾನ್ಯವಿದೆ. ಅದರಿಂದ ನಮಗೆ ಸ್ವಲ್ಪ ಕೊಡು. ನಮ್ಮ ಹೊಲದಲ್ಲಿ ಧಾನ್ಯವಾದ ನಂತರ ಹಿಂದೆ ಕೊಡುವೆವು, ಆಗ ಆ ಲೋಭಿಯು ಹೇಳುತ್ತಾನೆ. ನನ್ನ ಮನೆಯಲ್ಲಿ ಒಂದು ಕಣ ಅನ್ನವೂ ಇಲ್ಲ. ಇದನ್ನು ಕೇಳಿ ಧಾನ್ಯ ರಕ್ಷಣೆಯನ್ನು ಮಾಡುತ್ತಿರುವ ದೇವತೆಗಳಿಗೆ ಬಹಳ ದುಃಖವಾಯಿತು. ಆ ದೇವತೆಗಳು " ಈ ಕೃಪಣನ ಹತ್ತಿರವಿದ್ದು ನಮಗೇನು ಫಲ. ಎಂದು ವಿಚಾರ ಮಾಡಿ ಆ ಧನ ಧಾನ್ಯದ ಕೋಠಾರಗಳನ್ನು ತೆಗೆದುಕೊಂಡು ಹೋಗಿ ಅವನ ತಂಗಿಯ ಮನೆಯಲ್ಲಿ ಇಟ್ಟ ಬಿಟ್ಟರು.

ಅಂತೇ ಧನಂ ತಸ್ಯ ಹರಂತಿ ಚೋರಾ
ನಯಂತಿ ಭೂಪಾ ಅನಲಾ ದಹಂತಿ
ಯತ್ರಾಸ್ತಿ ವಾ ನಶ್ಯತಿ ತತ್ರ ಶೀಘ್ರಂ
ಜ್ಞಾತ್ವೇತಿ ದೇಯಂ ಚತುರೇಣ ಪುಂಸಾ

ಇಂಥಹವರ ಸಂಪತ್ತಿಯನ್ನು ರಾಜನು ಅಪಹರಿಸುತ್ತಾನೆ. ಕಳ್ಳರು ಅಪಹರಿಸುತ್ತಾರೆ. ಅಗ್ನಿಯು ಸುಟ್ಟ ಬಿಡುತ್ತದೆ. ಅಥವಾ ಎಲ್ಲಿಯಾದರೂ

ಭೂಮಿಯಲ್ಲಿ ಹುಗಿದಿಟ್ಟಿದ್ದರೆ ಅಲ್ಲಿಯೇ ನಷ್ಟವಾಗಿ ಹೋಗುತ್ತದೆ. ಆದುದರಿಂದ ಭವ್ಯರೇ ! ನೀವು ಲೋಭವನ್ನು ಬಿಟ್ಟು ದಾನ ಕಾರ್ಯದಲ್ಲಿ ಸಂಪತ್ತಿಯನ್ನು ಉಪಯೋಗಿಸಿರಿ. ಆದುದರಿಂದಲೇ ವಿವೇಕಿಗಳು ಧನ ಮತ್ತು ಭೋಗವನ್ನು ತ್ಯಾಗ ಮಾಡುತ್ತಾರೆ.

ತ್ಯಜ್ಯತೇ ರಜ್ಯಮಾನೇನ ರಾಜ್ಯೇನಾನ್ಯೇನ ವಾ ಜನಃ
ಭಜ್ಯತೇ ತ್ಯಜ್ಯಮಾನೇನ ತತ್ತ್ಯಾಗೋಽಸ್ತು ವಿವೇಕಿನಾಂ

ಕ್ಷತ್ರಚೂಡಾಮಣಿ.

ನಾವು ಸಂಸಾರದಲ್ಲಿ ಯಾವ ವಸ್ತುಗಳನ್ನು ಅಪೇಕ್ಷಿಸುತ್ತೇವೆಯೋ ಅವುಗಳು ನಮಗೆ ಸಿಗುವುದಿಲ್ಲ, ವಿಪರೀತವಾಗಿ ಯಾವ ವಸ್ತುಗಳನ್ನು ನಾವು ಬೇಡವೆಂದು ಹೇಳುತ್ತೇವೆಯೋ ಅವುಗಳು ಮಾತ್ರ ಬರುತ್ತವೆ. ಆದುದರಿಂದ ವಿವೇಕಿಗಳು ಆ ಭೋಗ್ಯ ವಸ್ತುಗಳ ಮೇಲೆ ಉದಾಸೀನ ಪರಿಣಾಮದಿಂದ ಇರುತ್ತಾರೆ. ಮತ್ತು ಯಾವ ವಸ್ತುಗಳ ಮೇಲೆಯೂ ರಾಗದ್ವೇಷಗಳನ್ನು ಮಾಡುವುದಿಲ್ಲ. ಹಾಗಿರುವುದರಿಂದಲೇ ಅವರು ಕರ್ಮನಿರ್ಜರೆಯನ್ನು ಮಾಡುತ್ತಾರೆ.

ಜಂ ಅಣ್ಣಾಣೀ ಕಮ್ಮಂ ಖವೇದಿ ಭವಸಯಸಹಸ್ಸಕೋಡೀಹಿಂ
ತಂ ಣಾಣೀ ತಿಹಿಂ ಗುತ್ತೋ ಖವೇಯಿ ಉಸ್ಸಾಸಮತ್ತೇಣ

ಅಜ್ಞಾನಿ ಜೀವರು ಅನೇಕ ಕೋಟಿ ವರ್ಷಗಳ ವರೆಗೆ ತಪಶ್ಚರಣ ವನ್ನು ಮಾಡಿ ಎಷ್ಟು ಕರ್ಮಗಳನ್ನು ನಾಶ ಮಾಡುತ್ತಾರೆಯೋ ಅಷ್ಟು ಕರ್ಮಗಳನ್ನು ಜ್ಞಾನಿಗಳು ಒಂದು ಶ್ವಾಸೋಚ್ಛ್ವಾಸ ತೆಗೆಯುವ ಕೊಳ್ಳುವಷ್ಟು ಸಮಯದಲ್ಲಿ ನಾಶ ಮಾಡುತ್ತಾರೆ. ಆದುದರಿಂದ ಭವ್ಯರೇ ! ನೀವು ಜ್ಞಾನಿಗಳಾಗಿ ಆತ್ಮ ಕಲ್ಯಾಣ ಮಾಡಿಕೊಳ್ಳಬೇಕೆಂಬ ಇಚ್ಛೆ ಇದ್ದರೆ ಲೋಭವನ್ನು ಬಿಟ್ಟು ಉದಾರ ಮನಸ್ಸಿನಿಂದ ಸಂಪತ್ತಿಯನ್ನು ದಾನ ಕಾರ್ಯದಲ್ಲಿ ವಿನಿಯೋಗಿಸಿರಿ ಆದರಿಂದ ಇಹ ಪರಭವಗಳಲ್ಲಿ ಸುಖ

ವಾಗುವುದು. ವಿಚಾರ ಮಾಡಿ ನೋಡಿದರೆ ಸಂಯೋಗವಿದ್ದಲ್ಲಿ ವಿಯೋಗವೂ ನಿಶ್ಚಿತವಾಗಿದೆ. ಆದುದರಿಂದ ಸಂಯುಕ್ತವಾದ ಪದಾರ್ಥಗಳಲ್ಲಿ ಆಸಕ್ತಿಯನ್ನು ಇಡಬೇಡಿರಿ.

ಸಂಯುಕ್ತಾನಾಂ ವಿಯೋಗಶ್ಚ ಭವಿತಾಹಿ ನಿಯೋಗತಃ
ಕಿಮನ್ಯೈರಂಗತೋಽಪ್ಯಂಗೀ ನಿಸ್ಸಂಗೋ ಹಿ ನಿವರ್ತತೇ
ಕ್ಷತ್ರಚೂಡಾಮಣಿ.

ಎಲೇ ! ಜೀವಾತ್ಮನೇ, ತಮ್ಮ ಶರೀರದಲ್ಲಿರುವ ಆತ್ಮನಿಗೆ ಈ ಶರೀರದ ಸಂಯೋಗವಾಗಿದೆ. ಆಯುಷ್ಯವು ಪೂರ್ಣವಾಗಲು ಈ ಸಂಯುಕ್ತವಾದ ಶರೀರವನ್ನು ಬಿಟ್ಟು ಅವನು ಹೋಗುತ್ತಾನೆ. ಯಾಕಂದರೆ ಸಂಯುಕ್ತ ಪದಾರ್ಥದ ವಿಯೋಗವೂ ನಿಶ್ಚಯವಾಗಿ ಆಗುತ್ತದೆ. ಅಜ್ಞಾನೀ ಜೀವನು ಇಷ್ಟ ವಸ್ತುಗಳ ಸಂಯೋಗದಿಂದ ಆನಂದ ಪಡುತ್ತಾನೆ. ಅನಿಷ್ಟ ಪದಾರ್ಥಗಳ ಸಂಯೋಗದಿಂದ ದುಃಖ ಪಡುತ್ತಾನೆ. ಆದುದರಿಂದ ಎರಡೂ ವಿಕಲ್ಪಗಳನ್ನು ಬಿಟ್ಟು ನನ್ನ ಆತ್ಮನು ಅಖಂಡ ಅವಿನಾಶಿಯಾಗಿದ್ದಾನೆ. ಅವನ ಸ್ವರೂಪದಲ್ಲಿರುವುದು ನನ್ನ ಧರ್ಮವಾಗಿದೆ. ಎಂದು ತಿಳಿದು ಉದಯದಲ್ಲಿ ಬರುವಂಥಹ ಕರ್ಮಗಳು ಸಂಯೋಗಮೂಲಕವಾಗಿವೆ. ಎಂದು ಅವುಗಳನ್ನು ಬಿಡಿರಿ. ಮನಸ್ಸನ್ನು ಪವಿತ್ರ ಮಾಡಿ ಅದರಲ್ಲಿ ಉತ್ತಮ ತ್ಯಾಗ ಧರ್ಮವನ್ನು ಇಡಿರಿ. ಮತ್ತು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ.

ಭವ್ಯಾತ್ಮರೇ ! ನೀವು ಮಿಥ್ಯಾಧರ್ಮವನ್ನು ಪ್ರತಿಪಾದಿಸುವ, ಯುದ್ಧಶಾಸ್ತ್ರ, ಶೃಂಗಾರಶಾಸ್ತ್ರ, ಮಾಯಾಶಾಸ್ತ್ರ, ವಶೀಕರಣ, ಮಂತ್ರ ತಂತ್ರ ಮೊದಲಾದ ಶಾಸ್ತ್ರಗಳನ್ನು ಬಿಟ್ಟು ಭಗವಾನ್ ವೀತರಾಗ ಸರ್ವಜ್ಞ ನಿಂದ ನಿರೂಪಿಸಲ್ಪಟ್ಟ ದಯಾಮಯ ಧರ್ಮವನ್ನು ಪ್ರತಿಪಾದಿಸುವ ಶಾಸ್ತ್ರಗಳನ್ನು ಓದಿರಿ. ಮತ್ತೊಬ್ಬರಿಗೆ ಓದಿಸಿರಿ. ಇದು ದಾನವಾಗಿದೆ. ತನ್ನ ಸಂತತಿಗೆ ಜ್ಞಾನದಾನ ಮಾಡಿರಿ. ಇತರರಿಗೆ ಶಾಸ್ತ್ರದಾನವನ್ನು ಮಾಡಿರಿ. ಯಾರು ಜ್ಞಾನಾರ್ಜನೆಯ ಇಚ್ಛೆಯುಳ್ಳವರಿಗೆ ಸಹಾಯವನ್ನು ಮಾಡಿರಿ.

ವಿಚಾರಶೀಲರಾಗಿದ್ದಾರೆಯೋ ಪಾಪಭೀರುಗಳಾಗಿದ್ದಾರೆಯೋ, ಸದಾಚಾರಿ ಧರ್ಮಪ್ರವರ್ತಕರಾಗಿದ್ದಾರೆಯೋ ಅಂಥಃ ಭದ್ರ ಜೀವರಿಗೆ ಶಾಸ್ತ್ರದಾನ ಮಾಡುವುದರಲ್ಲಿ ಸಂಪತ್ತಿಯನ್ನು ಉಪಯೋಗಿಸಿರಿ. ಶಕ್ತಿ ಇದ್ದರೆ ಜಿನ ಮಂದಿರವನ್ನು ಕಟ್ಟಿಸಿ ಪ್ರತಿಷ್ಠೆ ಮಾಡಿಸಿರಿ. ಆದರಿಂದ ದೊಡ್ಡ ಪುಣ್ಯ ಬಂಧವಾಗಿ ನಿರ್ವಾಣ ಪದವು ಪ್ರಾಪ್ತಿಯಾಗುವುದು.

ಜಿನಬಿಂಬಂ ಜಿನಾಗಾರಂ ಜಿನಯಾತ್ರಾಪ್ರತಿಷ್ಠಿತಂ
ದಾನಂ ಪೂಜಾ ಚ ಸಿದ್ಧಾಂತ ಲೇಖನಂ ಕ್ಷೇತ್ರಸಪ್ತಕಂ ||

ದಾನ, ಪೂಜೆ, ರಥೋತ್ಸವ, ಸಿದ್ಧಾಂತ ಲೇಖನ, ಪ್ರತಿಷ್ಠೆ, ಜಿನ ಬಿಂಬ ನಿರ್ಮಾಣ, ಜಿನಾಲಯ ನಿರ್ಮಾಣ, ಈ ಸಪ್ತ ಕ್ಷೇತ್ರಗಳಲ್ಲಿ ನಿರ್ದೋಷವಾದ ಸಂಪತ್ತಿಯ ವಿನಿಯೋಗವನ್ನು ಮಾಡಿರಿ.

ಮೋಕ್ಷಾವಸಾನಸ್ಯ ಸುಖಸ್ಯ ಪಾತ್ರಂ
ಭವಂತಿ ಭವ್ಯಾ ಭವಭೀರವೋ ಯೇ
ಭಜಂತಿ ಭಕ್ತ್ಯಾ ಜಿನನಾಥ ದೃಷ್ಟಂ
ಧರ್ಮಂ ನಿರಾಚ್ಛಾದಮದೂಷಣಂ ತೇ ||

ಆ ಧರ್ಮದಿಂದ ನಿಮಗೆ ಮೋಕ್ಷ ಸುಖದ ಪ್ರಾಪ್ತಿಯಾಗುವುದು. ಭವ್ಯರೇ ! ನಿಮಗೆ ಪುಣ್ಯದ ಅಂಶವಿದೆ ಎಂದು ಧರ್ಮದ ಮೇಲೆ ಪ್ರೀತಿ ಹುಟ್ಟಿದೆ. ಆದುದರಿಂದ ಪುನಃ ಧರ್ಮಾಚರಣೆಯನ್ನು ಮಾಡಿ ಸಮ್ಯಕ್ತ್ವ ಸಹಿತವಾದ ಪುಣ್ಯವನ್ನು ಗಳಿಸಿಕೊಳ್ಳಿರಿ. ಪುಣ್ಯವು ಇಚ್ಛಿತ ಭೋಗವನ್ನು ಕೊಡುತ್ತದೆ. ತೀವ್ರವಾದ ಪುಣ್ಯವಿದ್ದರೆ ವಿಪತ್ತಿಯೂ ಸಂಪತ್ತಿಯಾಗಿ ಪರಿಣಮಿಸುತ್ತದೆ. ಅನೇಕ ಸಂಕಟಗಳು ದೂರವಾಗುತ್ತವೆ.

ಒಂದು ಸಾರಿ ಒಬ್ಬ ಪುಣ್ಯವಂತನಾದ ರಾಜನು ಒಬ್ಬ ಮನುಷ್ಯ ನನ್ನು ಸಂಕಟದಲ್ಲಿ ನೋಡಿ ಅವನನ್ನು ಸಂಕಟದಿಂದ ಬಿಡಿಸಿದನು. ಮತ್ತು ಅವನಿಗೆ ನೀನು ಹೆದರಬೇಡ, ಎಂದು ಆಶ್ವಾಸನೆಯನ್ನು ಕೊಟ್ಟನು. ನೀನು ನನ್ನೊಡನೆ ಬಾ ಎಂದು ಅವನನ್ನು ತನ್ನ ಹಡಗಿನಲ್ಲಿ ಕೂತುಕೊ

ಳಿಸಿ ಕರಕೊಂಡು ಹೋದನು. ಪಾಪಿಗಳಿಗೆ ಎಷ್ಟು ಉಪಕಾರ ಮಾಡಿದರೂ ಅವರು ಉಪಕಾರ ಮಾಡುವವರಿಗೆ ಅಪಕಾರವನ್ನೇ ಮಾಡುತ್ತಾರೆ. ಆದರೆ ಪುಣ್ಯಶಾಲಿಗಳಿಗೆ ಆ ಅಪಕಾರವೂ ಉಪಕಾರವೇ ಆಗುತ್ತದೆ.

ಆದುದರಿಂದ ಭವ್ಯರೇ! ಪುಣ್ಯವನ್ನು ಗಳಿಸಿರಿ. ಪುಣ್ಯವು ಸುಖಕ್ಕೆ ಕಾರಣವಾಗಿದೆ. ಪುಣ್ಯದಿಂದ ಕಾಡ್ಕಿಚ್ಚು ಕೂಡ ನೀರು ಆಗುತ್ತದೆ. ಸಮುದ್ರವೂ ಭೂಮಿಯಾಗುತ್ತದೆ. ವಿಷ ಅಮೃತವಾಗುತ್ತದೆ. ಶತ್ರುಗಳು ಮಿತ್ರರಾಗುತ್ತಾರೆ. ಆದುದರಿಂದ ಸುಖವನ್ನು ಬಯಸುವವರು ಪುಣ್ಯವನ್ನು ಅರ್ಜಿಸಬೇಕು.

ಆ ದುಷ್ಟನು ಹಡಗಿನಲ್ಲಿ ಕೂತ ನಂತರ ಆ ರಾಜನ ಸುಂದರಿಯಾದ ಪತ್ನಿಯನ್ನು ನೋಡಿ ಕಾಮಾಂಧನಾದನು. ಪಾಪದ ವಿಚಾರವನ್ನು ಮಾಡದೆ ದೊಡ್ಡ ಕರ್ಮಬಂಧವನ್ನು ಮಾಡಿಕೊಂಡನು.

ಅನಾದರಂ ಯೋ ವಿತನೋತಿ ಧರ್ಮೇ
ಕಲ್ಯಾಣಮಾಲಾಫಲಕಲ್ಪವೃಕ್ಷೇ
ಚಿಂತಾಮಣಿಂ ಹಸ್ತಗತಂ ದುರಾಪಂ
ಮನ್ಯೇ ಸ ಮುಗ್ಧಸ್ತೃಣವಜ್ಜಹಾತಿ ||

ಸುಖದ ಸಮೂಹವನ್ನು ಕೊಡುವುದಕ್ಕೆ ಕಲ್ಪವೃಕ್ಷದಂತಿರುವ ಧರ್ಮದ ವಿಷಯದಲ್ಲಿ ಯಾರು ತಿರಸ್ಕಾರ ಬದ್ಧಿಯನ್ನಿಡುತ್ತಾರೆಯೋ ಆ ಮೂರ್ಖರು ದುರ್ಲಭವಾದ ಚಿಂತಾಮಣಿ ರತ್ನವನ್ನು ಕಸಕಡ್ಡಿಯಂತೆ ಎಸೆದು ಬಿಡುತ್ತಾರೆ.

ಆ ಮೂರ್ಖನು ದುಷ್ಟ ಅಭಿಪ್ರಾಯದಿಂದ ಆ ಹಡಗಿನಲ್ಲಿ ಣಮೋಂಕಾರ ಮಂತ್ರವನ್ನು ಜಪಿಸುತ್ತಿರುವ ಆ ರಾಜನನ್ನು ಸಮುದ್ರಕ್ಕೆ ದೂಡಿಬಿಟ್ಟನು. ಪಾಪಿಗಳು ಮಾಯಾಚಾರಿಗಳಾಗಿರುತ್ತಾರೆ. ಆ ಪುಣ್ಯಾತ್ಮನು ತನ್ನ ಮೇಲೆ ಬಂದ ಈ ಆಪತ್ತಿಯಿಂದ ಗಾಬರಿಯಾಗದೆ ಪುನಃ ಣಮೋಂಕಾರ ಮಂತ್ರವನ್ನೇ ಜಪಿಸುತ್ತಿದ್ದನು.

ಜಬ ಧವಲ ಸೇಠನೇ ಶ್ರೀಪಾಲಕೋ ಪೋತಸೆ ಸಾಗರಮೆ ಡಾಲಾ
ಉಸ ವಕ್ತ ನಹೀ ಶರಣ ಕೋಯಿ ಬಸ ಮಂತ್ರ ಸದಾ ಣಮೋ
ಕಾರ ಜಪೋ ॥ ಮಂತ್ರ ಪ್ರಭಾವಸೆ ಸಾಗರನೇ ಶ್ರೀಪಾಲಕೋ
ಗೋದ ಉಠಾಲಿಯಾ। ವಹ ಉಛಲ ಉಛಲ ಯೋಂ ರಹತಾಥಾ
ಬಸ ಮಂತ್ರ ಸದಾ ಣಮೋಂಕಾರ ॥

ಆ ಮಂತ್ರದ ಪ್ರಭಾವದಿಂದ ಶ್ರೀಪಾಲ ರಾಜನಿಗೆ ಆ ಸಮುದ್ರದಿಂದ ಪಾರಾಗಿ ಹೋಗಲು ಒಂದು ಕಟ್ಟಿಗೆಯು ತುಂಡು ಸಿಕ್ಕಿತು. ಆ ಮಂತ್ರದ ಶಕ್ತಿಯಿಂದ ಈಜಾಡಿಕೊಂಡು ಒಂದು ನಗರದ ತಟಕ್ಕೆ ಸೇರಿದನು. ಆಗ ಅಲ್ಲಿ ರಾಜ ದೂತರು ಬಂದು ಅವನಿಗೆ ನಮಸ್ಕಾರ ಮಾಡಿದರು. ಮತ್ತು ನೀನು ಧನ್ಯನಾಗಿದ್ದೀ, ನಿನಗೆ ಜಯಕಾರವಾಗಲಿ. ಎಂದು ಸ್ತುತಿಸಿ ಅವನ ಆಗಮನವನ್ನು ರಾಜನಿಗೆ ಹೋಗಿ ತಿಳಿಸಿದರು. ರಾಜನು ಎದುರು ಒಂದು ಬಹಳ ವೈಭವದಿಂದ ಅವನನ್ನು ಅರಮನೆಗೆ ಕರಕೊಂಡು ಹೋದನು. ಮತ್ತು ತನ್ನ ರಾಜಕನ್ಯೆಯನ್ನು ಕೊಟ್ಟು ಬಹಳ ಸಮಾರಂಭ ದಿಂದ ಲಗ್ನ ಮಾಡಿದನು. ಆದುದರಿಂದ ಭವ್ಯರೇ, ಪುಣ್ಯಾತ್ಮರಿಗೆ ವಿಪ ತ್ತಿಯೂ ಸಂಪತ್ತಿಯಾಗುತ್ತದೆ.

ನಿಜಾತ್ಮ ಬುದ್ಧಿರ್ನಿಜರಾಜ್ಯ ಮೂಲ್ಯಂ
ಪರಾತ್ಮಬುದ್ಧಿರ್ಭವದುಃಖಬೀಜಂ
ನಿಜಾತ್ಮಸೇವೈವ ಸುಖಸ್ಯ ದಾತ್ರೀ
ಸ್ವರ್ಮೋಕ್ಷದಾತ್ರೀ ಗುರುದೇವಸೇವಾ ॥

ಪುಣ್ಯವಂತರು ಹೀಗೆ ವಿಚಾರ ಮಾಡುತ್ತಾರೆ. ತನ್ನ ಆತ್ಮ ವಿಚಾರ ದಲ್ಲಿರುವುದೇ ಬಹು ಮೂಲ್ಯವಾದ ಸ್ವರಾಜ್ಯವಾಗಿದೆ. ಆತ್ಮಸಿದ್ಧಿಯೇ ಅಮೃತಾಹಾರವಾಗಿದೆ. ಪರಪದಾರ್ಥಗಳ ಮೇಲೆ ಮೋಹವನ್ನಿಡುವುದು ದುಃಖಕ್ಕೆ ಕಾರಣವಾಗಿದೆ. ಆತ್ಮಾನಂದವೆಂಬ ಅಮೃತವನ್ನು ಪಾನ ಮಾಡಿ ಅಲ್ಲಿಯೇ ಲೀನರಾಗಿರುವುದೇ ದೊಡ್ಡ ಆತ್ಮಧನವಾಗಿದೆ. ಇಂಥಹ ವಿಚಾರದಿಂದ ಈ ಜೀವನು ಕರ್ಮನಾಶ ಮಾಡುತ್ತಾನೆ. ಹಾಗೆಯೇ ಕೀರ್ತಿ

ಶಾಲಿಯಾಗುತ್ತಾನೆ. ಆದರೆ ಆ ಪಾಪಿಯು ಮಾತ್ರ ಅಪಕೀರ್ತಿಗೊಳ
ಗಾದನು. ಅವನನ್ನು ದೇವತೆಗಳು ಕಟ್ಟಿ ಶ್ರೀಪಾಲ ರಾಜನ ಎದುರಿನಲ್ಲಿ
ತಂದಿಟ್ಟರು. ಅಲ್ಲಿಯ ರಾಜನು ಆ ವಿಷಯವನ್ನು ತಿಳಿದು ಅವನಿಗೆ ಯೋಗ್ಯ
ದಂಡವನ್ನು ಕೊಡಲು ಆಜ್ಞಾಪಿಸಿದನು. ಆದರೆ ದಯಾವಂತನಾದ
ಶ್ರೀಪಾಲನು ' ಅವನಿಗೆ ಶಿಕ್ಷೆಯನ್ನು ವಿಧಿಸ ಬೇಡಿರಿ. ನಾನು ಪೂರ್ವ
ಜನ್ಮದಲ್ಲಿ ಮಾಡಿದ ಪಾಪದ ಉದಯದಿಂದ ಅವನು ಹೀಗೆ ಮಾಡಿದನು.
ಇದರಲ್ಲಿ ಅವನ ತಪ್ಪೇನೂ ಇಲ್ಲ. ಹೀಗೆಂದನು. ಮತ್ತು ಅವನನ್ನು ರಕ್ಷಿ
ಸಿದನು. ಆ ಸಮಯದಲ್ಲಿ ಆ ದುಷ್ಟನು ಆರ್ತಧ್ಯಾನದಿಂದ ಸತ್ತು ದುರ್ಗ
ತಿಗೆ ಹೋದನು. ಪಾಪಿಗಳು ಕ್ಷಣಿಕ ಸುಖಕ್ಕೋಸ್ಕರವಾಗಿ ತನ್ನ ಘಾತ
ವನ್ನು ಮಾಡಿಕೊಳ್ಳುತ್ತಾರೆ.

> ಗೃಣ್ಹಂತಿ ಧರ್ಮಂ ವಿಷಯಾಕುಲಾಯೇ
> ನ ಭಂಗುರೇ ಮಂಕ್ಷು ಮನುಷ್ಯಭಾವೇ
> ತೇ ದಹ್ಯಮಾನೇ ಭವನೇಗ್ನಿನಾಪಿ
> ನಿಸ್ಸಾರಯಂತೇ ನ ಧನಾನಿ ನೂನಂ ||

ಧರ್ಮನೀತಿಸಾರ.

ಆ ದುಷ್ಟನು ಒಂದು ನಿಮಿಷದ ಸುಖಕ್ಕೋಸ್ಕರವಾಗಿ ಮಹಾ
ಪಾಪಾಚರಣೆಯನ್ನು ಮಾಡಿ ಪರಭವದ ಸುಖದಿಂದ ವಂಚಿತನಾದನು.
ಆದುದರಿಂದ ಭವ್ಯರೇ ಮಾಯಾಚಾರ ಕಪಟಭಾವನ್ನು ಬಿಡಿರಿ. ದುಷ್ಟ
ವಿಚಾರಗಳ ತ್ಯಾಗವನ್ನು ಮಾಡಿರಿ. ಮನಸ್ಸನ್ನು ಪವಿತ್ರವನ್ನಾಗಿ ಮಾಡಿರಿ.
ಮಿಥ್ಯಾದೃಷ್ಟಿಗಳಿಂದ ನಿರೂಪಿಸಲ್ಪಟ್ಟ ಶಾಸ್ತ್ರಗಳ| ಸ್ತವನೆ, ವಂದನೆ,
ಪ್ರಶಂಸೆಯನ್ನು ಮಾಡಬೇಡಿರಿ. ಕ್ರೋಧಾದಿ ಕಷಾಯಗಳನ್ನು ಬಿಡಿರಿ.
ಈ ಕ್ರೋಧಾದಿ ಕಳ್ಳರೇ ಆತ್ಮಘಾತವನ್ನು ಮಾಡುತ್ತಾರೆ.

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್

ಕಾಮ, ಕ್ರೋಧ ಮತ್ತು ಲೋಭ ಇವು ಆತ್ಮನ ಘಾತವನ್ನು ಮಾಡುತ್ತವೆ. ಈ ದುರ್ಗುಣಗಳು ನರಕದ ದ್ವಾರದಂತಿವೆ. ಆದುದರಿಂದ ಇವುಗಳನ್ನು ಮೊದಲು ಬಿಡಿರಿ. ಸಂಸಾರದಲ್ಲಿ ಯಾರೂ ಯಾರಿಗೂ ಇಲ್ಲ. ಎಲ್ಲಾ ಪ್ರಾಣಿಗಳು ಸ್ವಾರ್ಥಪರವಶರಾಗಿದ್ದಾರೆ. ತನ್ನ ಸ್ವಾರ್ಥವನ್ನು ಸಾಧಿಸುತ್ತಾರೆ. ಕರ್ಮಬಂಧನದಿಂದ ಬಿಡಿಸಲು ಧರ್ಮವೇ ಸಮರ್ಥವಾಗಿದೆ. ಬೇರೆ ಯಾರೂ ಸಮರ್ಥರಿಲ್ಲ.

ಕುಟುಂಬಿನಃ ಪ್ರೇತವನಸ್ಯ ಚಾಂತಂ
ದೇಹೋಪಿ ಭಸ್ಮೀಭವತಿ ಸ್ವಭಾವಾತ್
ಸಂಪೂರ್ಣರಾಜ್ಯಂ ಚ ಗಜಾಶ್ವಹರ್ಮ್ಯ
ಮುಪಾರ್ಜಿತಂ ತಿಷ್ಠತಿ ಯತ್ರ ತತ್ರ
ನ ಯಾತಿ ಸಾರ್ಧಂ ಕಿಮಪಿ ತ್ವಯೈವ
ಕಿಂಚಿತ್ ಕದಾಚಿದ್ಯದಿ ಯಾತಿ ಕಿಂ ವಾ
ತ್ವಯಾ ಸಮಂ ಯಾತಿ ಚ ಪುಣ್ಯ ಪಾಪಂ
ಜ್ಞಾತ್ವೇತಿ ಶೀಘ್ರ ಕುರು ಪುಣ್ಯಕಾರ್ಯಂ

ಈ ನಿನಗೆ ಉಪಕಾರಿಗಳೆಂದು ತೋರುತ್ತಿರುವ ಈ ಕುಟುಂಬವರ್ಗದವರು ಸ್ಮಶಾನದ ವರೆಗೆ ಬರುತ್ತಾರೆ. ನಿನ್ನೊಡನೆ ಬಂದ ಶರೀರವೂ ಅಲ್ಲಿಯೇ ಸುಟ್ಟು ಭಸ್ಮವಾಗುತ್ತದೆ. ರಾಜ್ಯ ಭೋಗ ಆನೆ, ಕುದುರೆ, ಮನೆ ಮಠಗಳೂ ಇದ್ದಲ್ಲಿಯೇ ಉಳಿಯುತ್ತವೆ. ನಿನ್ನೊಡನೆ ಏನೂ ಹೋಗುವುದಿಲ್ಲ. ನಿನ್ನೊಡನೆ ಏನಾದರೂ ಹೋಗುವದಾದರೆ ನೀನು ಮಾಡಿದ ಪಾಪ ಪುಣ್ಯಗಳೇ ಹೋಗುತ್ತವೆ. ಆದುದರಿಂದ ಇದನ್ನು ವಿಚಾರ ಮಾಡಿ ಪುಣ್ಯ ಕಾರ್ಯವನ್ನೇ ಮಾಡು. ಪಾಪವು ಉದಯದಲ್ಲಿ ಬಂದರೆ ಫಲ ಕೊಡದೆ ಹೋಗುವುದಿಲ್ಲ. ಆದುದರಿಂದ ಸ್ವಲ್ಪ ಸುಖಕ್ಕೋಸ್ಕರವಾಗಿ ಪಾಪ ಬಂಧವನ್ನು ಮಾಡಿಕೊಳ್ಳಬೇಡ.

ಒಬ್ಬ ಪಾಪೀ ಜೀವನಿಗೆ ಧನಲೋಭದಿಂದ ಅನ್ಯಾಯದಿಂದ ಸಂಪತ್ತಿಯನ್ನು ಅರ್ಜಿಸುವ ಅಭ್ಯಾಸವಿತ್ತು. ಒಂದು ಸಾರಿ ರಾಜನು ಅರಮನೆಯನ್ನು ಕಟ್ಟಿಸಲು ತೆಗೆದನು. ಆಗ ಅಲ್ಲಿಯ ಭೂಮಿಯಲ್ಲಿ ಕೆಲವು ಬಂಗಾರದ ಶಲಾಕೆಗಳು ಹೊರಟವು. ಬಹಳ ದಿವಸ ಮಣ್ಣಿನ ಕೆಳಗೆ ಇದ್ದದರಿಂದ ಅವುಗಳಿಗೆ ಮಣ್ಣು ಹಿಡಿದು ಕಪ್ಪಾಗಿ ಕಾಣುತ್ತಿದ್ದವು. ಅವುಗಳನ್ನು ಕಬ್ಬಿಣವೆಂದು ತಿಳಿದು ಅಲ್ಲಿಯ ಸೇವಕರು ಪೇಟೆಯಲ್ಲಿ ತಂದು ಮಾರತೊಡಗಿದರು. ಆಗ ಈ ಲೋಭಿಯು ಅದನ್ನು ಬಂಗಾರವೆಂದು ಗುರುತಿಸಿ ಅದನ್ನು ಕಬ್ಬಿಣದ ಬೆಲೆಯಲ್ಲಿ ತೆಗೆದುಕೊಂಡನು. ಒಂದು ಸಾರಿ ಅವನಿಗೆ ಪರ ಊರಿಗೆ ಹೋಗುವ ಪ್ರಸಂಗ ಬಂತು. ಆಗ ತನ್ನ ಮಗನಿಗೆ ಹೇಳಿ ಹೋಗುತ್ತಾನೆ. ಇಂಥಹ ಶಲಾಕೆಗಳು ಬಂದರೆ ಬಿಡಬೇಡ. ಅವಶ್ಯವಾಗಿ ತೆಗೆದುಕೊಳ್ಳುವುದು. ಆದರೆ ಅವನ ಮಗನು ನ್ಯಾಯನಿಷ್ಠನಾಗಿದ್ದನು. ಪರಧನವನ್ನು ತೆಗೆದುಕೊಳ್ಳುವುದು ಉಚಿತವಲ್ಲ. ಅದು ಪಾಪಕ್ಕೆ ಕಾರಣವಾಗಿದೆ. ಮತ್ತು ಈ ವಿಷಯವು ರಾಜನಿಗೆ ತಿಳಿದರೆ ನಮ್ಮ ಎಲ್ಲಾ ಧನವನ್ನು ಅಪಹರಿಸಬಹುದು. ಎಂಬ ವಿಚಾರದಿಂದ ಅವನು ಎಲ್ಲಾ ಸುವರ್ಣ ಶಲಾಕೆಗಳನ್ನು ರಾಜನಿಗೆ ಹಿಂದೆ ಕೊಟ್ಟು ಬಿಟ್ಟನು. ಇಷ್ಟರಲ್ಲಿ ಅವನ ತಂದೆಯು ಹಿಂತಿರುಗಿದನು. ಈ ಎಲ್ಲಾ ವಿಷಯಗಳನ್ನು ಕೇಳಿ ಕಡು ಲೋಭಿಯಾದ ಅವನು ಕ್ರೋಧದಿಂದ ಆರ್ತಧ್ಯಾನ ಮಾಡತೊಡಗಿದನು. ಪುತ್ರನು ಅವನಿಗೆ ಹೇಳುತ್ತಾನೆ. ' ಪಿತಾಜೀ, ಪರಧನವನ್ನು ತೆಗೆದುಕೊಂಡು ಏನು ಪ್ರಯೋಜನ ? ' ಅದನ್ನು ಕೇಳಿ ಕೋಪದಿಂದ ಅವನಿಗೆ ಹೊಡೆಯಲು ಹೋಗುತ್ತಾನೆ, ಮಗನು ಓಡಿ ಹೋದನು. ಆಗ ತಂದೆಯು ಕೋಪದಿಂದ ತನ್ನ ಎರಡೂ ಕಾಲುಗಳನ್ನು ಕಡಿದುಕೊಂಡನು. ಪಾಪ ಕರ್ಮದ ಉದಯವು ವಿಚಿತ್ರವಾಗಿದೆ. ಒಂದು ಲೋಭದಿಂದ ಆರ್ತಧ್ಯಾನದಿಂದ ಸತ್ತು ಅವನು ದುರ್ಗತಿಗೆ ಹೋದನು. ಎಲ್ಲಾ ಪಾಪಗಳಲ್ಲಿ ಲೋಭವು ದೊಡ್ಡ ಪಾಪವಾಗಿದೆ.

ಧ್ಯಾನಂ ಸುದಾನಂ ನ ತಪೋ ಜಪಂಚ
ಪೂಜಾಂ ಪ್ರತಿಷ್ಠಾಂ ನ ಚ ತೀರ್ಥಯಾತ್ರಾಂ
ನ ಸ್ವಾತ್ಮಶುದ್ಧಿ ಪ್ರ ಉಪಕಾರಂ
ಧರ್ಮ ಪ್ರಚಾರಂ ಸ್ವರ್ಗತೇರ್ವಿಚಾರಂ
ದಯಾ ಪ್ರಚಾರಂ ಸ್ವಸುಖಂ ಸ್ವಚರ್ಯಾಂ
ಯಃ ಕೋಪಿ ಜೀವೋ ನ ಕರೋತಿ ಧರ್ಮಂ
ಸ ಏವ ಪಾಪೀ ಕೃಪಣೋಪಿ ವತ್ಸ
ಸ ಏವ ಮೂರ್ಖಃ ಖಲು ರಂಧ್ರಗಾಮಿ ॥

ಪಾಪಿಗಳು ದಾನ ಧ್ಯಾನ ಪೂಜೆಯನ್ನು ಮಾಡುವುದಿಲ್ಲ. ಪರನಿಂದೆಯನ್ನು ಮಾಡುತ್ತಿರುತ್ತಾರೆ. ತೀರ್ಥಯಾತ್ರೆಯನ್ನು ಮಾಡುವುದಿಲ್ಲ. ತಪಸ್ಸನ್ನಾಚರಿಸುವುದಿಲ್ಲ. ಆತ್ಮ ಕಲ್ಯಾಣವನ್ನು ಮಾಡಿಕೊಳ್ಳುವುದಿಲ್ಲ. ಧರ್ಮಪ್ರಚಾರವನ್ನು ಮಾಡುವುದಿಲ್ಲ, ಬೇರೆಯವರ ಧರ್ಮ ಪ್ರಚಾರದಲ್ಲಿ ತೊಂದರೆಯನ್ನು ಮಾಡುತ್ತಾರೆ. [illegible] ಯನ್ನು ಸುಧಾರಿಸಿಕೊಳ್ಳುವುದಿಲ್ಲ. ಮತ್ತೊಬ್ಬರ ಗತಿಯನ್ನು ಸುಧಾರಿಸಲು ಬಿಡುವುದಿಲ್ಲ. ಉತ್ತಮ ಕ್ಷಮಾದಿ ಧರ್ಮಗಳನ್ನು ತಾವು ಧರಿಸುವುದಿಲ್ಲ. ಬೇರೆಯವರಿಗೂ ತೊಂದರೆಯನ್ನು ಕೊಡುತ್ತಾರೆ. ಆದುದರಿಂದ ಭವ್ಯರೇ ! ನೀವು ವಿಚಾರ ಮಾಡಿರಿ. ಪಾಪವಾಸನೆಯ ತ್ಯಾಗವನ್ನು ಮಾಡಿರಿ. ಪಾಪದಿಂದ ಎಷ್ಟು ದುಃಖವನ್ನು ಭೋಗಿಸಬೇಕಾಗುತ್ತದೆಂಬ ವಿಚಾರವನ್ನು ಮಾಡಿರಿ. ಮನಸ್ಸನ್ನು ಪವಿತ್ರವನ್ನಾಗಿ ಮಾಡಿರಿ. ಪರಬ್ರಹ್ಮಸ್ವರೂಪನಾದ ಆತ್ಮನನ್ನು ಚಿಂತಿಸಿರಿ. ಅವನು ಹೀಗಿದ್ದಾನೆ.

ಆನಂದಂ ಬ್ರಹ್ಮಣೋರೂಪಂ ನಿಜದೇಹೇ ವ್ಯವಸ್ಥಿತಂ
ಧ್ಯಾನಹೀನಾ ನ ಪಶ್ಯಂತಿ ಜಾತ್ಯಂಧಾ ಇವ ಭಾಸ್ಕರಂ

ಪರಮಾನಂದಸ್ತೋತ್ರಂ.

ಹುಟ್ಟು ಕುರುಡನು ಸೂರ್ಯನನ್ನು ಕಾಣಲು ಸಾಧ್ಯವಿಲ್ಲ ಅದೇ ಪ್ರಕಾರವಾಗಿ ಧ್ಯಾನರಹಿತರಾದವರು ತನ್ನ ಶರೀರದಲ್ಲಿರುವ ಪರಬ್ರಹ್ಮ ಸ್ವರೂಪನಾದ ಆತ್ಮನನ್ನು ಕಾಣಲು ಸಾಧ್ಯವಿಲ್ಲ. ಯೋಗಿಗಳು ಪರಮಾ

ಒಪ್ಪಿಗೆಯಾಯ್ತು. ಅವನು ಆ ಸಾಧ್ವಿಯನ್ನು ಕೊಲ್ಲಲು ಆಜ್ಞಾಪಿಸಿದನು. ಕೊಲೆಗಾರರು ಬಂದು ಅವಳನ್ನು ಕೊಲ್ಲಲು ಶಸ್ತ್ರಪ್ರಯೋಗ ಮಾಡುತ್ತಿರುವಾಗ ದೇವತೆಯು ಅವರ ಕೈಗಳನ್ನು ಅಲ್ಲಿಯೇ ಕೀಲಿಸಿತು. ಈ ಎಲ್ಲಾ ವಿಷಯಗಳನ್ನು ನೋಡಿ ರಾಜನೂ ಆಶ್ಚರ್ಯಚಕಿತನಾದನು. ಧ್ಯಾನದ ಮಹಿಮೆಯನ್ನು ನೋಡಿರಿ. ಇಹಲೋಕದಲ್ಲಿ ಕೀರ್ತಿಯು ಬೆಳೆಯುತ್ತದೆ. ಪರಲೋಕದಲ್ಲಿ ದುರ್ಗತಿಯು ನಾಶವಾಗುತ್ತದೆ. ಆದುದರಿಂದ ಭವ್ಯರೇ, ನೀವು ಭಗವಂತನ ಭಕ್ತಿಯನ್ನು ಮಾಡಿರಿ.

**ಏಕಾಪಿ ಸಮರ್ಥೇಯಂ ಜಿನಭಕ್ತಿರ್ದುರ್ಗತಿಂ ನಿವಾರಯಿತುಂ**
**ಪುಣ್ಯಾನಿ ಚ ಪೂರಯಿತುಂ ದಾತುಂ ಮುಕ್ತಿಶ್ರಿಯಂ ಕೃತಿನಃ ॥**

ಜಿನೇಂದ್ರ ಭಕ್ತಿಯು ದುರ್ಗತಿಯನ್ನು ನಾಶ ಮಾಡುತ್ತದೆ. ಸಮ್ಯಕ್ತ್ವವನ್ನು ವೃದ್ಧಿಗೊಳಿಸುತ್ತದೆ. ನೋಡಿ, ಆ ಸಾಧ್ವಿಯು ನಿರ್ದೋಷವಾಗಿ ಆತ್ಮ ವಿಚಾರದಲ್ಲಿದ್ದುದರಿಂದ ದೇವತೆಗಳೂ ಸಹಾಯಕರಾಗಿ ಅವಳು ಲೋಕ ವಂದ್ಯಳಾದಳು. ರಾಜನೂ ಮತ್ತು ಇತರರೂ ಅವಳನ್ನು ಸ್ತುತಿಸಿದರು. ಎಲ್ಲರ ಹೃದಯದಲ್ಲಿಯೂ ಧರ್ಮದ ಮೇಲೆ ಅವಿಚಲ ಭಕ್ತಿ ಹುಟ್ಟಿತು. ರಾಜನಿಗೆ ಈ ಎಲ್ಲಾ ವಿಷಯಗಳನ್ನು ನೋಡಿ ಸಂಸಾರದಿಂದ ವೈರಾಗ್ಯವಾಗಿ ತನ್ನ ಮಗನಿಗೆ ಪಟ್ಟಕಟ್ಟಿ ಆ ಸಾಧ್ವಿಯೊಡನೆ ದೀಕ್ಷೆಯನ್ನು ತೆಗೆದುಕೊಂಡನು. ಅನೇಕರು ದೀಕ್ಷೆಯನ್ನು ಪಡೆದರು. ನಂತರ ಯಥಾಶಕ್ತಿ ತಪಶ್ಚರ್ಯೆಯನ್ನು ಮಾಡಿ ಕರ್ಮ ನಿರ್ಜರೆಯನ್ನು ಮಾಡಿಕೊಂಡು ಸುಗತಿಯನ್ನು ಪಡೆದರು.

ಆದುದರಿಂದ ಭವ್ಯರೇ ! ನೀವು ಆತ್ಮಸಿದ್ಧಿಗೋಸ್ಕರವಾಗಿ ಮನಸ್ಸನ್ನು ನಿರ್ಮಲ ಮಾಡಿ ಅದರಲ್ಲಿ ತ್ಯಾಗ ಧರ್ಮವನ್ನು ಧರಿಸಿರಿ. ಮತ್ತು ಆತ್ಮ ಸಿದ್ಧಿಯನ್ನು ಮಾಡಿಕೊಂಡು ಮೋಕ್ಷವನ್ನು ಪಡೆಯಿರಿ. ಇದು ಆಚಾರ್ಯರ ಉಪದೇಶವಾಗಿದೆ. ಈ ಪ್ರಕಾರ ತ್ಯಾಗಧರ್ಮವನ್ನು ವಿವೇಚಿಸಲಾಗಿದೆ.

**ಉತ್ತಮ ತ್ಯಾಗಧರ್ಮಾಯ ನಮಃ**



ಶ್ರೀ ೧೦೫ ಪೂಜ್ಯ ಕ್ಷು. ಅನಂತಮತಿ ಅಮ್ಮನವರು.

# ಉತ್ತಮ ಆಕಿಂಚಿನ್ಯ ಧರ್ಮಾಯ ನಮಃ

## ಮಂಗಲಾಚರಣೆ.

**ಮಿಥ್ಯಾಜ್ಞಾನತಮೋವೃತಾಲೋಕಿಕ ಜ್ಯೋತಿರಮಿತಗಮಗಯೋಗಿ**
**ಸಾಂಗೋಪಾಂಗಮಜೇಯಂ ಜೈನಂ ವಚನಂ ಸದಾ ವಂದೇ ॥**

ದಶಭಕ್ತಿ.

ಮಿಥ್ಯಾಜ್ಞಾನವೆಂಬ ಕತ್ತಲೆಯನ್ನು ನಾಶ ಮಾಡುವುದಕ್ಕೆ ಕೇವಲ ಜ್ಞಾನವೆಂಬ ಜ್ಯೋತಿಯು ಸಮರ್ಥನಾಗಿದೆ. ಹಾಗೆಯೇ ಎಲ್ಲಾ ಸಮರ್ಥಗಳನ್ನು ತಿಳಿಯಲಿಕ್ಕೆ ಶ್ರುತಜ್ಞಾನವೆಂಬ ಸಾಧನವಿದೆ. ಹೀಗೆ ಸಾಂಗೋಪಾಂಗವಾದ ಜಿನೇಂದ್ರ ಭಗವಂತನ ದಿವ್ಯವಾಣಿಗೆ ನಾನು ಸದಾ ನಮಸ್ಕಾರವನ್ನು ಮಾಡುವೆನು.

**ಉಪಾತ್ತೇಷ್ವಪಿ ಶರೀರಾದಿಷು ಸಂಸ್ಕಾರಾಪೋಹಾಯ ಮಮೇದಮಿತ್ಯಭಿಸಂಧಿನಿವೃತ್ತಿರಾಕಿಂಚಿನ್ಯಂ ನಾಸ್ತಿ ಕಿಂಚನಾಸ್ಯಾಕಿಂಚನಃ ತಸ್ಯ ಭಾವಃ ಕರ್ಮವಾ ಆಕಿಂಚಿನ್ಯಂ ॥**

ಸರ್ವಾರ್ಥಸಿದ್ಧಿ.

ತನ್ನ ಜ್ಞಾನದರ್ಶನ ಸ್ವಭಾವವನ್ನು ಬಿಟ್ಟು ಬೇರೆ ಯಾವುದೂ ನನ್ನದಲ್ಲ. ನಾನೂ ಅನ್ಯ ದ್ರವ್ಯದ ಸ್ವರೂಪದಲ್ಲಿಲ್ಲ. ಅಥವಾ ಅನ್ಯ ದ್ರವ್ಯದವನಲ್ಲ, ಬೇರೆ ಯಾವ ದ್ರವ್ಯವೂ ನನ್ನದಲ್ಲ. ಈ ಪ್ರಕಾರದ ಅನುಭವಕ್ಕೆ ಆಕಿಂಚಿನ್ಯವೆಂದು ಹೇಳುತ್ತಾರೆ. ಹೇ ಆತ್ಮನ್, ನೀನು ಈ ಆತ್ಮನನ್ನು ದೇಹದಿಂದ ಭಿನ್ನ, ಜ್ಞಾನಮಯ, ಉಪಮಾರಹಿತ, ಸ್ಪರ್ಶರಸಗಂಧ ವರ್ಣರಹಿತ, ಸ್ವಾಧೀನ, ಜ್ಞಾನಾನಂದ ಸುಖದಿಂದ ಪೂರ್ಣ, ಪರಮ ಅತೀಂದ್ರಿಯ, ನಿರ್ಭಯನೆಂದು ಅನುಭವಿಸು. ಯಥಾರ್ಥವಾಗಿ ವಿಚಾರ ಮಾಡಿದರೆ ಆತ್ಮನು ರೂಪಾತೀತ, ರಸಾತೀತ ಮತ್ತು ಅಮೂರ್ತಿಕನಾಗಿದ್ದಾನೆ.

ವಣ್ಣರಸಪಂಚಗಂಧಾ ದೋಪಾಸಾ ಅಠ್ಠ ನಿಚ್ಛಯಾ ಜೀವೇ
ಣೋ ಸಂತಿ ಅಮುತ್ತಿ ತದೋ ವವಹಾರಾ ಮುತ್ತಿ ಬಂಧಾದೋ

ದ್ರವ್ಯಸಂಗ್ರಹ

ಈ ಜೀವನೊಡನೆ ಮೂರ್ತಿಕ ಕರ್ಮದ ಬಂಧವಾದ್ದರಿಂದ ವ್ಯವಹಾರ ನಯದಿಂದ ಈ ಜೀವನು ಮೂರ್ತಿಕನೆಂದು ಹೇಳಲಾಗಿದೆ. ಈ ಶರೀರವು ನನ್ನದಲ್ಲ. ದೇಹವು ರಕ್ತ, ಎಲುಬು, ಮಾಂಸ, ಚರ್ಮದಿಂದ ನಿರ್ಮಿತವಾಗಿದ್ದು ಜಡ ಮತ್ತು ಅಚೇತನವಾಗಿದೆ. ಈ ದೇಹದಿಂದ ನಾನು ಬೇರೆಯಾಗಿದ್ದೇನೆ ಬ್ರಾಹ್ಮಣ, ಕ್ಷತ್ರಿಯ ಮೊದಲಾದ ಜಾತಿಗಳು ಶರೀರದ ನಿಮಿತ್ತದಿಂದ ಆಗುತ್ತವೆ. ಅವು ನನ್ನದಲ್ಲ. ಜ್ಞಾನಿಯು ಈ ಪ್ರಕಾರ ವಿಚಾರ ಮಾಡುತ್ತಾನೆ.

ನ ಕುಲಂ ನ ಗೋತ್ರಂ ನ ವರ್ಣಂ ನ ಮುದ್ರಾ
ಚಿದಾನಂದ ರೂಪಂ ನಮೋ ವೀತರಾಗಂ

ಕುಲ ಜಾತಿ ವರ್ಣ ಮತ್ತು ಮುದ್ರೆಗಳು ನಾಮಕರ್ಮದ ಉದಯದಿಂದ ಆಗುತ್ತಿರುವ ಜಡ ಪುದ್ಗಲಗಳ ಪರ ಪರಿಣತಿಗಳಾಗಿವೆ. ನಾನು ಅಖಂಡ, ಅವಿನಾಶೀ ಜ್ಞಾನದರ್ಶನಮಯನಾಗಿದ್ದೇನೆ. ಇವೆಲ್ಲಾ ಕರ್ಮದ ಉದಯದಿಂದ ಆಗುತ್ತವೆ. ಕರ್ಮದ ಉದಯದಿಂದ ಆಗುತ್ತಿರುವ ಪುದ್ಗಲಪರಿಣತಿಯು ಪಾಪಪುಣ್ಯ ರೂಪದಿಂದ ವಿಭಾಗಿಸಲ್ಪಡುತ್ತದೆ. ಜ್ಞಾನಿಗಳು ಸದಾ ಈ ಪ್ರಕಾರ ತಿಳಿಯುತ್ತಾರೆ.

ಜ್ಞಾನೀ ಕರಮ ಅನೇಕಕೋ ಕರೇ ನ ಭೋಗೇ ಆಪ
ಕೇವಲಜಾನೇ ಕರಮ ಫಲ ಬಂಧ ಪುಣ್ಯ ಅರು ಪಾಪ ॥

ಸಮಯಸಾರ.

ಜ್ಞಾನಿಯು ಸಮಸ್ತ ಕರ್ಮಗಳ ಕರ್ತಾ ಮತ್ತು ಭೋಕ್ತನಾದಾಗ್ಯೂ ಕೂಡ ಕರ್ಮದ ಫಲಗಳನ್ನು ಪುಣ್ಯಪಾಪ ರೂಪವಾಗಿವೆ, ಎಂದು ತಿಳಿಯುತ್ತಾನೆ. ಆದರಿಂದ ದೀರ್ಘ ಸಮಯದ ಬಂಧವನ್ನು ಮಾಡುವುದಿಲ್ಲ. ಈ

ಪ್ರಕಾರ ಸಂಸಾರದ ವಿಷಯದಲ್ಲಿ ವಿರಕ್ತ ಪರಿಣಾಮವನ್ನಿಡುವುದಕ್ಕೆ ಆಕಿಂಚಿನ್ಯವೆಂದು ಹೆಸರು.

ಸ್ತ್ರೀ ಪುರುಷ ನಪುಂಶಕ ಇತ್ಯಾದಿ ಲಿಂಗ ಭೇದಗಳು ಶರೀರದ ಸಂಬಂಧವಾಗಿ ಆಗುತ್ತವೆ. ಆತ್ಮನಲ್ಲಿ ಈ ಭೇದವಿಲ್ಲ. ಬೆಳ್ಳಗಿರುವುದು, ಕಪ್ಪಾಗಿರುವುದು, ಸಾಹುಕಾರನಾಗಿರುವುದು, ದರಿದ್ರನಾಗಿರುವುದು, ಸ್ವಾಮಿ, ಸೇವಕ, ಪಂಡಿತ, ಮೂರ್ಖ ಮೊದಲಾದ ಎಲ್ಲಾ ವ್ಯವಹಾರಗಳು ಕರ್ಮದ ಉದಯದಿಂದ ಆದ ಶರೀರಕ್ಕೆ ಸಂಬಂಧಪಟ್ಟದ್ದಾಗಿವೆ. ನಾನು ಜ್ಞಾಯಕನಾಗಿದ್ದೇನೆ. ದೇಹ ಸಂಬಂಧವಾದ ಸ್ವರೂಪವು ನನ್ನದಲ್ಲ. ನನ್ನ ಸ್ವರೂಪವು ಅನ್ಯ ದ್ರವ್ಯದ ಉಪಯೋಗದಿಂದ ರಹಿತವಾಗಿದೆ. ಶೀತ ಉಷ್ಣ, ಮೃದು ಕಠೋರ, ಸ್ನಿಗ್ಧ ರೂಕ್ಷ, ಹಗುರ ಭಾರ ಮೊದಲಾದ ಸ್ಪರ್ಶಗಳು ಪುದ್ಗಲ ಸ್ವರೂಪಗಳಾಗಿವೆ. ನನ್ನ ಸ್ವರೂಪವಲ್ಲ. ನನ್ನ ಸ್ವರೂಪವು ನನ್ನದೇ ಆಗಿದೆ. ಜ್ಞಾನ ಸ್ವರೂಪವಾಗಿದೆ. ಹೀಗೆ ಜ್ಞಾನಿಗಳು ಆತ್ಮ ಸ್ವರೂಪವನ್ನು ವಿಚಾರ ಮಾಡುತ್ತಿರುತ್ತಾರೆ.

ಆಪ ಆಪ ಅನುಭವ ಕರೆ ಕೋ ಫಲ ಸೋ ನ ಲಹಂತ
ವಲ ಜ್ಞಾನ ಉಪಾಯ ಕರ ಶಿವರಮಣೀ ವಿಲಸಂತ
ಸಮಯಸಾರ.

ಹೀಗೆ ಜ್ಞಾನಿಗಳು ತನ್ನ ಆತ್ಮ ಸ್ವರೂಪವನ್ನು ವಿಚಾರ ಮಾಡಿ ಆತ್ಮ ಸ್ವರೂಪ ಧ್ಯಾನವನ್ನು ಮಾಡಿ ಕರ್ಮನಿರ್ಜರೆಯನ್ನು ಮಾಡಿಕೊಳ್ಳುತ್ತಾರೆ. ಇಂಥಹ ಮುನಿಗಳಿಗೆ ಆತ್ಮಧ್ಯಾನದ ಸಾಮರ್ಥ್ಯದಿಂದ ಕಠಿನ ಸಾಧ್ಯವಾದ ಕಾರ್ಯಗಳೂ ಸಹಜ ಸಾಧ್ಯವಾಗುತ್ತವೆ. ಆತ್ಮಧ್ಯಾನದಂತಹ ಸಾಮರ್ಥ್ಯವು ಲೋಕದ ಯಾವ ವಿಷಯದಲ್ಲಿಯೂ ಇಲ್ಲ.

ಒಂದು ಸಾರಿ ಒಂದು ಭಯಂಕರ ಕಾಡಿನಲ್ಲಿ ಒಬ್ಬ ಮುನಿಗಳು ಧ್ಯಾನಲೀನರಾಗಿದ್ದರು. ಅವರ ಧ್ಯಾನ ಸಾಮರ್ಥ್ಯದಿಂದ ಅಲ್ಲಿ ಒಣಗಿದ್ದ

ಮರಗಳಲ್ಲಿಯೂ ಅಂಕುರ ಪಲ್ಲವಗಳು ಹುಟ್ಟಿದವು. ನದೀ ಸರೋವರ ಭಾವಿ ಮೊದಲಾದವುಗಳು ಒಣಗಿದ್ದರೂ ಅವುಗಳಲ್ಲಿ ನೀರು ತುಂಬಿ ತುಳು ಕುತ್ತಿತ್ತು. ಆ ಕಾಡಿನಲ್ಲಿದ್ದ ಪಶುಪಕ್ಷಿಗಳು ಪರಸ್ಪರ ವೈರ ವಿರೋಧ ವನ್ನು ಬಿಟ್ಟ ಆ ಮುನೀಶ್ವರರ ಸಮೀಪದಲ್ಲಿ ಬಂದು ಕ್ರೀಡಿಸುತ್ತಿದ್ದವು. ಅಲ್ಲಿ ಸಮೀಪದಲ್ಲಿದ್ದ ಎಲ್ಲಾ ಪ್ರಾಣಿಗಳ ದುಃಖವು ದೂರವಾಗಿ ಅವುಗಳು ಆನಂದದಲ್ಲಿದ್ದವು ಆಗ ಅಲ್ಲಿಯ ಜನರು ಮತ್ತು ರಾಜನೂ ಅಲ್ಲಿ ಬಂದು ಈ ವಿಚಿತ್ರ ಶೋಭೆಗಳನ್ನು ನೋಡಿ ಇವತ್ತು ಈ ಪ್ರಕಾರ ಪರಿವರ್ತನೆ ಯಾಗಲು ಕಾರಣವೇನೆಂದು ವಿಚಾರಿಸಿದರು. ಆ ಕಾಡಿನಲ್ಲಿ ಆದ ಶೋಭೆ ಗಳನ್ನು ನೋಡುತ್ತಾ ವಿಚಾರ ಮಾಡ ತೊಡಗಿದರು. ಯಾವಾಗಲೂ ದುಃಖದ ವಾತಾವರಣದಲ್ಲಿರುವ ಜೀವಗಳು ಈಗ ಇಷ್ಟು ಆನಂದದಲ್ಲಿರಲು ಕಾರಣವೇನು ? ಎಂದು ವಿಚಾರ ಮಾಡಿ ಕುಂತಿದ್ದರು. ಇಷ್ಟರಲ್ಲಿ ದೇವೇಂದ್ರನು ಅಕೃತ್ರಿಮ ಚೈತ್ಯಾಲಯದ ವಂದನೆಯನ್ನು ಮಾಡಿ ಹಿಂತಿರುಗಿ ಹೋಗುತ್ತಿದ್ದಾಗ ಆ ಕಾಡಿನಲ್ಲಿದ್ದ ಮುನೀಶ್ವರರ ದರ್ಶನ ಮಾಡಿ ಸ್ತುತಿ ಮಾಡತೊಡಗಿದನು. ಆ ಸಮಯದಲ್ಲಿ ಮುನಿಗಳ ಧ್ಯಾನವು ಮುಗಿದು ಅವರು ದೇವೇಂದ್ರನನ್ನು ಆಶೀರ್ವದಿಸಿದರು. ಆಗ ದೇವೇಂದ್ರನು ರಾಜನೇ ಮೊದಲಾದ ಶ್ರಾವಕರನ್ನು ಸಂಬೋಧಿಸಿ ' ಸಜ್ಜನರೇ, ನಿಮಗೆ ಈ ಕಾಡಿನಲ್ಲಿ ಆದ ಶೋಭೆಯು ಯಾಕೆ ಆಗಿದೆ ಎಂಬ ಸಂದೇಹವು ಬಂದಿದೆ. ಈ ಸೌಂದರ್ಯಕ್ಕೆ ಈ ಮುನೀಶ್ವರರ ನಿರ್ಮಲವಾದ ಧ್ಯಾನವೇ ಕಾರಣವಾಗಿದೆ. ಆತ್ಮ ಧ್ಯಾನದ ಪ್ರಭಾವದಿಂದ ಕೇವಲ ಜ್ಞಾನವ ಉದಯುವಾಗುತ್ತದೆ. ಬಾಹ್ಯ ಪದಾರ್ಥಗಳ ಪ್ರಾಪ್ತಿಯಂತೂ ದೊಡ್ಡ ದಲ್ಲ. ಇದನ್ನ ರಾಜ ಮೊದಲಾದವರು ಕೇಳಿ ಆಶ್ಚರ್ಯಚಕಿತರಾದರು. ಈ ಮುನಿಗಳು ಆತ್ಮ ಸ್ವರೂಪವನ್ನು ಬಿಟ್ಟು ಪರಭಾವಗಳನ್ನ ಸ್ಪರ್ಶವೂ ಕೂಡ ಮಾಡುವುದಿಲ್ಲ. ಇಂಥಹ ಮುನಿಗಳಿಗೆ ಆಕಿಂಚನ್ಯ ಭಾವನೆಯಾ ಗುತ್ತದೆ. ಇಂಥಹವರಿಗೆ ವೈಭವ ಸುಖಗಳು ಲಭಿಸುತ್ತವೆ. ಅವರು ಆ

ಸುಖಗಳನ್ನು ಆತ್ಮ ಧ್ಯಾನದ ಪ್ರಭಾವದಿಂದ ಅನುಭವಿಸುತ್ತಾರೆ. ಆತ್ಮ ಸ್ವರೂಪವನ್ನು ಬಿಟ್ಟು ಹೊರಗೆ ಸುಖವೇ ಇಲ್ಲ. ಆತ್ಮಸ್ವರೂಪದಲ್ಲಿಯೇ ಎಲ್ಲಾ ಸುಖಗಳ ಅನುಭವವಾಗುತ್ತದೆ.

ವರಗುರು ಪಂಚಕಂ ವರತಪಶ್ಚರಣಾ ಗಳಿರ್ಪುವಲ್ಲಿ ಸ- |
ದ್ಗುರು ಗುಣಶೀಲ ಸಂಯಮ ಸುತೀರ್ಥ ಪವಿತ್ರತೆಯಲ್ಲಿ ತೋರ್ಕುಮು
ತ್ತರಗುಣರಾಶಿ ಮೂಲಗುಣವೃಂದಮಿರ್ದಪುದಲ್ಲಿ ನಿನ್ನ ಚಿ-
ತ್ಪರಿಣತೆಯಲ್ಲಿ ಟ್ಟಸೊಳಗೆಂದೆಯಲಾ ಅಪರಾಜಿತೇಶ್ವರಾ ||

ಅಪರಾಜಿತ ಶತಕ.

ಆತ್ಮ ಸ್ವರೂಪವನ್ನು ಅನುಭವಿಸುವವರಿಗೆ ಆತ್ಮ ಸ್ವರೂಪದಲ್ಲಿಯೇ ಪಂಚ ಪರಮೇಷ್ಠಿಗಳು ಕಾಣುತ್ತಾರೆ. ಉತ್ತಮವಾದ ತಪಶ್ಚರ್ಯೆಯೂ ಆತ್ಮಸ್ವರೂಪದಲ್ಲಿಯೇ ಇದೆ. ಉತ್ತಮ ತೀರ್ಥವೂ ಅಲ್ಲಿಯೇ ಇದೆ. ಜಗತ್ತಿನಲ್ಲಿರುವ ಎಲ್ಲಾ ಸುಖಗಳೂ ಅಲ್ಲಿಯೇ ಇವೆ. ಇಂಥಹ ಅಜಿಂಕ್ಯ, ಶಕ್ತಿಶಾಲೀ, ವೀರ್ಯಶಾಲೀ, ಅನಂತ ಮಹಿಮೆಯುಳ್ಳ, ಪರಮ ಪವಿತ್ರ, ತ್ರಿಲೋಕವಂದ್ಯ, ನಡೆಯುವ, ನುಡಿಯುವ, ಅನೇಕ ಕಾರ್ಯಗಳನ್ನು ಮಾಡುವ, ಜ್ಞಾತಾ, ದ್ರಷ್ಟಾ, ಅನಂತ ಸುಖಗಳ ಭೋಕ್ತಾ ಆತ್ಮನೇ ಆಗಿರುತ್ತಾನೆ. ಆ ಆತ್ಮನ ಧ್ಯಾನದಿಂದ ಹೊರಗೆ ಯಾವ ಸುಖವೂ ಇಲ್ಲ. ಸುಖವು ಏನಿದೆಯೋ ಅದು ಚೈತನ್ಯ ಸ್ವರೂಪದಲ್ಲಿಯೇ ಇದೆ. ಆ ಚೈತನ್ಯವು ತನ್ನ ಸ್ವರೂಪದಲ್ಲಿಯೇ ಲೀನವಾಗಿವೆ. ಈ ಮುನಿಗಳಲ್ಲಿ ಮೂರು ಲೋಕದ ಎಲ್ಲ ಸುಖಗಳೂ ಇವೆ. ಈ ಪ್ರಕಾರ ದೇವೇಂದ್ರನು ಆ ಮುನಿಗಳ ಗುಣಸ್ತುತಿಯನ್ನು ಮಾಡಿ ‘ ಸ್ವಾಮಿನ್ ! ನನಗೆ ನಿಮ್ಮಂತೆ ಆತ್ಮ ಸಿದ್ಧಿಯನ್ನು ಮಾಡಿಕೊಳ್ಳುವ ಸಮಯವು ಎಂದು ಬರುವದು ’ ಎಂದು ಪ್ರಾರ್ಥಿಸಿದನು. ಆಗ ಮುನಿಗಳು ‘ಭದ್ರ, ನೀನು ಆಸನ್ನ ಭವ್ಯನಾಗಿರುತ್ತೀ, ನೀನು ಬೇಗನೇ ಜನ್ಮಮರಣದಿಂದ ಬಿಡುಗಡೆಯನ್ನು ಹೊಂದುವವನಾಗಿರುತ್ತೀ, ಎಂದರು. ಆಗ ಅವನಿಗೆ ಆನಂದವಾಯ್ತು. ಹರ್ಷದಿಂದ ಮುನಿಗ

ಳಿಗೆ ಪುನಃ ನಮಸ್ಕಾರ ಮಾಡಿ ಸ್ವರ್ಗಕ್ಕೆ ಹೊರಟು ಹೋದನು. ಇತ್ತ ರಾಜನೇ ಮೊದಲಾದವರು ಮುನಿಗಳ ಸಮೀಪಕ್ಕೆ ಬಂದು 'ಗುರುದೇವ! ನಿಮ್ಮ ಆತ್ಮಾನುಭವಾಮೃತವನ್ನು ನಮಗೂ ಕೊಟ್ಟು ನಮ್ಮ ಜೀವನವನ್ನು ಪಾವನವನ್ನಾಗಿ ಮಾಡಿರಿ.' ಎಂದು ಪ್ರಾರ್ಥಿಸಿ ಸಂಸಾರದಿಂದ ವಿರಕ್ತರಾಗಿ ಜೈನ ದೀಕ್ಷೆಯನ್ನು ಪಡೆದುಕೊಂಡರು. ನಂತರ ಯಥಾಶಕ್ತಿ ತಪಸ್ಸನ್ನಾಚರಿಸಿ ಸದ್ಗತಿಯನ್ನು ಪಡೆದು ಕೊಂಡರು. ಆದುದರಿಂದ ಭವ್ಯರೇ ! ಆತ್ಮ ಧ್ಯಾನದಲ್ಲಿ ಅತುಲ ಶಕ್ತಿ ಇದೆ. ಆತ್ಮನೇ ನಮ್ಮ ಮುಖ್ಯ ದ್ರವ್ಯವಾಗಿದೆ. ಆ ಆತ್ಮ ದ್ರವ್ಯವನ್ನು ಹುಡುಕಿರಿ- ಮತ್ತು ಅದರಲ್ಲಿ ಸ್ಥಿರವಾಗಿರಲು ಪ್ರಯತ್ನಿಸಿರಿ. ಆ ಆತ್ಮ ಸ್ವರೂಪದಲ್ಲಿಯೇ ಸ್ಥಿರವಾಗಿದ್ದು ಆತ್ಮಾಮೃತಪಾನವನ್ನು ಮಾಡಿರಿ. ಇದೇ ಆಕಿಂಚಿನ್ಯ ಭಾವನೆಯಾಗಿದೆ ಈ ಭಾವನೆ ಇಲ್ಲದೆ ಆತ್ಮಸಿದ್ಧಿಯಾಗಲಾರದು. ಆದುದರಿಂದ ಪ್ರಯತ್ನ ಪೂರ್ವಕವಾಗಿ ಆತ್ಮ ಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಆಚಾರ್ಯರ ಉಪದೇಶವಾಗಿದೆ.

ಆತ್ಮ ಸ್ವರೂಪದಲ್ಲಿರುವ ಮುನಿಗಳು ಹೀಗೆ ವಿಚಾರ ಮಾಡುತ್ತಾರೆ ಇಂದ್ರಿಯಗಳು ಪುದ್ಗಲ ಕರ್ಮದಿಂದ ನಿರ್ಮಿತವಾಗಿವೆ. ಆದರೆ ನಾನು ಅವಿನಶ್ವರ, ನಿರ್ಭಯ, ಅಖಂಡ, ಆದಿ ಅಂತರಹಿತ, ಶುದ್ಧ ಜ್ಞಾನಮಯನಾಗಿದ್ದೇನೆ. ಹೀಗೆ ವಿಚಾರ ಮಾಡಿ ಯಾವಾಗಲೂ ಪರಮಾರ್ಥ ಧ್ಯಾನದಲ್ಲಿ ಮುನಿಗಳು ಲೀನರಾಗಿರುತ್ತಾರೆ. ಯಾವುದಾದರೂ ವ್ಯವಹಾರ ಕಾರ್ಯವನ್ನು ಮಾಡುತ್ತಿರುವಾಗ ತನ್ನ ಆತ್ಮ ಸ್ವರೂಪದ ವಿಚಾರವನ್ನು ಮಾಡುತ್ತಲೇ ಆ ಕಾರ್ಯಗಳನ್ನು ಮಾಡುತ್ತಾರೆ. ಇಂಥಹ ಯೋಗಿಗಳು ಆಹಾರ ತೆಗೆದುಕೊಳ್ಳುವಾಗಲೂ ಆತ್ಮಸ್ವರೂಪದಲ್ಲಿ ಲೀನರಾಗಿರುತ್ತಾರೆ. ಆಹಾರ ಶೋಧನೆ ಮಾಡುತ್ತಿರುವಾಗ ಅವರು ಆರನೇ ಗುಣಸ್ಥಾನದಲ್ಲಿ ಬಂದರೂ ಆಹಾರ ತೆಗೆದುಕೊಳ್ಳುವಾಗ ಏಳನೇ ಗುಣಸ್ಥಾನದಲ್ಲಿ ಹೋಗುತ್ತಾರೆ. ಆತ್ಮಧ್ಯಾನದಲ್ಲಿರುವ ಯೋಗಿಗಳ ಎಲ್ಲಾ ಕ್ರಿಯೆಗಳು ಕರ್ಮ ನಿರ್ಜರೆಗೆ ಕಾರಣವಾಗುತ್ತವೆ. ಇಂಥಹ ಮುನಿಗಳ ಕೈಯಲ್ಲಿ ನೀರಸ ಅನ್ನವನ್ನು ಹಾಕಿದರೂ ಅದು ಸರಸವಾಗುತ್ತದೆ. ನೋಡಿ, ಏನು ಹೇಳುತ್ತಾರೆ.

ನಿರಸಾನ್ನವವರ ಹಸ್ತಕೆ ಬಂದರಾಕ್ಷಣ ಸುರಸಾನ್ನವಹುದ ದುಸಹಜಾ । ಭರತೇಶನಿತ್ತನ್ನ ವಿಂತಂತು ಸೊಗಸಿತೆಂದೆದೊರೆಯ ಬಹುದೆ ಜಿನಬಲ್ಲ ॥

ಇಂಥಹ ಆತ್ಮಯೋಗಿಗಳು ಭರತೇಶ್ವರನ ಅರಮನೆಗೆ ಆಹಾರಾರ್ಥವಾಗಿ ಬಂದಿದ್ದರು. ಅವರಿಗೆ ಆತ್ಮಧ್ಯಾನದ ಸಾಮರ್ಥ್ಯದಿಂದ ನೇತ್ರ ಋದ್ಧಿಯು ಪ್ರಸ್ತವಾಗಿತ್ತು. ಭರತೇಶ್ವರನು ಅವರ ಕೈಯಲ್ಲಿ ಇಕ್ಕಿದ ಆಹಾರವು ಅವರ ಸ್ಪರ್ಶದಿಂದ ಮತ್ತು ಕಣ್ಣಿನ ದೃಷ್ಟಿಯಿಂದ ಅನೇಕ ಪಕ್ವಾನ್ನದ ರೂಪವಾಗಿ ಪರಿಣಮಿಸಿತು. ಆತ್ಮ ಧ್ಯಾನದ ಮಹಿಮೆಯು ಅಚಿಂತ್ಯವಾಗಿದೆ. ಇಂಥಹ ಯೋಗಿಗಳು ಜಗತ್ತಿಗೇನೆಯೋ ಉಪಕಾರ ಮಾಡುತ್ತಾರೆ.

ಒಂದು ಸಾರಿ ರಾಣಿಗೆ ಮಹಾರೋಗವಾಯ್ತು. ರಾಜನು ಅವಳ ಕುರೂಪವನ್ನು ನೋಡಿ ಅವಳನ್ನು ಅರಮನೆಯಿಂದ ಹೊರಗೆ ಹಾಕಿದನು. ಅವಳು ಅತ್ಯಂತ ದುಃಖದಿಂದ ನನಗೆ ಇನ್ನು ಯಾರು ಶರಣ, ಯಾರು ನನ್ನನ್ನು ರಕ್ಷಿಸುವರು ಎಂದು ದುಃಖದಿಂದ ಕಾಡಿನಕಡೆ ಹೋದಳು ಅಲ್ಲಿ ಮರಗಳ ಎಲೆ ಫಲಗಳನ್ನು ತಿಂದು ಜೀವಿಸುತ್ತಿದ್ದಳು. ಕೆಲವು ದಿವಸಗಳ ನಂತರ ದಿವ್ಯ ಯೋಗಿಗಳ ಶರೀರವನ್ನು ಸ್ಪರ್ಶ ಮಾಡಿ ಬರುತ್ತಿರುವ ಗಾಳಿಯ ಸ್ಪರ್ಶವಾಗಿ ಆ ರೋಗವು ದೂರವಾಯ್ತು. ರಾಣಿಯ ಶರೀರವು ಮೊದಲಿನಂತೆಯೇ ಆಯಿತು. ಅವಳಿಗೆ ತನ್ನ ನಿರೋಗ ಸ್ಥಿತಿಯನ್ನು ನೋಡಿ ಆನಂದವಾಯಿತು. ಆನಂದ ಮತ್ತು ದುಃಖವು ಆತ್ಮನಲ್ಲಿಯೇ ಇದ್ದರೂ ಅವಿವೇಕಿಗಳು ಅದನ್ನು ಹೊರಗಿನ ಪದಾರ್ಥಗಳಲ್ಲಿವೆ ಎಂದು ತಿಳಿದು ಅಲ್ಲಿ ಹುಡುಕುತ್ತಿರುತ್ತಾರೆ. ಆದರೆ ಭೇದ ವಿಜ್ಞಾನಿಗಳು ಆ ಬಾಹ್ಯ ಸುಖದುಃಖಗಳನ್ನು ಪುದ್ಗಲ ಪರಿಣತಿ ಎಂದು ತಿಳಿದು ಬಿಡುತ್ತಾರೆ. ಆ ಸುಖದುಃಖಗಳ ಅನುಭವವನ್ನು ಮಾತ್ರ ಆತ್ಮನು ಮಾಡಿಕೊಳ್ಳುತ್ತಾನೆ. ಸುಖದುಃಖಗಳು ಆತ್ಮನನ್ನು ಬಿಟ್ಟು ಬೇರೆಯಾಗಿಲ್ಲ.

ನಾಸಿದ್ಧಂ ಸುಖದುಃಖಾನಿ ಜ್ಞಾನಾದರ್ಥಾಂತರಂ ಯತಃ
ಚೇತನತ್ವಾತ್ ಸುಖಂ ದುಃಖಂ ಜ್ಞಾನಾದನ್ಯತ್ರ ನ ಕ್ವಚಿತ್

ಸುಖ ಮತ್ತು ದುಃಖವು ಜ್ಞಾನದಲ್ಲಿಯೇ ಆಗುತ್ತಿರುತ್ತದೆ. ಸುಖ ದುಃಖ ಬೇರೆಯಿಲ್ಲ. ಸಮಸ್ತ ಸುಖಕ್ಕೆ ಕಾರಣ ಈ ಆತ್ಮನೇ ಆಗಿದ್ದಾನೆ. ಈ ಆತ್ಮ ಸ್ವರೂಪದ ಅನುಭವವನ್ನು ಮಾಡಿಕೊಳ್ಳುವುದೇ ಸುಖಕ್ಕೆ ಕಾರಣವಾಗಿದೆ. ಇಂಥಹ ಸುಖಕ್ಕೆ ಸಮಾನವಾದ ಸುಖವು ಲೋಕದಲ್ಲಿಲ್ಲ. ಆದುದರಿಂದ ವಿದ್ವಾಂಸರು ಯಾವಾಗಲೂ ಆತ್ಮ ಸುಖವನ್ನು ಹುಡುಕುತ್ತಿರುತ್ತಾರೆ. ಸಾಧುಗಳು ಯಾವಾಗಲೂ ಆತ್ಮಸುಖದಲ್ಲಿ ಲೀನರಾಗಿರುತ್ತಾರೆ. ಅವರು ಶರೀರವನ್ನು ಪರವೆಂದು ತಿಳಿದು ಆತ್ಮ ಸ್ವರೂಪದಲ್ಲಿ ಮಗ್ನರಾಗಿ ಕರ್ಮ ನಿರ್ಜರೆಯನ್ನು ಮಾಡಿಕೊಳ್ಳುತ್ತಾರೆ. ಅವರಿಗೆ ಆಕಿಂಚನ್ಯ ಧರ್ಮವಾಗುತ್ತದೆ ರಾಣಿಯು ಅಲ್ಲಿದ್ದ ಮುನಿಗಳ ಸಮೀಪ ಹೋಗಿ ಪ್ರಾರ್ಥಿಸಿದಳು. ಗುರುದೇವ ! ನಾನು ನಿಮ್ಮ ಕೃಪೆಯಿಂದ ನಿರೋಗಿಯಾಗಿದ್ದೇನೆ. ಈಗ ನನಗೆ ಆತ್ಮ ಕಲ್ಯಾಣದ ಉಪಾಯವನ್ನು ಹೇಳಿರಿ. ಈ ಸಂಸಾರವು ನಿಸ್ಸಾರವಾಗಿದೆ. ಇಲ್ಲಿ ಯಾರು ಯಾರಿಗೂ ಇಲ್ಲ. ತಮ್ಮ ಪುಣ್ಯವಿದ್ದರೆ ಎಲ್ಲರೂ ರಕ್ಷಿಸುತ್ತಾರೆ. ಪುಣ್ಯ ಮುಗಿದರೆ ಎಲ್ಲರೂ ಧಿಕ್ಕರಿಸಿ ಹೋಗುತ್ತಾರೆ. ಈ ಪಾಪ ಪುಣ್ಯಗಳಿಗೆ ಆತ್ಮನೇ ಕಾರಣನಾಗಿದ್ದಾನೆ. ಆ ಆತ್ಮನನ್ನು ಕರ್ಮದಿಂದ ಬಿಡುಗಡೆ ಮಾಡುವ ಉಪಾಯವನ್ನು ಹೇಳಿರಿ. ಆಗ ಮುನಿಗಳು ಹೀಗೆ ಉಪದೇಶವನ್ನು ಕೊಟ್ಟರು-

ನಿಜಾತ್ಮಶುದ್ಧಿಃ ಸ್ವರಸಸ್ಯಪಾನಂ
ಮೋಕ್ಷಸ್ಯ ಚಿತ್ತೇ ಸ್ವಗತೇರ್ವಿಚಾರಂ
ಕರೋತಿ ಯೋ ನಾತ್ಮಹಿತಂ ಸ ಏವ
ಸ್ವಘಾತಕೋ ವಾ ಪರಘಾತಕಕೋಪಿ

ಬೋಧಾಮೃತ

ಮುನಿಗಳು ಹೇಳುತ್ತಾರೆ. ಮಗಳೇ ! ನೀನು ಆತ್ಮ ಸ್ವರೂಪವನ್ನು ವಿಚಾರ ಮಾಡುವುದು ಇದೇ ಕರ್ಮದಿಂದ ಬಿಡುಗಡೆಯಾಗುವ ಉಪಾಯ ವಾಗಿದೆ. ತನ್ನ ಆತ್ಮನ ಆನಂದ ರಸಾಮೃತವನ್ನು ಪಾನ ಮಾಡು. ಆತ್ಮನು ಸ್ತ್ರೀ ಅಥವಾ ಪುರುಷ ರೂಪದಲ್ಲಿಲ್ಲ. ಅಮೂರ್ತಿಕ, ಅವಿನಾಶೀ, ಅಖಂಡ ಸ್ವರೂಪನಾದ ಆತ್ಮನು ಈ ಶರೀರದಲ್ಲಿದ್ದಾನೆ. ಅದೇ ನನ್ನ ನಿಜವಾದ ಸ್ವರೂಪವಾಗಿದೆ ಎಂಬು ಧ್ಯಾನವನ್ನು ಮಾಡು. ಆ ಧ್ಯಾನದ ಪ್ರಭಾವ ದಿಂದ ನಿನ್ನ ಸ್ತ್ರೀಪರ್ಯಾಯವು ದೂರವಾಗಿ ನಿನಗೆ ಪುರುಷ ಪರ್ಯಾ ಯವು ದೊರೆಯುವುದು. ನಂತರ ನೀನು ಮುನಿಯಾಗಿ ಆ ಧ್ಯಾನದ ಸಾಮ ರ್ಥ್ಯದಿಂದ ಅನಂತ ಸುಖವನ್ನು ಪಡೆಯುವಿ. ಇದು ಆತ್ಮಧ್ಯಾನದಿಂದಲೇ ಸಾಧ್ಯವಿದೆ.

ಜನ್ಮಮರಣ ಅಕೇಲಾ ಕರೇ ರಾಹ ಲಖತಜ ಪರಭಾವ
ಧ್ಯಾವೋ ಅಪನೇ ರೂಪಕೋ ಶೀಘ್ರ ಬನೋ ಶಿವರಾಯ

ಸಮಯಸಾರ.

ಶರೀರವನ್ನು ಧರಿಸುವುದು, ಬಿಡುವುದು ಅಂದರೆ ಜನ್ಮ ಮತ್ತು ಮರಣ ಈ ಕಾರ್ಯವನ್ನು ಆತ್ಮನು ಅನಾದಿ ಕಾಲದಿಂದ ಮಾಡಿಕೊಂಡು ಬಂದಿದ್ದಾನೆ. ಇನ್ನಾದರೂ ಆ ಪರಭಾವಗಳನ್ನು ಬಿಟ್ಟು ಆತ್ಮಧ್ಯಾನ ಮಾಡಿ ಬೇಗನೇ ಆತ್ಮಕಲ್ಯಾಣವನ್ನು ಮಾಡಿಕೋ.

ಈ ಉಪದೇಶವನ್ನು ಕೇಳಿ ರಾಣಿಗೆ ಬಹಳ ಆನಂದವಾಯಿತು. ಅವಳು ಸಂಸಾರ ಭೋಗಗಳನ್ನು ಬಿಟ್ಟು ಜೈನ ದೀಕ್ಷೆಯನ್ನು ಪಡೆದಳು. ಉತ್ತಮವಾದ ತಪಸ್ಸನ್ನು ಆಚರಿಸಿ, ಸ್ತ್ರೀಲಿಂಗವನ್ನು ಛೇದಿಸಿ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದಳು. ನೋಡಿ ಭವ್ಯರೇ ! ಆತ್ಮಧ್ಯಾನದ ಸಾಮರ್ಥ್ಯ ದಿಂದ ಈ ಪ್ರಕಾರ ಫಲವು ದೊರೆಯುತ್ತದೆ. ನೀವೂ ಆ ಜನ್ಮಮರಣದ ದುಃಖದಿಂದ ಬಿಡುಗಡೆ ಹೊಂದುವ ಇಚ್ಛೆ ಇದ್ದರೆ, ಇಪತ್ತನಾಲ್ಕು ಘಂಟೆ ಗಳಲ್ಲಿ ಸ್ವಲ್ಪ ಸಮಯವಾದರೂ ಆತ್ಮ ವಿಚಾರವನ್ನು ಮಾಡಿರಿ. ಶರೀರ

ದಲ್ಲಿರುವ ನನ್ನ ಆತ್ಮನು ಚೇತನರೂಪ ಪರಮಾತ್ಮನಾಗಿದ್ದಾನೆ. ಅವನ ಸ್ವರೂಪವನ್ನು ಹುಡುಕಿ ಅವನಲ್ಲಿ ಸ್ಥಿರವಾಗಿರಿ. ಅವನ ಸ್ವರೂಪದಲ್ಲಿ ತನ್ಮಯರಾಗುವುದೇ ಆಕಿಂಚಿನ್ಯವೆಂದು ಹೇಳಲಾಗಿದೆ.

ನೀವು ಈ ಭಾವನೆಯನ್ನು ನಿಮ್ಮ ನಿರ್ಮಲವಾದ ಅಂತಃಕರಣದಲ್ಲಿ ಧರಿಸಿರಿ. ಮತ್ತು ನಿಮ್ಮ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳಿರಿ. ಇದು ಆಚಾರ್ಯರ ವಚನವಾಗಿದೆ.

ಅನಾದಿ ಕಾಲದಿಂದ ಈ ಜೀವಾತ್ಮನು ಹೇಗೆ ಸುವರ್ಣವು ಪಾಷಾಣದೊಡನೆ ಕೂಡಿಕೊಂಡಿದೆಯೋ, ಹಾಗೆಯೇ ಕ್ಷೀರ ನೀರದಂತೆ ಕರ್ಮದೊಡನೆ ಕೂಡಿಕೊಂಡಿದ್ದಾನೆ.

**ಯಥಾನಾದಿಶ್ಚ ಜೀವಾತ್ಮಾ ತಥಾನಾದಿಶ್ಚ ಪುದ್ಗಲಃ**
**ದ್ವಯೋರ್ಬಂಧೋಪ್ಯನಾದಿಃ ಸ್ಯಾತ್ಸಂಬಂಧೋ ಜೀವ ಕರ್ಮಣೋಃ**

ಪಂಚಾಧ್ಯಾಯೀ

ಜೀವ ಮತ್ತು ಪುದ್ಗಲಗಳ ಸಂಬಂಧವು ಅನಾದಿ ಕಾಲದಿಂದ ಇದೆ. ಇದೇ ಪ್ರಕಾರ ಜೀವ ಮತ್ತು ಕರ್ಮದ ಸಂಬಂಧವೂ ಅನಾದಿಕಾಲದಿಂದ ಆಗಿದೆ ಮಿಥ್ಯಾತ್ವ ಕರ್ಮದ ಉದಯದಿಂದ ತನ್ನ ಸ್ವರೂಪವನ್ನು ಮರೆತು ಶರೀರಾದಿಕ ಪರದ್ರವ್ಯಗಳನ್ನು ತಮ್ಮ ಸ್ವರೂಪವೆಂದು ತಿಳಿದು ಈ ಜೀವನು ಸಂಸಾರದಲ್ಲಿ ಪರಿಭ್ರಮಿಸುತ್ತಾನೆ. ಈಗ ಸ್ವಲ್ಪ ಕರ್ಮದ ಆವರಣವು ದೂರವಾಗಿರುವುದರಿಂದ ತನ್ನ ಮತ್ತು ಇತರ ದ್ರವ್ಯದ ಭೇದವು ತಿಳಿದಿದೆ. ಹೀಗೆ ಮುನಿಗಳು ವಿಚಾರ ಮಾಡುತ್ತಾರೆ. ಶ್ರೀ ಗುರುಗಳ ಕೃಪೆಯಿಂದ ಮತ್ತು ನಿರಂತರ ಅಭ್ಯಾಸದಿಂದ ನನ್ನ ಸ್ವರೂಪದ ಲಾಭವು ನನಗೆ ಆದೆ. ಆದುದರಿಂದ ರಾಗದ್ವೇಷ ಮೊದಲಾದ ಮಲಗಳನ್ನು ನಾನು ನನ್ನ ಜ್ಞಾಯಕ ಸ್ವಭಾವದಿಂದ ಭಿನ್ನವಾಗಿವೆ ಎಂದು ತಿಳಿಯುತ್ತಿದ್ದೇನೆ. ಆದುದರಿಂದ ಈಗ ನಾನು ರಾಗದ್ವೇಷ ಮೋಹ ಮೊದಲಾದ ಭಾವಕರ್ಮಗಳನ್ನು ಮತ್ತು ಕರ್ಮದ ಉದಯದಿಂದ ಉತ್ಪನ್ನವಾದ ಶರೀರ, ಪರಿವಾರ

ಧನ ಸಂಪತ್ತಿ ಮೊದಲಾದ ಪರಿಗ್ರಹಗಳನ್ನು ನನ್ನದೆಂದು ತಿಳಿಯದೆ ಆಕಿಂಚಿನ್ಯ ಭಾವವನ್ನು ಧರಿಸಬೇಕು. ಅದರಿಂದ ಮುಂದೆ ಯಾವ ಭವ ದಲ್ಲಿಯೂ ನನಗೆ ಪರಿಗ್ರಹಗಳಲ್ಲಿ ಮಮತ್ವ ಬುದ್ಧಿಯಾಗಲಾರದು. ಹೀಗೆ ಆತ್ಮ ಸ್ವರೂಪದಲ್ಲಿರುವುದಕ್ಕೆ ಆಕಿಂಚಿನ್ಯವೆಂದು ಹೇಳಲಾಗಿದೆ. ಈ ಧರ್ಮವು ಎಲ್ಲಾ ಧರ್ಮಗಳಲ್ಲಿಯೂ ಶ್ರೇಷ್ಟವಾಗಿದೆ. ಆ ಆಕಿಂಚಿನ್ನ ಧರ್ಮದ ಭಾವನೆಯನ್ನು ಭಾವಿಸಿ ಮಹಾ ಪುರುಷರು ಆತ್ಮ ಕಲ್ಯಾಣ ವನ್ನು ಸಾಧಿಸಿಕೊಳ್ಳುತ್ತಾರೆ. ಲೋಕದಲ್ಲಿ ಆತ್ಮನಲ್ಲದೆ ಬೇರೆ ಯಾವ ಪದಾರ್ಥವು ನಮ್ಮದಲ್ಲವೆಂಬುದನ್ನು ಆಕಿಂಚಿನ್ಯ ಧರ್ಮವು ತೋರಿಸುತ್ತದೆ. ಈ ಭಾವನೆಯನ್ನು ಮುನಿಗಳು ಸತತ ಮಾಡುತ್ತಾರೆ. ನಿಜವಾಗಿ ಆತ್ಮ ಸ್ವರೂಪವೇ ತನ್ನ ಕುಟುಂಬ ಪರಿವಾರವಾಗಿದೆ ಎಂದು ಮುನಿಗಳು ವಿಚಾರ ಮಾಡುತ್ತಿರುತ್ತಾರೆ.

ಸಂಸಾರ ಹಂತ್ರೀ ಧೃತಿರೇವ ಮಾತಾ
ಜ್ಞಾನಂ ಪಿತಾ ಶಾಂತಿ ಸುಖಾದಿದಾತಾ
ಸ್ವಾತ್ಮಾನುಭೂತಿರ್ವಿಮಲಾ ಸ್ವಭಾರ್ಯಾ
ಧರ್ಮೋಸ್ತಿ ಬಂಧುಃ ಸತತಾನುಗಾಮೀ
ಕ್ಷಮಾ ಸ್ವದಾಸೀ ಚಶಮಃ ಸ್ವದಾಸಃ
ಪುತ್ರೋ ವಿವೇಕಶ್ಚ ದಯಾ ಸ್ವಸಾಹಿ
ಸಖಾ ಸಧರ್ಮಾ ಮೃದುತಾ ಸಖೀತಿ
ಸ್ವಬಾಂಧವೋ ಮೇ ಪರಲೋಕ ಸಾರ್ಥಃ
ಸ್ವಾತ್ಮಾನುಭೂತಿರ್ವಿಮಲಾಸ್ತಿ ಸಂಪತ್
ನಿಜಾತ್ಮವಾಸೋಸ್ತಿ ಗೃಹಂ ಪವಿತ್ರಂ
ಸ್ವೀಯೇ ಪದೇ ವೈ ಶಯನಂ ಸದೈವ
ಭಕ್ಷ್ಯಂ ಹಿ ಸಂತೋಷರಸಸ್ಯ ಪಾನಂ

ಬೋಧಾಮೃತ.

ನಿಜವಾಗಿ ನೋಡಿದರೆ ಧೈರ್ಯವು ಈ ಜೀವನ ತಾಯಿಯಾಗಿದೆ. ಶಾಂತಿ ಮತ್ತು ಸುಖವನ್ನು ಕೊಡುವ ಜ್ಞಾನವು ತಂದೆಯಾಗಿದೆ. ನಿರ್ಮಲವಾದ ಸ್ವಾತ್ಮಾನುಭೂತಿಯು ಜೀವನ ಪತ್ನಿಯಾಗಿದೆ. ಇಹಲೋಕ ಮತ್ತು ಪರಲೋಕದಲ್ಲಿ ತನ್ನೊಡನೆ ಬರುವ ಧರ್ಮವು ಬಂಧುವಾಗಿದೆ. ಉತ್ತಮ ಕ್ಷಮೆಯು ದಾಸಿ ಮತ್ತು ಶಮಭಾವ ದಾಸ, ವಿವೇಕ ಪುತ್ರ, ದಯಾಪರಿಣತಿ ತಂಗಿ, ಹೀಗೆ ಸಾಧರ್ಮಿ ಜನರು ಮಿತ್ರರಾಗಿದ್ದಾರೆ. ಮೃದು ಪರಿಣತಿಯು ಜೀವನ ಸಖಿಯಾಗಿದೆ, ಆತ್ಮನ ನಿರ್ಮಲ ಅನುಭೂತಿಯೇ ಸಂಪತ್ತಿಯಾಗಿದೆ. ಆತ್ಮ ಸ್ವರೂಪದಲ್ಲಿ ಸ್ಥಿರವಾಗಿರುವುದೇ ಅವನ ಮನೆಯಾಗಿದೆ. ಆತ್ಮ ಸ್ವರೂಪದಲ್ಲಿ ಮಗ್ನನಾಗಿರುವುದೇ ಈ ಜೀವನು ಹಾಸಿಗೆ ಹಾಕಿ ಮಲಗಿದ ಹಾಗಿದೆ. ಆತ್ಮಾನುಭವವೇ ಜೀವನ ಖಾದ್ಯ ಪದಾರ್ಥವಾಗಿದೆ. ಆತ್ಮಾನಂದ ರಸಪಾನವೇ ಪಾನೀಯವಾಗಿದೆ. ಹೀಗೆ ಆತ್ಮಾನಂದ ಮಯವಾದ ಕುಟುಂಬ ಪರಿವಾರದಲ್ಲಿ ಮುನಿಗಳು ಸದಾ ಮಗ್ನರಾಗಿರುತ್ತಾರೆ. ಮತ್ತು ಕರ್ಮ ನಿರ್ಜರೆಯನ್ನು ಮಾಡುತ್ತಿರುತ್ತಾರೆ. ಇಂಥಹ ಮುನಿಗಳಿಗೆ ಆಕಿಂಚಿನ್ಯ ಧರ್ಮವಾಗುತ್ತದೆ. ಆ ಧರ್ಮದ ಪ್ರಭಾವದಿಂದ ಅವರು ತನ್ನ ಕಲ್ಯಾಣವನ್ನು ಮಾಡಿಕೊಳ್ಳುತ್ತಾರೆ. ಹಾಗೆ ಬೇರೆ ಪ್ರಾಣಿಗಳ ಕಲ್ಯಾಣವನ್ನು ಮಾಡುತ್ತಾರೆ. ಧರ್ಮದ ರಕ್ಷಣೆಯನ್ನು ಮಾಡುತ್ತಾರೆ.

ಒಂದು ಸಾರಿ ನಮ್ಮ ಧರ್ಮದ ಮೇಲೆ ದೊಡ್ಡ ಸಂಕಟವು ಬಂದಿತು. ಮಿಥ್ಯಾದೃಷ್ಟಿ ರಾಜನು ಜೈನರಿಗೆ ಆಜ್ಞೆಯನ್ನು ವಿಧಿಸಿದನು. ನೀವು ನಮ್ಮ ಧರ್ಮದಂತೆ ಆಚರಿಸಬೇಕು. ಇಲ್ಲದಿದ್ದರೆ ನಿಮ್ಮನ್ನು ಈ ರಾಜ್ಯದಿಂದ ಹೊರಡಿಸಲಾಗುವುದು. ಎಲ್ಲಾ ಜೈನ ಸಮಾಜದವರೂ ಗಾಬರಿಯಾದರು. ಮತ್ತು ಸದ್ಧರ್ಮವನ್ನು ಬಿಟ್ಟು ಅವನ ಧರ್ಮದಂತೆ ಆಚರಿಸತೊಡಗಿದರು. ಎಷ್ಟೋ ದಿವಸ ಅಲ್ಲಿ ಜೈನ ಸಾಧುಗಳ ಆಗಮನವಾಗದಿರುವುದರಿಂದ ಎಲ್ಲರೂ ಸದ್ಧರ್ಮದಿಂದ ಚ್ಯುತರಾಗಿ ಕುಧರ್ಮ ಸೇವನೆಯನ್ನು ಮಾಡಹತ್ತಿದರು.

ಕುಗ್ರಾಮವಾಸಃ ಕುಲಹೀನ ಸೇವಾ
ಕುಭೋಜನಂ ಕ್ರೋಧಮುಖೀ ಚ ಭಾರ್ಯಾ
ಮೂರ್ಖಸ್ಯ ಪುತ್ರೋ ವಿಧವಾ ಚ ಕನ್ಯಾ
ವಿನಾಗ್ನಿನಾ ಸಂದಹತೇ ಶರೀರಂ ||

ಎಲ್ಲಿ ಜಿನಮಂದಿರವಿಲ್ಲವೋ ಅಲ್ಲಿ ಧರ್ಮ ಸಾಧನೆಯಾಗುವುದಿಲ್ಲ. ಅಲ್ಲಿ ವಾಸ ಮಾಡುವುದು ಕುಗ್ರಾಮವಾಸವೆಂದು ಹೇಳಲಾಗಿದೆ. ಆ ಊರಿನಲ್ಲಿ ದೇವರ ಅಭಿಷೇಕವಿಲ್ಲ, ಪೂಜಾ ಪ್ರಭಾವನೆ ಇಲ್ಲ. ಸಾಧುಗಳ ವಿಹಾರವಿಲ್ಲ, ಅಂಥಹ ಸ್ಥಾನಗಳಲ್ಲಿ ಜೈನರು ತಮ್ಮ ಧರ್ಮವನ್ನು ಬಿಟ್ಟು ಕುಧರ್ಮದ ಸೇವೆಯನ್ನು ಮಾಡುತ್ತಾರೆ. ಹಾಗೆಯೇ ಈ ಊರಿನವರೂ ಮಿಥ್ಯಾಕರ್ಮದ ಉದಯದಿಂದ ಕುಧರ್ಮಿಗಳ ಸಂಗತಿಯಿಂದ ಕುಧರ್ಮ ವನ್ನು ಪಾಲಿಸುತ್ತಿದ್ದರು, ಒಂದು ಸಾರಿ ಮುನಿಗಳ ಸಂಘವು ವಿಹಾರ ಮಾಡುತ್ತಾ ಹೋಗುತ್ತಿರುವಾಗ ಆ ಊರಿನಲ್ಲಿ ಸೂರ್ಯಾಸ್ತವಾ ಯಿತು. ಆ ಸಮಯದಲ್ಲಿ ಮುನಿಗಳು ವಿಚಾರ ಮಾಡುತ್ತಾರೆ. ' ಈ ಊರು ಯಾವುದು ? ಇಲ್ಲಿ ಜಿನಮಂದಿರವಿದೆಯೋ ಇಲ್ಲವೋ ? ಎಂದು ವಿಚಾರಿಸಿದರು. ಆಗ ಅಲ್ಲಿಯವರು ಹೇಳುತ್ತಾರೆ ' ಸ್ವಾಮಿನ್ ! ಇಲ್ಲಿಯ ಎಲ್ಲ ಜೈನರು ಮಿಥ್ಯಾದೃಷ್ಟಿಗಳಾಗಿದ್ದಾರೆ. ಇಲ್ಲಿಯ ಜಿನಮಂದಿರವು ಬೇರೆ ಮಂದಿಂಗಳಾಗಿವೆ. ಆದುದರಿಂದ ನೀವು ಇಲ್ಲಿರುವುದು ಯೋಗ್ಯವಲ್ಲ. ಇದನ್ನು ಕೇಳಿ ಸಂಘದ ಆಚಾರ್ಯರು ನಿಮಿತ್ತಜ್ಞಾನದ ಬಲದಿಂದ ವಿಚಾರ ಮಾಡುತ್ತಿದ್ದಾರೆ. ಇಲ್ಲಿ ನಾವು ಇದ್ದು ಜನರಿಗೆ ಉಪದೇಶ ಮಾಡಿ ಅವರನ್ನು ಕುಧರ್ಮದಿಂದ ಬಿಡಿಸಿ ಸದ್ಧರ್ಮದಲ್ಲಿ ಸ್ಥಾಪಿಸಬೇಕು. ಈ ವಿಚಾರದಿಂದ ಮುನಿ ಸಂಘವು ಒಂದು ಮಹಾದೇವನ ಮಂದಿರದಲ್ಲಿ ಇಳಿ ಯಿತು. ಮತ್ತು ಸಾಮಾಯಿಕಕ್ಕೆ ಎಲ್ಲರೂ ಕುಳಿತರು. ಆಗ ಮಹಾದೇ ವನಭಕ್ತರು ವಿಚಾರ ಮಾಡುತ್ತಿದ್ದಾರೆ. ಇಲ್ಲಿ ಬಂದು ಜೈನ ಮುನಿಗಳು ಧ್ಯಾನ ಮಾಡುತ್ತಿದ್ದಾರೆ. ಅಂದರೆ ನಮ್ಮ ಮಹಾದೇವನ ಎಷ್ಟೊಂದು

ಮಹಿಮೆ ಇದೆ. ಜೈನ ಸಾಧುಗಳೂ ಮಹಾದೇವನ ದರ್ಶನಕ್ಕೆ ಬಂದಿರು ತ್ತಾರೆ. ಎಂದು ತಿಳಿದು ಅವರು ಬಹಳ ಸಂತೋಷ ಪಟ್ಟರು.

ಅವರು ಮುನಿಗಳಿಗೆ ನಮಸ್ಕಾರ ಮಾಡಿ ಸ್ವಾಮಿನ್ ! ನೀವು ಇಲ್ಲಿಯೇ ಇದ್ದು ನಮಗೆ ಉಪದೇಶವನ್ನು ದಯೆ ಪಾಲಿಸಿರಿ. ಎಂದು ಪ್ರಾರ್ಥಿಸಿದರು. ಇದನ್ನು ಕೇಳಿ ಮುನಿಗಳು ಹೇಳುತ್ತಾರೆ ' ನೀವು ಚಾರಿತ್ರ ಭ್ರಷ್ಟರಾಗಿದ್ದೀರಿ. ನೀವು ನಿಮ್ಮ ಚಾರಿತ್ರವನ್ನು ಸುಧಾರಿಸಿ ಕೊಳ್ಳಿರಿ. ಅಂದರೆ ನಾವು ಇಲ್ಲಿರುತ್ತೇವೆ. ಎಂದರು. ಆಗ ಅವರು ' ಗುರುದೇವ ! ನಾವು ಹೇಗೆ ವರ್ತಿಸಬೇಕೆಂದು ಉಪದೇಶ ಕೊಡೋ ಣಾಗಲಿ ' ನಿಮ್ಮ ಅಪ್ಪಣೆಯಂತೆ ನಾವು ವರ್ತಿಸುತ್ತೇವೆ. ಎಂದರು ಆಗ ಮುನಿಗಳು ಅವರಿಗೆ ಅಷ್ಟ ಮೂಲಗುಣಗಳನ್ನು ಪಾಲಿಸಲು ಉಪದೇಶ ವನ್ನು ಕೊಟ್ಟರು. ಮತ್ತು ಅವರು ಪ್ರತಿನಿತ್ಯ ಮುನಿಗಳ ಉಪದೇಶವನ್ನು ಕೇಳಲು ಬರುತ್ತಿದ್ದರು. ಹೀಗೆ ಕೇಳಿ ಕೇಳಿ ಆನಂದದಿಂದ ' ಗುರುದೇವ, ನಮ್ಮ ಕಲ್ಯಾಣದ ಉಪಾಯವನ್ನು ಅಪ್ಪಣೆ ಕೊಡೋಣಾಗಲಿ ' ಎಂದು ಪ್ರಾರ್ಥಿಸಿದರು.

ನೀವು ಕುಧರ್ಮವನ್ನು ಬಿಟ್ಟು ಸದ್ಧರ್ಮವನ್ನು ಅಂಗೀಕರಿಸಬೇಕು ಅಂದರೆ ನಿಮ್ಮ ಕಲ್ಯಾಣವಾಗುತ್ತದೆ. ಸದ್ಧರ್ಮವು ಪ್ರಾಣಿಗಳ ಹಿತವನ್ನು ಮಾಡುತ್ತದೆ ಆದುದರಿಂದ ನೀವು ಎಲ್ಲಾ ಧರ್ಮಗಳಲ್ಲಿ ಶ್ರೇಷ್ಠವಾದ ಅಹಿಂಸಾ ಧರ್ಮವನ್ನು ಪರಿಪಾಲಿಸಿರಿ. ಆಗ ಅವರು ಸ್ವಾಮಿನ್ ! ಅಹಿಂಸಾ ಧರ್ಮವು ಎಲ್ಲ ಧರ್ಮಗಳಲ್ಲಿ ಶ್ರೇಷ್ಠವಾಗಿವೆ ಎಂದು ಏಕೆ ಹೇಳ ಬೇಕು. ಎಲ್ಲಾ ದೇವರಲ್ಲಿ ಮಹಾದೇವನು ಶ್ರೇಷ್ಠನು. ಮಹಾದೇವನಿಂದಲೂ ಜಿನದೇವನು ಶ್ರೇಷ್ಠನಾಗಿದ್ದರೆ ಅದನ್ನು ಸಿದ್ಧ ಮಾಡೋಣಾಗಲಿ. ಹಾಗಾ ದರೆ ಮಾತ್ರ ನಾವು ಆ ಪ್ರಕಾರ ಆಚರಿಸುತ್ತೇವೆ. ಎಂದರು. ಆಗ ಆಚಾ ರ್ಯರು ಉತ್ತರವನ್ನಿತ್ತರು. ಸಜ್ಜನರೇ ! ಮಹಾದೇವನು ಜಿನದೇವನ ಭಕ್ತನಾಗಿದ್ದಾನೆ. ಪ್ರತಿನಿತ್ಯ ಮಹಾದೇವನು ಜಿನೇಶ್ವರನ ಪೂಜೆಯನ್ನು

ಮಾಡುತ್ತಾನೆ. ಇದನ್ನು ಕೇಳಿ ಆ ಜನರು 'ಹಾಗಾದರೆ ನಾವು ಅವಶ್ಯ ಜೈನ ಧರ್ಮವನ್ನು ಧರಿಸುತ್ತೇವೆ. ಜಿನೇಶ್ವರನ ಭಕ್ತರಾಗುತ್ತೇವೆ. ಎಂದು ದೃಢವಾಗಿ ಹೇಳಿದರು. ಆಚಾರ್ಯರು ತಾನು ಹೇಳಿದ ಮಾತು ಸತ್ಯ ಹೇಗೆ ಆಗಬಹುದೆಂಬ ವಿಚಾರದಲ್ಲಿದ್ದರು. ಮತ್ತು ಧ್ಯಾನ ಮಾಡುತ್ತಿರುವಾಗಲೂ ಜೈನ ಧರ್ಮದ ಪ ಭಾವನೆಯು ಹೇಗಾಗ ಬಹುದೆಂಬ ವಿಚಾರದಲ್ಲಿ ಮಗ್ನರಾದರು. ಮುನಿಗಳ ಧ್ಯಾನ ಸಾಮರ್ಥ್ಯದಿಂದ ಎಲ್ಲವೂ ಸಿದ್ಧವಾಗುತ್ತದೆ. ಅವರು ಅತ್ಯಂತ ಭಕ್ತಿಭಾವದಿಂದ ಈ ಕೆಳಗಿನಂತೆ ಸ್ತುತಿಯನ್ನು ಮಾಡಿದರು.

ಮನ್ಯೇ ವರಂ ಹರಿಹರಾದಯ ಏವ ದೃಷ್ಟಾ
ದೃಷ್ಟೇಷು ಯೇಷು ಹೃದಯಂ ತ್ವಯಿ ತೋಷಮೇತಿ
ಕಿಂ ವೀಕ್ಷಿತೇನ ಭವತಾ ಭುವಿ ಏನ ನಾನ್ಯಃ
ಕಶ್ಚಿನ್ಮನೋಹರತಿ ನಾಥ ಭವಾಂತರೇಪಿ

ಭಕ್ತಾಮರ ಸ್ತೋತ್ರ

ಭೋ ಸ್ವಾಮಿನ್ ! ಹರಿಹರಾದಿಕ ದೇವರ ನಾನು ದರ್ಶನವನ್ನು ಮಾಡಿದ್ದೇ ಒಳ್ಳೆಯದಾಯಿತೆಂದು ಕಾಣುತ್ತದೆ. ಯಾಕಂದರೆ ಅವರ ದರ್ಶನವನ್ನು ಮಾಡಿದ ನಂತರ ನನ್ನ ಮನಸ್ಸು ಎಂದು ನಿಮ್ಮಲ್ಲಿ ಸಮಾಧಾನವನ್ನು ಪಡೆಯುತ್ತದೆ. ಮತ್ತು ಇಲ್ಲಿ ನಾನು ನಿಮ್ಮ ದರ್ಶನ ಮಾಡಿದ ಫಲದಿಂದ ಭವಭವಗಳಲ್ಲಿಯೂ ನನ್ನ ಮನಸ್ಸನ್ನು ಬೇರೆ ಯಾರೂ ಅಪಹರಿಸಲು ಸಾಧ್ಯವಿಲ್ಲ. ಈ ಸ್ತೋತ್ರದ ಭಕ್ತಿ ಪ್ರಭಾವದಿಂದ ದೇವತೆಯು ಪ್ರಕಟವಾಗಿ ಹೇಳಹತ್ತಿತು. ಮಹಾರಾಜ ಚಿಂತೆಯನ್ನು ಮಾಡಬೇಡಿರಿ. ನಾವು ಜೈನಧರ್ಮದ ಪ ಭಾವನೆಯನ್ನು ಅವಶ್ಯ ಮಾಡುವೆವು. ನಾಳೆ ಬೆಳಗ್ಗೆ ಎಂಟು ಘಂಟೆಗೆ ಆ ಮಹಾದೇವನ ಮಂದಿರದಲ್ಲಿ ಜಿನೇಶ್ವರನ ಪೂಜೆಯನ್ನು ಮಾಡಲಿಕ್ಕೆ ಹರಿಹರಾದಿ ದೇವತೆಗಳನ್ನು ಕಳುಹಿಸುವೆವು. ಎಂದು ಹೇಳಿ ಆ ದೇವತೆಗಳು ಅದೃಶ್ಯವಾದವು. ಎರಡನೆಯ ದಿವಸ

ಬ್ರಹ್ಮಾ, ವಿಷ್ಣು ಮಹಾದೇವ ಮೊದಲಾದವರ ರೂಪವನ್ನು ಧರಿಸಿ ಅನೇಕ ದೇವೀ ದೇವತೆಗಳು ಸಾಮಗ್ರಿಗಳನ್ನು ಹಿಡಿದುಕೊಂಡು ಬಂದವು. ಎಲ್ಲಾ ದೇವರೂ ಪಂಚ ಪರಮೇಷ್ಠಿಗಳ ಸ್ತುತಿಯನ್ನು ಮಾಡ ಹತ್ತಿದರು. ಹೇ ಭಗವನ್ ! ನಮ್ಮನ್ನು ರಕ್ಷಿಸಿರಿ ಎಂದು ಪ್ರಾರ್ಥಿಸಿದರು.

ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯೇಭ್ಯಸ್ತಥಾ ಚ ಸಾಧುಭ್ಯಃ
ಸರ್ವಜಗದ್ವಂದ್ಯೇಭ್ಯೋ ನಮೋಸ್ತು ಸರ್ವತ್ರ ಸರ್ವೇಭ್ಯಃ ॥

ದಶಭಕ್ತಿ.

ಅರ್ಹತ್ಪರಮೇಷ್ಠಿಗಳು ಮೂರು ಲೋಕದ ಭವ್ಯರ ಕಲ್ಯಾಣವನ್ನು ಮಾಡುತ್ತಾರೆ. ಅರ್ಹಂತಸಿದ್ಧ ಆಚಾರ್ಯ ಉಪಾಧ್ಯಾಯ ಸರ್ವ ಸಾಧು ಗಳಿಗೆ ನಾವು ಭಕ್ತಿಯಿಂದ ನಮಸ್ಕಾರವನ್ನು ಮಾಡುತ್ತೇವೆ. ಎಂದು ಸುತ್ತಿಸಿ ಜಿನೇಶ್ವರನ ಪೂಜೆಯನ್ನು ಮಾಡ ಹತ್ತಿದರು. ಇದನ್ನು ನೋಡಿ ಆ ಕುಧರ್ಮಿಗಳು ' ಎಲೆಲೇ ಇದೇನು ಆಶ್ಚರ್ಯ. ನಮ್ಮ ಮಹಾದೇ ವನು ಜಿನೇಶ್ವರನ ಪೂಜೆಯನ್ನು ಮಾಡುತ್ತಿದ್ದಾನೆ. ಆದುದರಿಂದ ಎಲ್ಲಾ ದೇವರಲ್ಲಿಯೂ ಜಿನೇಶ್ವರನೇ ಶ್ರೇಷ್ಠನಾಗಿರುತ್ತಾನೆ. ಈ ಮಾತು ಸತ್ಯ ವಾಯಿತು ಎಂದು ಹೇಳಿ ರಾಜನೇ ಮೊದಲಾಗಿ ಎಲ್ಲರೂ ಕುಧರ್ಮವನ್ನು ಬಿಟ್ಟು ಜಿನಧರ್ಮವನ್ನು ಅಂಗೀಕರಿಸಿದರು. ಆ ಮಹಾದೇವನ ಮಂದಿರ ವನ್ನು ಅವರು ಜಿನಮಂದಿರವನ್ನಾಗಿ ಮಾಡಿದರು. ಆ ದೇವಸ್ಥಾನದಲ್ಲಿ ಅವರು ಪಾರ್ಶ್ವನಾಥ ಭಗವಂತನ ಮೂರ್ತಿಯನ್ನು ಸ್ಥಾಪಿಸಿ ಪೂಜಿಸಿ ದರು. ರಾಜನೂ ಆನಂದಿತನಾಗಿ ಮುನಿಗಳಿಗೆ ನಮಸ್ಕಾರ ಮಾಡಿ ' ಗುರುದೇವ ! ಜೈನಧರ್ಮದ ಪ್ರಭಾವವು ಅಮಿತವಾಗಿದೆ. ನಾನು ಇನ್ನು ಈ ಧರ್ಮವನ್ನು ಬಿಟ್ಟು ಬೇರೆ ಯಾವ ಧರ್ಮವನ್ನೂ ಆಚರಿಸುವುದಿಲ್ಲ ವೆಂದು ಪ್ರತಿಜ್ಞೆ ಮಾಡಿದನು, ಬೇರೆ ಎಲ್ಲರೂ ಪ್ರತಿಜ್ಞೆಯನ್ನು ಮಾಡಿ ದರು. ನೋಡಿ, ಆತ್ಮಧ್ಯಾನದ ಸಾಮರ್ಥ್ಯವು ಎಷ್ಟಿದೆ ? ಸರ್ವ ಧರ್ಮದ ಖಂಡನೆಯನ್ನು ಮಾಡಿ ಅವರು ತನ್ನ ಧರ್ಮವನ್ನು ಮಂಡಿಸುತ್ತಾರೆ.

ಮಿಥ್ಯಾವಾದಿ ಮದೋಗ್ರಧ್ವಾಂತ ಪ್ರಧ್ವಂಸಿ ವಚನಸಂದರ್ಭಾತ್
ಉಪದೇಶಕಾನ್ ಪ್ರಪದ್ಯೇ ಮಮ ದುರಿತಾರಿಪ್ರಣಾಶಾಯ ॥

ಪಂಚಗರುಭಕ್ತಿ,

ಆತ್ಮಧ್ಯಾನವನ್ನು ಮಾಡುವ ಯೋಗಿಗಳು ಮಿಥ್ಯಾವಾದಿಗಳ ಅಹಂಕಾರವೆಂಬ ಅಂಧಕಾರವನ್ನು ನಾಶ ಮಾಡಲು ಸೂರ್ಯನಂತಿರುತ್ತಾರೆ. ಇಂಥಹ ಮುನಿಗಳನ್ನ ನಾನು ನನ್ನ ಪಾಪಗಳನ್ನು ದೂರ ಮಾಡುವುದಕ್ಕೋಸ್ಕರವಾಗಿ ಬಹಳ ಭಕ್ತಿಯಿಂದ ವಂದಿಸುತ್ತೇನೆ. ಅವರು ನಮ್ಮ ಕರ್ಮಗಳನ್ನು ನಾಶ ಮಾಡಲಿ. ಭವ್ಯ ಜೀವರು ಮನ ವಚನ ಕಾಯಗಳಿಂದ ಸತತ ಇಂಥಹ ಸಾಧುಗಳನ್ನು ಪೂಜಿಸಿ ಆತ್ಮ ಸಿದ್ಧಿಯನ್ನು ಮಾಡಿಕೊಳ್ಳುತ್ತಾರೆ. ಆದುದರಿಂದ ಭವ್ಯರೇ ! ನಿಮಗೂ ಆತ್ಮ ಸಿದ್ಧಿಯನ್ನು ಮಾಡಿಕೊಳ್ಳುವ ಇಚ್ಛೆ ಇದ್ದರೆ ನೀವೂ ಮನಸ್ಸಿನ ಎಲ್ಲಾ ಸಂಕಲ್ಪ ವಿಕಲ್ಪಗಳನ್ನು ಬಿಟ್ಟು ಮನಸ್ಸನ್ನು ಪವಿತ್ರವನ್ನಾಗಿ ಮಾಡಿ ಉತ್ತಮ ಆಕಿಂಚನ್ಯ ಭಾವವನ್ನು ಧರಿಸಿರಿ. ಆತ್ಮಕಲ್ಯಾಣವನ್ನು ಮಾಡಿಕೊಳ್ಳಿರಿ. ಹೀಗೆ ಆಚಾರ್ಯರ ಉಪದೇಶವಾದೆ

ಭವ್ಯರೇ ! ನೀವು ಭವವೆಂಬ ಸಮುದ್ರದಲ್ಲಿ ಅನಾದಿಕಾಲದಿಂದ ಮುಳುಗಿದ್ದೀರಿ ಭೇದ ವಿಜ್ಞಾನದ ಬಲದಿಂದ ಸ್ವಸ್ವರೂಪವನ್ನು ಪ್ರಾಪ್ತ ಮಾಡುವುದರಿಂದ ಬಳಲುತ್ತಿದ್ದೀರಿ. ಈ ದುಃಖವನ್ನು ನಾಶ ಮಾಡಲು ಈ ಆಕಿಂಚನ್ಯ ಧರ್ಮವು ಸಮರ್ಥವಾಗಿದೆ. ಈ ಧರ್ಮವು ಇದು ವರೆಗೆ ಪ್ರಾಪ್ತವಾಗಿಲ್ಲ ನಿಮಗೆ ಏನೋ ಕಾಲಲಬ್ಧಿಯ ಕಾರಣದಿಂದ ಸ್ವಪರದ ಜ್ಞಾನವು ಸ್ವಲ್ಪ ಮಟ್ಟಿಗೆ ಆದೆ. ಆದರೆ ಬಹಿರಾತ್ಮನು ಇಂದ್ರಿಯ ಸುಖಗಳನ್ನೇ ತನ್ನ ಸುಖವೆಂದು ತಿಳಿದು ಭೋಗ ಸಾಮಗ್ರಿಗಳಲ್ಲಿ ಆಸಕ್ತನಾಗಿರುತ್ತಾನೆ ಆದರಿಂದ ದುಃಖಿಯಾಗಿದ್ದಾನೆ. ಆದರೆ ವಿದ್ವಾಂಸರು, ಸಾಧು ಸತ್ಪುರುಷರು ಈ ಇಂದ್ರಿಯ ಸುಖಗಳನ್ನು ಪುದ್ಗಲಮಯವೆಂದು ತಿಳಿಯುತ್ತಾರೆ. ಇದನ್ನು ನಾವು ವಿಚಾರ ಮಾಡದೆ ನಾವು ದುಃಖಿಗಳಾಗಿದ್ದೇವೆ. ನೀರಿನಲ್ಲಿ

ಕೆಸರಿನ ಸಂಯೋಗವಾಗುತ್ತದೆ. ಆದರೆ ಯಥಾರ್ಥ ವಿಚಾರ ಮಾಡಿದಲ್ಲಿ ನೀರು ಮತ್ತು ಕೆಸರು ಬೇರೆ ಬೇರೆಯಾಗಿವೆ.

ಸಕರ್ದಮಂ ಯಥಾ ವಾರಿ ವಾ ಪಶ್ಯ ನ ಕರ್ದಮಂ
ದೃಶ್ಯತೇ ತದವಸ್ಥಾಯಂ ಶುದ್ಧಂ ವಾರಿ ವಿಪಂಕವತ್ ||

ಪಂಚಾಧ್ಯಾಯೀ

ಹಾಗೆಯೇ ಶುದ್ಧ ದೃಷ್ಟಿಯಿಂದ ವಿಚಾರ ಮಾಡಿದರೆ ಈ ಆತ್ಮನು ಶರೀರದಿಂದ ಬೇರೆ ಯಾಗಿದ್ದಾನೆ. ಶರೀರಕ್ಕೂ ಅವನಿಗೂ ಏನೂ ಸಂಬಂಧ ವಿಲ್ಲವೆಂದು ಜ್ಞಾನಿಗಳು ವಿಚಾರ ಮಾಡಿ ಆ ಶುದ್ಧಾತ್ಮನ ಶುದ್ಧ ಸ್ವರೂಪದ ಅನುಭವವನ್ನು ಪಡೆಯುತ್ತಾರೆ. ಮುನಿಗಳು ಧ್ಯಾನದ ಸಾಮರ್ಥ್ಯದಿಂದಲೇ ವ್ಯವಹಾರ ನಿಶ್ಚಯ ಮೋಕ್ಷಗಳನ್ನು ಪಡೆಯುತ್ತಾರೆ. ಆದುದರಿಂದ ನೀವೂ ಪ್ರಯತ್ನಶೀಲರಾಗಿ ಏಕಾಗ್ರಚಿತ್ತದಿಂದ ಆತ್ಮಧ್ಯಾನದ ಅಭ್ಯಾಸವನ್ನು ಮಾಡಿರಿ.

ಮಾಮುಜ್ಝಹ ಮಾರಜ್ಝಹ
ಮಾದುಸ್ಸಹ ಇಠ್ಠನಿಠ್ಠ ಅಠ್ಠೇಸು
ಥಿರಮಿಚ್ಛಹ ಜಯಿ ಚಿತ್ತಂ
ವಿಚಿತ್ತ ಝಾಣಪ್ಪಸಿದ್ಧೀಯೇ

ದ್ರವ್ಯಸಂಗ್ರಹ.

ಧ್ಯಾನದ ಸಿದ್ಧಿಗೋಸ್ಕರವಾಗಿ ನೀವು ಮನಸ್ಸನ್ನು ಏಕಾಗ್ರಗೊಳಿಸಿರಿ. ಇಂದ್ರಿಯಗಳನ್ನು ಜಯಿಸದೆ ಮನಸ್ಸು ಸ್ಥಿರವಾಗಲಾರದು. ಮನಸ್ಸು ಸ್ಥಿರವಾಗದೆ ಆತ್ಮಧ್ಯಾನವಾಗಲಾರದು. ಆತ್ಮಧ್ಯಾನದ ಸಿದ್ಧಿಗೋಸ್ಕರವಾಗಿ ನೀವು ಇಷ್ಟ ಅನಿಷ್ಟ ಪದಾರ್ಥಗಳಲ್ಲಿ ಮೋಹವನ್ನು ಮಾಡಬೇಡಿರಿ. ಪ್ರೀತಿಯನ್ನು ಮಾಡಬೇಡಿರಿ. ದ್ವೇಷವನ್ನು ಮಾಡಬೇಡಿರಿ. ಯಾಕಂದರೆ ರಾಗದ್ವೇಷಗಳೇ ಕರ್ಮಬಂಧಕ್ಕೆ ಕಾರಣವಾಗಿವೆ.

ನಾಸಿದ್ಧಂ ತತ್ಪರಾಯತ್ತಂ ಸಿದ್ಧ ಸಂದೃಷ್ಟಿತೋ ಯಥಾ
ಶೀತಮುಷ್ಣಮಿವಾತ್ಮನಂ ಕುರ್ವನ್ನಾತ್ಮಾಪ್ಯನಾತ್ಮವಿತ್ ||

ಪಂಚಾಧ್ಯಾಯಿ.

ಅಜ್ಞಾನಿಗಳು ಮಿಥ್ಯಾ ಕರ್ಮದ ಉದಯದಿಂದ ನನಗೆ ಚಳಿಯಾಗುತ್ತದೆ, ಸೆಕೆಯಾಗುತ್ತದೆ. ನಾನು ಸುಖಿಯಾಗಿದ್ದೇನೆ. ನಾನು ದುಃಖಿಯಾಗಿದ್ದೇನೆ. ಮೊದಲಾದ ಸಂಕಲ್ಪ ವಿಕಲ್ಪಗಳಿಂದ ನವೀನ ಕರ್ಮವನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಜ್ಞಾನಿಗಳು ಶೀತ ಉಷ್ಣ ಸುಖ ದುಃಖ ಮೊದಲಾದವುಗಳು ಮೂರ್ತಿಕ ಜಡ ಪುದ್ಗಲ ದ್ರವ್ಯದ ಸ್ವಭಾವಾಗಿದೆ. ನಾನು ಅಚಿಂತ್ಯ, ಅನಂತ ಜ್ಞಾನಾದಿಕ ಗುಣಗಳಿಂದ ಯುಕ್ತನಾಗಿದ್ದೇನೆ, ಎಂದು ತಿಳಿಯುತ್ತಾರೆ. ನೋಡಿ, ಜಾನಿ ಮತ್ತು ಅಜ್ಞಾನಿಗಳಲ್ಲಿ ಎಷ್ಟು ಭೇದವಿದೆ.

ಅಜ್ಞಾನಿಯು ಬಾಹ್ಯ ಪದಾರ್ಥಗಳನ್ನು ತನ್ನದೆಂದು ತಿಳಿದು ಕರ್ಮಬಂಧವನ್ನು ಮಾಡಿಕೊಳ್ಳುತ್ತಾನೆ. ಆದರೆ ಜ್ಞಾನಿಯು ಅನೇಕ ಕರ್ಮಗಳ ಫಲವನ್ನು ಭೋಗಿಸುತ್ತಿದ್ದರೂ ತನ್ನ ಸ್ವರೂಪವನ್ನು ತಿಳಿದು ಇವೆಲ್ಲಾ ನನ್ನದಲ್ಲ. ಪರವಾಗಿವೆ. ಎಂದು ತಿಳಿದು ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಅಥಾಬದ್ಧ ಮಥಾಸ್ಪೃಷ್ಟಂ ಶುದ್ಧ ಸಿದ್ಧಪದೋಪಮಂ
ಶುದ್ಧಸ್ಫಟಿಕಸಂಕಾಶಂ ನಿಸ್ಸಂಗಂ ವ್ಯೋಮವತ್ಸದಾ ||

ಸಮಯಸಾರ.

ಜ್ಞಾನಿಯಾದ ಯೋಗಿಯು ತನ್ನನ್ನು ಅಬದ್ಧ ಅಸ್ಪೃಷ್ಟ, ಶುದ್ಧ ಸಿದ್ಧ ಭಗವಂತನಂತೆ ತಿಳಿದು ಶುದ್ಧ ಸ್ಫಟಿಕದಂತೆ ನಿರ್ಮಲ, ಆಕಾಶದಂತೆ ನಿಸ್ಸಂಗ, ಅತೀಂದ್ರಿಯ ಅನಂತ ಜ್ಞಾನದರ್ಶನ ಸುಖ ವೀರ್ಯ ಮೊದಲಾದ ಅನಂತ ಸ್ವಾಭಾವಿಕ ಗುಣಗಳ ಭಂಡಾರವೆಂದು ತಿಳಿದು ಆತ್ಮಸ್ವರೂಪದಲ್ಲಿ ಲೀನನಾಗಿರುತ್ತಾನೆ. ಮತ್ತು ಅನಂತ ಕರ್ಮಗಳ ನಿರ್ಜರೆ

ಯನ್ನು ಮಾಡುತ್ತಾನೆ. ಹಾಗೆಯೇ ಕರ್ಮಗಳ ರಸ ಕೊಡುವ ಶಕ್ತಿ ಯನ್ನು ಕಡಿಮೆ ಮಾಡುತ್ತಾನೆ. ಅಂಥಹ ಯೋಗಿಗಳು ಈ ಸಂಸಾರದಲ್ಲಿ ದ್ದರೂ ಸಿದ್ಧ ಭಗವಂತರ ಹಾಗಿರುತ್ತಾರೆ. ಅವರ ಬಾಹ್ಯ ಮುದ್ರೆಯನ್ನು ನೋಡಿ ಅನೇಕ ಜೀವರು ತನ್ನ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳುತ್ತಾರೆ.

ಒಂದಾನೊಂದು ಸಮಯದಲ್ಲಿ ಒಬ್ಬ ಮುನಿಗಳು ಕಾಡಿನಲ್ಲಿ ಧ್ಯಾನ ಸ್ಥರಾಗಿ ಕುಳಿತಿದ್ದರು. ಅಲ್ಲಿ ಸಿಂಹ ಆನೆ ಮೊದಲಾದ ಪ್ರಾಣಿಗಳು ಪರ ಸ್ಪರ ವೈರ ವಿರೋಧವನ್ನು ಬಿಟ್ಟು ಆ ಮುನಿಗಳ ಧ್ಯಾನ ಮುದ್ರೆಯಿಂದ ಪ್ರಭಾವಿತರಾಗಿ ಅಲ್ಲಿ ಬಂದು ಕುಳಿತಿದ್ದವು. ಮುನಿಗಳ ಚರಣದಲ್ಲಿ ಮಸ್ತ ಕವಿಟ್ಟು ನಮಸ್ಕರಿಸಿದವು. ಮುನಿಗಳ ಚರಣ ಸ್ಪರ್ಶವಾದ ಕೂಡಲೇ ಆ ಪ್ರಾಣಿಗಳಿಗೆ ಉಪಶಮ ಭಾವವು ಪ್ರಾಪ್ತವಾಯಿತು. ಮತ್ತು ಕಣ್ಣಿನಿಂದ ನೀರು ಸುರಿಯ ಹತ್ತಿತು. ಇದನ್ನು ನೋಡಿ ಬೇರೊಬ್ಬ ಮುನಿಗಳು ತನ್ನ ಗುರುಗಳಿಗೆ ಹೇಳುತ್ತಾರೆ. ಈ ಪ್ರಾಣಿಗಳು ಪಶುಗತಿಯಲ್ಲಿದ್ದರೂ ಮನು ಷ್ಯರ ಹಾಗೆ ಇವುಗಳಿಗೆ ವಿವೇಕವು ಹೇಗೆ ಪ್ರಾಪ್ತವಾಯಿತು ? ಆಗ ಗುರು ಗಳು ' ಭವ್ಯನೇ, ಈ ಪ್ರಾಣಿಗಳ ಪೂರ್ವಭವದ ವೃತ್ತವನ್ನು ಹೇಳುತ್ತೇನೆ. ಕೇಳು. ಈ ಪ್ರಾಣಿಗಳು ಹಿಂದಿನ ಜನ್ಮದಲ್ಲಿ ದೊಡ್ಡ ಶ್ರೀಮಂತ ಕುಲದಲ್ಲಿ ಅಣ್ಣ ತಮ್ಮಂದಿರಾಗಿ ಹುಟ್ಟಿದ್ದವು, ಒಂದು ದಿವಸ ಧನಾರ್ಜನೆಗೋಸ್ಕರ ಇಬ್ಬರೂ ಪರದೇಶಕ್ಕೆ ಹೋಗಿದ್ದರು, ಸಂಪತ್ತಿಯನ್ನು ಸಂಪಾದಿಸಿ ಹಿಂದೆ ಬರುತ್ತಿರುವಾಗ ದಾರಿಯಲ್ಲಿ ಒಂದು ಕಾಡಿನೊಳಗೆ ಊಟಕ್ಕೆಂದು ನಿತ್ತರು ಧನಲೋಭದಿಂದ ಅವರೀರ್ವರ ಮನಸ್ಸಿನಲ್ಲಿಯೂ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ವಿಚಾರವು ಉದಿತವಾಯ್ತು. ಆದರಿಂದ ಇಬ್ಬರೂ ಪಾಪ ಬಂಧವನ್ನು ಮಾಡಿಕೊಂಡರು. ಮತ್ತು ವಿಷದಿಂದ ಮಿಶ್ರಿತವಾದ ಅಡಿಗೆ ಯನ್ನ ತಯ್ಯಾರಿಸಿದರು. ಮತ್ತು ಒಬ್ಬರನ್ನೊಬ್ಬರು ಕೊಲ್ಲುವ ಉತ್ಸಾಹ ದಿಂದ ಇಬ್ಬರೂ ಆ ಭೋಜನವನ್ನು ಮಾಡಿ ಸತ್ತರು. ಮತ್ತು ಈ ಆನೆ ಮತ್ತು ಸಿಂಹದ ಪರ್ಯಾಯವನ್ನು ಧರಿಸಿದರು. ಈಗ ನಮ್ಮ ದರ್ಶನ ದಿಂದ ಈ ಎರಡು ಪ್ರಾಣಿಗಳಲ್ಲಿಯೂ ಉಪಶಮ ಭಾವವಾಗಿ ತಾವು

ಮಾಡಿದ ದುರಾಚರಣೆಗಾಗಿ ಪಶ್ಚಾತ್ತಾಪವಾಗಿದೆ. ಇದನ್ನು ಕೇಳಿ ಆ ಎರಡು ಪ್ರಾಣಿಗಳೂ ತಮ್ಮನ್ನು ಧಿಕ್ಕರಿಸಿ ಭಕ್ತಿಯಿಂದ ಪುನಃ ಪುನಃ ಆ ಮುನಿಗಳ ಚರಣಗಳಲ್ಲಿ ನಮಸ್ಕಾರ ಮಾಡಿದವು. ಆ ಪ್ರಾಣಿಗಳ ಆಯುಷ್ಯವು ಸ್ವಲ್ಪವೇ ಉಳಿದಿದೆ, ಎಂದು ತಿಳಿದು ಗುರುಗಳು ಅವುಗಳಿಗೆ ಪಂಚ ಪಾಪದ ತ್ಯಾಗವನ್ನು ಮಾಡಿಸಿದರು. ಮತ್ತು ಸಲ್ಲೇಖನಾವ್ರತವನ್ನು ಕೊಟ್ಟರು.

ವ್ರತಸಂಯಮ ಶೀಲಯುತ ಕ್ರೀಡಾಸೇ ಹಿತ ಹೋಯ
ಶುದ್ಧಾತಮ ಜಾನೇ ವಿನಾ ಮೋಕ್ಷ ಕದಾಪಿ ನ ಹೋಯ

ವ್ರತ, ಸಂಯಮ ಶೀಲಗಳಿಲ್ಲದೆ ಈ ಜೀವನ ಎಂದೂ ಕಲ್ಯಾಣವಾಗಲಾರದು. ಶುದ್ಧ ಆತ್ಮನ ಅನುಭವವಿಲ್ಲದೆ ಎಂದೂ ಮೋಕ್ಷ ಪ್ರಾಪ್ತವಾಗಲಾರದು. ನೋಡಿ, ಆ ಪ್ರಾಣಿಗಳು ಎಷ್ಟು ಕಾಲದವರೆಗೆ ವೈರ ವಿರೋಧವನ್ನು ಮಾಡಿಕೊಂಡು ಬಂದವು. ಆದರೆ ಇವತ್ತು ಅವುಗಳ ಕಾಲ ಲಬ್ಧಿಯು ಬಂದಿದ್ದರಿಂದ ವ್ರತ ಧಾರಣೆ ಮಾಡಿ ತನ್ನ ಹಿತವನ್ನು ಮಾಡಿಕೊಂಡವು, ಮುನಿ ದರ್ಶನದಿಂದ ಪಾಪೀ ಜೀವಗಳ ಉದ್ಧಾರವೂ ಆಗುತ್ತದೆ. ಆ ಸಮಯದಲ್ಲಿ ಆ ಪ್ರಾಣಿಗಳು ಸಮಾಧಿ ಪೂರ್ವಕ ಶರೀರ ತ್ಯಾಗವನ್ನು ಮಾಡಿದವು. ಮತ್ತು ಸ್ವರ್ಗದಲ್ಲಿ ದೇವತೆಗಳಾಗಿ ಹುಟ್ಟಿದವು. ಅಲ್ಲಿ ಅವಧಿ ಜ್ಞಾನದ ಬಲದಿಂದ ಎಲ್ಲಾ ವಿಷಯವನ್ನು ತಿಳಿದು ಮುನಿಗಳ ಸಮೀಪ ಬಂದು ಅತ್ಯಂತ ಭಕ್ತಿಯಿಂದ ಸ್ವರ್ಗೀಯ ದಿವ್ಯ ಸಾಮಗ್ರಿ ಸಹಿತರಾಗಿ ಮುನಿಗಳ ಪೂಜೆಯನ್ನು ಮಾಡಿದರು. ನೋಡಿ, ಭವ್ಯರೇ! ಆತ್ಮ ಧ್ಯಾನದಲ್ಲಿ ಎಷ್ಟು ಶಕ್ತಿ ಇದೆ. ತಮ್ಮ ಆತ್ಮ ಶಕ್ತಿಯಿಂದ ತಾವು ಪಾರಾಗುತ್ತಾರೆ- ಇತರರನ್ನು ಪಾರಗೊಳಿಸಲು ಸಹಾಯಕರಾಗುತ್ತಾರೆ. ಅಂಥಹ ಯೋಗಿಗಳ ಹೃದಯದಲ್ಲಿ ಆಕಿಂಚನ್ಯ ಧರ್ಮವಿರುತ್ತದೆ. ಭವ್ಯರೇ! ನೀವೂ ಅಂತಃಕರಣವನ್ನು ಶುದ್ಧ ಮಾಡಿ ಉತ್ತಮ ಸುಖವನ್ನು ಕೊಡುವ ಆಕಿಂಚನ್ಯ ಧರ್ಮವನ್ನು ಧರಿಸಿರಿ. ಮತ್ತು ಆತ್ಮ ಶುದ್ಧಿಯನ್ನು ಮಾಡಿಕೊಳ್ಳಿರಿ. ಇದು ಆಚಾರ್ಯರ ಉಪದೇಶವಾಗಿದೆ.

ಭವ್ಯಾತ್ಮರೇ ! ನೀವು ಉತ್ತಮ ಆಕಿಂಚಿನ್ಯ ಧರ್ಮವನ್ನು ಸ್ವೀಕರಿಸಿರಿ. ಸಂಸಾರ ಸಮುದ್ರವನ್ನು ದಾಟಿ ಹೋಗಲು ಅಕಿಂಚಿನ್ಯ ಧರ್ಮವು ಹಡಗಿನಂತಿದೆ. ಪರಿಗ್ರಹಗಳನ್ನು ದುಃಖದಾಯಕವಾಗಿವೆ ಎಂದು ತಿಳಿದು ಅವುಗಳನ್ನು ತ್ಯಜಿಸಿರಿ. ಯಾರಲ್ಲಿ ಆಕಿಂಚಿನ್ಯ ಧರ್ಮವಿರುತ್ತದೆಯೋ ಅವರು ಪರಿಗ್ರಹದಲ್ಲಿ ಆಸಕ್ತರಾಗಿರುವುದಿಲ್ಲ ಅವರು ಆತ್ಮವಿಚಾರದಲ್ಲಿ ಲೀನರಾಗಿರುತ್ತಾರೆ. ದೇಹಾದಿಕ ಭೋಗಗಳಲ್ಲಿ ಲೀನರಾಗಿರುವುದಿಲ್ಲ. ಅವರು ತನ್ನ ರತ್ನತ್ರಯ ಸ್ವರೂಪದಲ್ಲಿ ಪ್ರವೃತ್ತಿಯನ್ನಿಡುತ್ತಾರೆ. ನಿಜಾನಂದ ಸುಖಾಮೃತವನ್ನು ಕುಡಿಯುತ್ತಿರುತ್ತಾರೆ. ಇದೇ ಆಕಿಂಚಿನ್ಯ ಧರ್ಮವಾಗಿದೆ.

**ಚಾರಿತದರ್ಶನ ಜ್ಞಾನಮಯ ಜೀವಸ್ಸಸಮಯಿಓ ಜಾನ**
**ಪುದ್ಗಲ ಕರ್ಮ ಪ್ರದೇಶಮಯ ಪರಸಮಯಿಓ ಸೋ ಮಾನ**

ಸಮಯಸಾರ.

ಯಾವ ಜೀವನು ದರ್ಶನ, ಜ್ಞಾನ ಚಾರಿತ್ರದಲ್ಲಿ ಸ್ಥಿರನಾಗಿರುತ್ತಾನೆಯೋ ಆ ಜೀವನ ಅದೇ ಸ್ವಸಮಯವೆಂದು ಹೇಳಲಾಗಿದೆ. ಪುದ್ಗಲ ರೂಪವಾದ ಕರ್ಮ ಪ್ರದೇಶಗಳನ್ನು ತನ್ನದೆಂದು ತಿಳಿಯುವವನು ಪರ ಸಮಯನಾಗಿದ್ದಾನೆ. ಮುನಿಗಳು ಸದಾ ಸ್ವಸಮಯದಲ್ಲಿರುತ್ತಾರೆ. ಪರ ಸಮಯವನ್ನು ಅವರು ಪುದ್ಗಲರೂಪವೆಂದು ತಿಳಿದು ಅದನ್ನು ಬಿಡುತ್ತಾರೆ. ಇಂದ್ರಿಯ ವಿಷಯಗಳ ಕಡೆ ಹೋಗುತ್ತಿರುವ ಮನಸ್ಸನ್ನು ಭೇದವಿಜ್ಞಾನದ ಬಲದಿಂದ ನಿರೋಧಿಸಿ ಅವರು ಸ್ವಸ್ವರೂಪದಲ್ಲಿ ಮಗ್ನರಾಗಿರುತ್ತಾರೆ. ಇದಕ್ಕೇನೆಯೇ ಆಕಿಂಚಿನ್ಯ ಧರ್ಮವೆಂದು ಹೇಳಲಾಗಿದೆ.

ಆಕಿಂಚಿನ್ಯ ಧರ್ಮವನ್ನು ಧರಿಸುವವರಿಗೆ ದೇಹದ ಮೇಲಿನ ಆಸಕ್ತಿಯು ದೂರವಾಗುತ್ತದೆ. ಸಾಂಸಾರಿಕ ಪ್ರಾಣಿಗಳ ಸುಖವು ದುಃಖಮಯವಾಗಿರುತ್ತದೆ. ಇಂದ್ರ ಅಹಮಿಂದ್ರ ಚಕ್ರವರ್ತಿ ಮೊದಲಾದವರ ಸುಖವೂ ನಿಜವಾದ ಸುಖವಲ್ಲ. ಹೀಗಿರುವಾಗ ವಿವೇಕಿಗೆ ಆ ಸುಖದ

ಇಚ್ಛೆಯು ಹೇಗಾಗಬಹುದು. ರತ್ನ ಸುವರ್ಣ ರಾಜ್ಯ ಐಶ್ವರ್ಯ ಸ್ತ್ರೀ ಪುತ್ರ ಮೊದಲಾದ ಎಲ್ಲಾ ಪರಿಗ್ರಹಗಳನ್ನು ಕಸಕಡ್ಡಿಗಳೆಂದು ತಿಳಿದು ಅವರು ಬಿಡುತ್ತಾರೆ. ಆಕಿಂಚಿನ್ಯ ಧರ್ಮವಂತು ಪರಮ ವೀತರಾಗ ವೃತ್ತಿಯಾಗಿದೆ. ಸಂಸಾರದ ಅಂತವು ಯಾರಿಗೆ ಆಗಿರುತ್ತದೆಯೋ ಅವರಿಗೇನೆಯೋ ಈ ಧರ್ಮವಾಗುತ್ತದೆ. ಈ ಆಕಿಂಚಿನ್ಯ ಧರ್ಮವು ಪ್ರಾಪ್ತವಾದವರಿಗೆ ಶುದ್ಧ ಆತ್ಮನನ್ನು ವಿಚಾರ ಮಾಡುವ ಶಕ್ತಿಯು ಪ್ರಕಟವಾಗುತ್ತದೆ. ಅಂಥಹ ಯೋಗಿಗಳಿಗೆ ಜ್ಞಾನ ಚೇತನವೂ ಆಗುತ್ತದೆ.

ನ ಸ್ಯಾದಾತ್ಮೋಪಲಬ್ಧಿರ್ವಾ ಸಮ್ಯಗ್ದರ್ಶನಲಕ್ಷಣಂ
ಶುದ್ಧಾ ಚೇದಸ್ತಿ ಸಮ್ಯಕ್ತ್ವಂ ನ ಚೇಚ್ಛೆದ್ಧಾ ನ ಸಾಸುದ್ಯ್ಕ್

ಪಂಚಾಧ್ಯಾಯಿ.

ಹೀಗೆ ಆತ್ಮಧ್ಯಾನಿಗಳು ಯಾವಾಗಲೂ ಶುದ್ಧಾತ್ಮಲಬ್ಧಿಯಲ್ಲಿ ಲೀನರಾಗಿರುತ್ತಾರೆ. ಅವರಿಗೆ ಜ್ಞಾನ ಚೇತನವಿರುತ್ತದೆ. ಅವರು ತನ್ನ ಜ್ಞಾನ ಚೇತನದಲ್ಲಿದ್ದು ಆತ್ಮಾನುಭವವನ್ನು ಮಾಡುತ್ತಿರುತ್ತಾರೆ. ಆ ಸಾಧುಗಳು ಶರೀರಧಾರಿಯಾಗಿದ್ದರೂ ಭಗವಂತನಂತೆ ಪವಿತ್ರರಾಗಿರುತ್ತಾರೆ ಅವರು ತನ್ನ ಉದ್ಧಾರವನ್ನು ಮಾಡಿಕೊಳ್ಳುತ್ತಾರೆ. ಪರ ಜೀವರುಗಳ ಉದ್ಧಾರವನ್ನು ಮಾಡುತ್ತಾರೆ. ಮತ್ತು ಜೈನಧರ್ಮದ ರಕ್ಷಣೆಯನ್ನು ಮಾಡುತ್ತಾರೆ.

ನೋಡಿ, ಒಂದು ಸಾರಿ ಕುಂದ ಕುಂದಾಚಾರ್ಯರು ಸಂಘ ಸಹಿತವಾಗಿ ಗಿರನಾರ ಕ್ಷೇತ್ರ ಯಾತ್ರೆಗೆ ಹೋಗಿದ್ದರು. ಆಗ ಅಲ್ಲಿ ಶ್ವೇತಾಂಬರಾಚಾರ್ಯರಾದ ಶುಕ್ಲಾಚಾರ್ಯರು ಅಲ್ಲಿ ಬಂದಿದ್ದರು. ಇಬ್ಬರಲ್ಲಿಯೂ ಅಲ್ಲಿ ಪ್ರತಿನಿತ್ಯ ಶಾಸ್ತ್ರ ಚರ್ಚೆಯಾಗುತ್ತಿತ್ತು. ಪ್ರತಿ ಸಮಯದಲ್ಲಿಯೂ ಕುಂದಕುಂದಾಚಾರ್ಯರು ಅವರನ್ನು ನಿರುತ್ತರರನ್ನಾಗಿ ಮಾಡುತ್ತಿದ್ದರು. ಆಗ ಶುಕ್ಲಾಚಾರ್ಯರು ಸಿಟ್ಟಿಗೆ ಬಂದು ತನ್ನ ಮಂತ್ರ ಪ್ರಭಾವದಿಂದ ಕುಂದಕುಂದರ ಕಮಂಡಲದಲ್ಲಿ ಮೀನುಗಳನ್ನು ತುಂಬಿ ಬಿಟ್ಟಿದ್ದರು.

ಮತ್ತು ತಮ್ಮ ಶಿಷ್ಯರಿಗೆ ಹೇಳಿದರು. ನೋಡಿ, ಈ ದಿಗಂಬರ ಸ್ವಾಮಿಯ ಕಮಂಡಲಿನಲ್ಲಿ ಏನಿದೆ ? ಆಗ ಕುಂದಕುಂದರಿಗೆ ಏನೋ ಕಪಟವಿದೆ ಎಂದು ಗೊತ್ತಾಯಿತು. ಕೂಡಲೇ ವಿದೇಹ ಕ್ಷೇತ್ರಸ್ಥ ಶ್ರೀ ಸಿಮಂಧರ ಭಗವಂತನನ್ನು ಸ್ಮರಿಸಿ ನಮಸ್ಕಾರ ಮಾಡಿದರು. ನಂತರ ಆ ಕಮಂಡಲು ತೆಗೆಯಲಾಯ್ತು. ಅದರಲ್ಲಿ ಸುಂದರವಾದ ಕಮಲ ಪುಷ್ಪದ ಸಮೂಹ ಹೊರಡಿತು. ಇದನ್ನು ನೋಡಿ ಅಲ್ಲಿದ್ದ ಎಲ್ಲರಿಗೂ ಆಶ್ಚರ್ಯವಾಯಿತು. ಆಕಾಶದಿಂದ ದೇವತೆಗಳು ಕುಂದಕುಂದಾಚಾರ್ಯರ ಮೇಲೆ ಪುಷ್ಪ ವೃಷ್ಟಿಯನ್ನು ಮಾಡಿದರು. ಜಯ ಜಯ ಕಾರ ಮಾಡಿ ಅವರನ್ನು ದೇವತೆಗಳು ಸ್ತುತಿಸಿದರು. ಕುಂದಕುಂದರ ಕೀರ್ತಿಯು ಎಲ್ಲೆಡೆಯಲ್ಲಿಯೂ ಹಬ್ಬಿತು.

ಧವಲಾಂ ಭಾರತೀಂ ತಸ್ಯ ಕೀರ್ತಿಂ ಚ ವಿಧುನಿರ್ಮಲಾಂ
ಧವಲೀಕೃತನಿಃಶೇಷಭುವನಾಂ ತಂ ನಮಾಮ್ಯಹಂ

ಧವಲಗ್ರಂಥ.

ಅವರ ಪವಿತ್ರ ಕೀರ್ತಿಯಿಂದ ಲೋಕವು ಪವಿತ್ರವಾಯಿತು. ಶುಕ್ಲಾಚಾರ್ಯರಿಗೆ ಖೇದವಾಯ್ತು. ಆ ಸಮಯದಲ್ಲಿ ಶ್ವೇತಾಂಬರ ದಿಗಂಬರರಲ್ಲಿ ವಾದವೂ ಜರುಗಿತು. ಆ ಸಮಯದಲ್ಲಿ ಯಾರು ಮೊದಲು ಯಾತ್ರೆಯನ್ನು ಮಾಡುವುದು ಎಂದು ವಿವಾದ ಹುಟ್ಟಿ ದೇವಸ್ಥಾನದಲ್ಲಿ ಮಹಾವೀರ ಸ್ವಾಮಿಯ ದಿವ್ಯಧ್ವನಿಯ ಪ್ರತೀಕವಾದ ಸರಸ್ವತಿಯ ಪಾಷಾಣ ಮೂರ್ತಿ ಇದೆ. ಆ ಮೂರ್ತಿಯು ಯಾರು ಮೊದಲು ಯಾತ್ರೆ ಮಾಡಬೇಕೆಂದು ಹೇಳುತ್ತದೆಯೋ ಅವರೇ ಮೊದಲು ಯಾತ್ರೆಯನ್ನು ಮಾಡಬೇಕೆಂದು ನಿರ್ಣಯವಾಯಿತು. ಆಗ ಶುಕ್ಲಾಚಾರ್ಯರು ಇದನ್ನು ಒಪ್ಪಿ ಮೂರ್ತಿಯ ಎದುರಿನಲ್ಲಿ ಮಂತ್ರ ಜಪವನ್ನು ಮಾಡಲು ಕೂತರು. ಆದರೆ ದೇವಿಯು ಏನೂ ಹೇಳಲಿಲ್ಲ ಅವರಿಗೆ ಬಹಳ ಖೇದವಾಯಿತು. ಪುನಃ ದೇವಿಗೆ ಪ್ರಾರ್ಥಿಸಿದರು. ದೇವೀ ! ನನ್ನ ಇಷ್ಟಸಿದ್ಧಿಯನ್ನು ಮಾಡಿದರೆ ಅಂದರೆ ಶ್ವೇತಾಂಬರ ಮತ ಶ್ರೇಷ್ಠವಾಗಿದೆ. ಅವರು ಮೊದಲು

ಯಾತ್ರೆಯನ್ನು ಮಾಡಬೇಕು ಎಂದು ಹೇಳಿದರೆ ನಿನಗೆ ಕೋಟ್ಯಾವಧಿ ರೂಪಾಯಿಗಳ ವಸ್ತ್ರಾಲಂಕಾರ ಏರಿಸುತ್ತೇವೆಂದರು. ಆದರೂ ದೇವಿಯು ಮಾತಾಡಲಿಲ್ಲ. 'ನಾನ್ಯಥಾ ವಾದಿನೋ ಜನಾಃ' ಜಿನೇಂದ್ರರ ವಚನದಲ್ಲಿ ಅನ್ಯಥಾಭಾವವಿರುವುದಿಲ್ಲ. ಜಿನೇಂದ್ರ ಭಕ್ತರೂ ಅನ್ಯಥಾ ವಚನವನ್ನು ಹೇಳುವುದಿಲ್ಲ. ಮಿಥ್ಯಾದೃಷ್ಟಿಗಳ ತತ್ವಜ್ಞಾನವು ವ್ಯರ್ಥವಾಗಿರುತ್ತದೆ.

ತತ್ವಜ್ಞಾನಂ ಚ ಮೋಘಂ ಸ್ಯಾತ್ತದ್ವಿರುದ್ಧ ಪ್ರವರ್ತಿನಾಂ
ಪಾಣೌ ಕೃತೇನ ದೀಪೇನ ಕಿಂಕೂಪೇ ಪತತಾಂ ಫಲಂ ॥

ಕ್ಷತ್ರಚೂಡಾಮಣಿ.

ತತ್ವ ಜ್ಞಾನವಿದ್ದರೂ ಅದರ ವಿರುದ್ಧವಾಗಿ ವರ್ತಿಸುವವರಿಗೆ ಅದರಿಂದ ಏನೂ ಪ್ರಯೋಜನ ? ಕೈಯಲ್ಲಿ ದೀಪ ಹಿಡಿದು ಕೊಂಡರೂ ಬಾವಿಯಲ್ಲಿ ಬೀಳುವವರಿಗೆ ಆ ದೀಪದಿಂದ ಏನು ಪ್ರಯೋಜನ ? ಈ ಪ್ರಕಾರ ಶುಕ್ಲಾಚಾರ್ಯರ ತತ್ವ ವಿರೋಧೀ ವಿಚಾರಗಳನ್ನು ಕೇಳಿ ಆ ದೇವಿಯು ಮೌನದಿಂದಿದ್ದಳು. ಅನಂತರ ಕುಂದಕುಂದಾಚಾರ್ಯರು ತನ್ನ ಪಿಂಛಿಯನ್ನು ಕೈಯಲ್ಲಿ ಹಿಡಿದುಕೊಂಡು ಆ ಪಾಷಾಣ ಮೂರ್ತಿಯ ಎದುರಿನಲ್ಲಿ ಹೋಗಿ ಕುಳಿತುಕೊಂಡರು. ಮೊದಲು ಸೀಮಂಧರ ಸ್ವಾಮಿಗೆ ನಮಸ್ಕಾರ ಮಾಡಿ " ದೇವೀ ! ನಿಜವಾಗಿ ಹೇಳು. ಯಾವ ಮತವು ಆದಿಮತವಾಗಿದೆ ? ಶ್ವೇತಾಂಬರವೋ ದಿಗಂಬರವೋ. ಆಚಾರ್ಯರ ನಿರ್ಭಯವಾದ ಪ್ರಶ್ನೆಯನ್ನು ಕೇಳಿ ಮೇಘ ಗರ್ಜನೆಯಂತೆ ಗಂಭೀರವಾಣಿಯಿಂದ ದೇವಿಯು ಹೇಳಿದಳು. ಈ ಮೂರು ಲೋಕದಲ್ಲಿಯೂ ದಿಗಂಬರ ಮತವೇ ಪ್ರಸಿದ್ಧವಾಗಿದೆ. ಮತ್ತು ಶ್ರೇಷ್ಠವಾಗಿದೆ ಅದು ಆಧುನಿಕವಾಗಿಲ್ಲ. ಪರಂಪರೆಯಿಂದ ಅನಾದಿ ಅನಿಧನವಾಗಿದೆ. ಬಾಕಿ ಎಲ್ಲಾ ಧರ್ಮಗಳು ಆಧುನಿಕ ಮತ್ತು ಸದೋಷವಾಗಿವೆ, ಈ ವಿಷಯವನ್ನು ಕೇಳಿ ಆ ಎಲ್ಲರ ಮನಸ್ಸು ಖೇದ ಖಿನ್ನವಾಯಿತು. ಆ ಸಮಯನಲ್ಲಿ ಕುಂದಕುಂದಾಚಾರ್ಯರು

ಮೊದಲು ರಥ ಯಾತ್ರೆಯನ್ನು ಹೊರಡಿಸಿದರು. ಮತ್ತು ಜೈನ ಧರ್ಮದ ವಿಶೇಷ ಪ್ರಭಾವನೆಯಾಯಿತು. ಹೀಗೆ ಜೈನ ಇತಿಹಾಸದಲ್ಲಿ ನಮೂದಿಸಲಾಗಿದೆ.

ಆದುದರಿಂದ ಭವ್ಯರೇ ! ಆತ್ಮಧ್ಯಾನದಲ್ಲಿ ಮಗ್ನರಾದ ಯೋಗಿಗಳ ಪ್ರಭಾವವು ಎಷ್ಟಿದೆ ? ಎಂದು ನೋಡಿರಿ. ಅವರು ತಮ್ಮ ಆತ್ಮ ಸಾಮರ್ಥ್ಯದಿಂದ ಕಠಿಣ ಪ್ರಸಂಗದಲ್ಲಿಯೂ ಜೈನ ಧರ್ಮವನ್ನು ರಕ್ಷಿಸಿದರು. ಆದುದರಿಂದ ನೀವು ಮಿಥ್ಯಾ ಪರಿಣಾಮಗಳನ್ನು ಬಿಟ್ಟು ಸಮ್ಯಗ್‌ದೃಷ್ಟಿಗಳಾಗಿ ಆತ್ಮ ಕಲ್ಯಾಣವನ್ನು ಮಾಡುವ ಉತ್ತಮ ಆಕಿಂಚನ್ಯ ಧರ್ಮವನ್ನು ನಿಮ್ಮ ಹೃದಯವೆಂಬ ಪೆಟ್ಟಿಗೆಯಲ್ಲಿಡಿರಿ. ಮತ್ತು ಆತ್ಮ ಸಿದ್ಧಿಯನ್ನು ಮಾಡಿಕೊಳ್ಳಿರಿ. ಹೀಗೆ ಪರಂಪರೆಯಿಂದ ಜೈನಾಚಾರ್ಯರ ಉಪದೇಶವಾಗಿದೆ. ಅನಾದಿಕಾಲದಿಂದ ಈ ಜೀವನು ಪರಭಾವದಿಂದ ಕರ್ಮ ಬಂಧನವನ್ನು ಮಾಡುತ್ತಿದ್ದಾನೆ. ಕೇವಲ ವೈಭಾವಿಕ ಶಕ್ತಿಯೇ ಬಂಧಕ್ಕೆ ಕಾರಣವಾಗಿಲ್ಲ.

**ತತ್ರ ಬಂಧೇ ನ ಹೇತುಃ ಸ್ಯಾತ್ ಶಕ್ತಿರ್ವೈಭಾವಿಕೀ ಪರಂ**
**ನೋಪಯೋಗೋಪಿ ತತ್ಕಿಂತು ಪರಾಯತ್ತಂ ಪ್ರಯೋಜಕಂ ||**

ಪಂಚಾಧ್ಯಾಯೀ.

ಕೇವಲ ವೈಭಾವಿಕ ಶಕ್ತಿ ಮತ್ತು ಅದರ ಉಪಯೋಗವು ಬಂಧಕ್ಕೆ ಕಾರಣವಾಗುವುದಿಲ್ಲ. ಜೀವ ಪುದ್ಗಲಗಳ ಬಂಧಕ್ಕೆ ಪರಭಾವವು ಕಾರಣವಾಗಿದೆ, ಜೀವನ ಗುಣಗಳು ಕರ್ಮದ ಆಧೀನವಾಗಿರುವುದರಿಂದ ಸ್ವತಂತ್ರ ಪರಿಣಮನೆಯಾಗಲು ಸಾಧ್ಯವಿಲ್ಲ. ಹಾಗೆಯೇ ಕರ್ಮ ಪುದ್ಗಲಗಳೂ ಜೀವನ ಆಧೀನವಾಗಿರುವುದರಿಂದ ಅವುಗಳೂ ತನ್ನ ಸ್ವತಂತ್ರ ಪರಿಣಮನೆಯನ್ನು ಮಾಡಲು ಸಾಧ್ಯವಿಲ್ಲ. ಅನಾದಿಕಾಲದಿಂದ ಬಂದ ಈ ಪರಾಧೀನತೆಯು ಬಂಧಕ್ಕೆ ಕಾರಣವಾಗಿದೆ. ಇದನ್ನು ವಿವೇಕಿಗಳು ತಿಳಿದು ಪರಪರಿಣತಿಯನ್ನು ತ್ಯಜಿಸಿ ಸ್ವಜ್ಞಾನ ದರ್ಶನ ರೂಪವಾದ ತಮ್ಮ ಸ್ವರೂಪದಲ್ಲಿ ಸ್ಥಿರವಾಗಿರಬೇಕು.

ಜ್ಞಾನೀ ಕರಮು ಅನೇಕಕೋ ಕರೇ ನ ಭೋಗೇ ಆಪಿ
ಕೇವಲಜಾನೇ ಕರಮ ಫಲ ಬಂಧ ಪುಣ್ಯ ಅರು ಪಾಪ ||

ಸಮಯಸಾರ.

ವ್ಯವಹಾರದಲ್ಲಿ ಈ ಆತ್ಮನು ಅನೇಕ ಪ್ರಕಾರದ ಪುಣ್ಯ ಪಾಪರೂಪ ವಾದ ಕಾರ್ಯಗಳನ್ನು ಮಾಡುತ್ತಿರುತ್ತಾನೆ. ಆದುದರಿಂದಲೇ ಅವನು ಕರ್ತಾ ಮತ್ತು ಭೋಕ್ತನೆಂದು ಹೇಳಲ್ಪಡುತ್ತಾನೆ. ಯಥಾರ್ಥವಾಗಿ ವಿಚಾರ ಮಾಡಿದರೆ ಈ ಆತ್ಮನು ತನ್ನ ಜ್ಞಾನ ಗುಣದ ಕರ್ತಾ ಮತ್ತು ಭೋಕ್ತನಾಗಿದ್ದಾನೆ. ಜ್ಞಾನವೇ ಆತ್ಮನ ಸ್ವರೂಪವಾಗಿದೆ. ಅವನು ಜ್ಞಾನ ಗುಣದಿಂದ ಘಟಪಟಾದಿ ಪದಾರ್ಥಗಳನ್ನು ತಿಳಿಯುತ್ತಾನೆ.

ಜ್ಞಾನಂ ಸ್ವಯಂ ಘಟಜ್ಞಾನಂ ಪರಿಚ್ಛಿಂ ಪರಿಚ್ಛಿದ್ಯಥಾ ಘಟಂ
ನಾರ್ಥಜ್ಞಾನಂ ಘಟೋಯಂ ಸ್ಯಾಜ್ಞಾನಂ ಜ್ಞಾನಂ
ಘಟೋ ಘಟಃ ||

ಪಂಚಾಧ್ಯಾಯೀ.

ಆದರೆ ಈ ಆತ್ಮನು ಗಡಿಗೆಯನ್ನು ತಿಳಿದರೂ ಅವನು ಗಡಿಗೆಯ ರೂಪದಲ್ಲಿ ಆಗುವುದಿಲ್ಲ. ಅಥವಾ ವಸ್ತ್ರದ ರೂಪದಲ್ಲಿ ಆಗುವುದಿಲ್ಲ. ಅದೇ ಪ್ರಕಾರ ಅನಾದಿಕಾಲದಿಂದ ಕರ್ಮಬಂಧನದಿಂದ ಕೂಡಿದ ಆತ್ಮನು ಕರ್ಮ ಗಳ ಮಧ್ಯದಲ್ಲಿ ಇದ್ದರೂ ತನ್ನ ಜ್ಞಾನ ದರ್ಶನ ಗುಣಗಳನ್ನು ಬಿಡುವು ದಿಲ್ಲ. ಜ್ಞಾನಿಗಳಾದ ಮುನಿಗಳು ವಸ್ತು ಸ್ವರೂಪವನ್ನು ತಿಳಿದು ಪರ ಕರ್ಮದ ನಿಮಿತ್ತದಿಂದ ಆಗುವ ಸ್ವಭಾವವನ್ನು ತಿಳಿಯುತ್ತಾರೆ.

ವಾರಿಧಿಃ ಸೋತ್ತರಂಗೋಪಿ ವಾಯುನಾ ಪ್ರೇರಿತೋ ಯಥಾ
ನಾರ್ಥಾದ್ವೈಕ್ಯ ತೆದಾತ್ವೇಪಿ ಪಾರಾವಾರ ಸಮೀರಯೋಃ ||

ಪಂಚಾಧ್ಯಾಯೀ.

ಇವು ಆತ್ಮನ ಸ್ವಭಾವವಲ್ಲ. ಏಕೆ ? ಗಾಳಿಯ ಕಾರಣದಿಂದ ಸಮು ದ್ರದಲ್ಲಿ ತರಂಗಗಳು ಹುಟ್ಟುತ್ತವೆ. ಆದರೆ ನಿಜವಾಗಿ ವಿಚಾರ ಮಾಡಿದರೆ ಸಮುದ್ರ ಮತ್ತು ಗಾಳಿಯು ಒಂದೇ ವಸ್ತುವಲ್ಲ. ಹಾಗೆಯೇ ಈ ಆತ್ಮನು ಪರದ್ರವ್ಯಗಳ ಸಂಯೋಗದಿಂದ ಶುಭಾಶುಭ ಕರ್ಮಗಳನ್ನು ಮಾಡುತ್ತಾನೆ. ಮತ್ತು ಅವರ ಫಲಗಳನ್ನು ಅನುಭವಿಸುತ್ತಾನೆ. ಹಾಗೆಯೇ ಸಂಸಾರ ಸಮುದ್ರದಲ್ಲಿ ಆಲೆದಾಡುತ್ತಾನೆ. ಸಂಸಾರಿ ಎಂದು ಹೇಳಲ್ಪಡುತ್ತಾನೆ. ನಿಜವಾಗಿ ವಿಚಾರ ಮಾಡಿದರೆ ರಾಗ ಭಾವವೇ ಸಂಸಾರದ ವೃದ್ಧಿಯನ್ನು ಮಾಡುತ್ತದೆ. ಭೇದ ವಿಜ್ಞಾನಿಗಳು ತನ್ನ ಸ್ವರೂಪದಲ್ಲಿಯೇ ಲೀನರಾಗಿ ರುತ್ತಾರೆ. ಈ ವಿಷಯದಲ್ಲಿ ಒಂದು ಕಡೆ ಹೀಗೆ ಹೇಳಿದ್ದಾರೆ.

ತನ್ನೊಳೆ ತನ್ನನೋಳ್ಪ ಋಷಿಗನ್ಯರ ನೋಟಮದೇಕೆ ಚಿದ್ಗುಣೋ
ತ್ಪನ್ನ ಸುಧಾನ್ನಮುಣ್ಬ ಮುನಿಗೊಳ್ಳುಣಿಸೆಂಬ ವಿವಕ್ಷೆವಿಕೆಸಿ-
ದ್ಧಂ ನಮೋ ಎಂಬ ವಾಕ್ಯಮಿರೆ ಬೇರ್ನುಡಿಯೇಕೆ ನಿಜಾತ್ಮ
ರೂಪದೋಳ್
ನಿನ್ನೊಡನಾಡುವಂಗುಳಿದ ಗೋಷ್ಠಿಗಳೇಕಪರಾಜಿತೇಶ್ವರಾ ॥

ತನ್ನಲ್ಲಿ ತನ್ನ ಸ್ವರೂಪವನ್ನು ನೋಡುವ ಮುನಿಗಳಿಗೆ ಬೇರೆ ವಸ್ತುಗಳನ್ನು ನೋಡುವ ಇಚ್ಛೆಯು ಏಕಾಗುತ್ತದೆ ? ಆತ್ಮ ಸ್ವರೂಪದ ಲ್ಲಿದ್ದು ಧ್ಯಾನವೆಂಬ ಅಮೃತಾನ್ನವನ್ನು ಭುಂಜಿಸುವ ಯೋಗಿಗಳಿಗೆ ನೀರಸ ವಾದ ಪುದ್ಗಲಾನ್ನದಿಂದ ಏನು ಪ್ರಯೋಜನ ? 'ಓಂನಮಃ ಸಿದ್ಧೇಭ್ಯ' ಎಂಬ ಮಂತ್ರವಿದ್ದ ಯೋಗಿಗಳಿಗೆ ಅನ್ಯ ವಚನಗಳಿಂದೇನಾಗಬೇಕು ? ಪರಮಾತ್ಮನ್ ! ಯಾವ ಯೋಗಿಗಳು ನಿನ್ನೊಡನೆ ಮಾತನಾಡಿ ಆತ್ಮ ನಿರೀಕ್ಷಣೆಯನ್ನು ಮಾಡುತ್ತಾರೆಯೋ ಅವರಿಗೆ ಉಳಿದ ಮಾತುಗಳಿಂದೇ ನಾಗಬೇಕು ? ಹೀಗೆ ಮುನಿಗಳು ತನ್ನ ಆತ್ಮ ಸ್ವರೂಪದಲ್ಲಿದ್ದು ದುರ್ಲಭ ವಾದ ಆನಂದವೆಂಬ ಅಮೃತವನ್ನು ಪಾನ ಮಾಡುತ್ತಿರುತ್ತಾರೆ. ಇದಕ್ಕೇ ನೆಯೇ ಆಕಿಂಚಿನ್ಯ ಭಾವನೆ ಎಂದು ಹೇಳಲಾಗಿದೆ.

ಒಂದು ಸಾರಿ ಹೀಗೆ ಆಕಿಂಚಿನ್ಯ ಭಾವನೆಯಲ್ಲಿದ್ದ ಒಬ್ಬ ಯೋಗಿಗಳು ವಿಹಾರ ಮಾಡುತ್ತಾ ಕಾಡಿನಲ್ಲಿ ಹೋಗುತ್ತಿದ್ದರು. ಆ ಸಮಯದಲ್ಲಿ ಅವರ ಪೂರ್ವೋಪಾರ್ಜಿತ ಕರ್ಮದ ಉದಯದಿಂದ ಅವರಿಗೆ ಕಣ್ಣಿನಿಂದ ಕಾಣದ ಹಾಗಾಯ್ತು. ಅವರು ಮುಂದೆ ಹೋಗದೆ ಅಲ್ಲಿಯೇ ಕುಳಿತು ಬಿಟ್ಟರು. ಯಾಕಂದರೆ ಮುನಿಗಳು ಈರ್ಯಾ ಸಮಿತಿ ಪೂರ್ವಕ ನಡೆಯುತ್ತಾರೆ. ಕಣ್ಣಿನಿಂದ ಕಾಣದಿರುವುದರಿಂದ ಈರ್ಯಾ ಸಮಿತಿಯ ಪಾಲನೆಯಾಗಲು ಸಾಧ್ಯವಿಲ್ಲ. ಆದುದರಿಂದ ಅಲ್ಲಿಯೇ ಕುಳಿತರು. ಅಶುಭ ಕರ್ಮದ ಉದಯವು ಯಾರನ್ನೂ ಬಿಡುವುದಿಲ್ಲ. ಆಗ ಅವರು ತನ್ನ ಆತ್ಮ ಧ್ಯಾನದಲ್ಲಿ ಲೀನರಾಗಿದ್ದು ತನ್ನ ಆತ್ಮ ಶಾಂತಿಯಲ್ಲಿ ಮನಸ್ಸನ್ನು ಸ್ಥಿರ ಮಾಡಿ ಶಾಂತಿನಾಥ ಭಗವಂತನ ಸ್ತೋತ್ರ ಮಾಡ ತೊಡಗಿದರು.

**ಶಾಂತಿಂ ಶಾಂತಿ ಜಿನೇಂದ್ರ ಶಾಂತಮನಸಸ್ತ್ವತ್ಪಾದಪದ್ಮಾಶ್ರಯಾತ್**
**ಸಂಪ್ರಾಪ್ತಾ: ಪೃಥಿವೀತಲೇಷು ಬಹವಃ ಶಾಂತ್ಯರ್ಥಿನಃ ಪ್ರಾಣಿನಃ**
**ಕಾರುಣ್ಯಾನ್ಮಮ ಭಾಕ್ತಿಕಸ್ಯ ಚ ವಿಭೋದೃಷ್ಟಿಂ ಪ್ರಸನ್ನಾಂಕುರು**
**ತ್ವತ್ಪಾದದ್ವಯದೈವತಸ್ಯ ಗದತಃಶಾಂತ್ಯಷ್ಟಕಂ ಭಕ್ತಿತ: ||**

ಶಾಂತಿಭಕ್ತಿ.

ಭಗವನ್, ನಿನ್ನ ಚರಣಗಳೆಂಬ ಕಮಲಗಳ ಆಶ್ರಯವನ್ನು ಮಾಡಿ ಅನೇಕ ಭವ್ಯ ಜೀವರು ಈ ಸಂಸಾರವೆಂಬ ಅಶಾಂತಿಯ ಸಮುದ್ರವನ್ನು ದಾಟಿ ಹೋಗಿ ಅವಿನಶ್ವರವಾದ ಮೋಕ್ಷವೆಂಬ ಪರಮ ಶಾಂತಿಯ ಧಾಮವನ್ನು ಪಡೆದಿದ್ದಾರೆ. ಪ್ರಭೋ! ಅತ್ಯಂತ ಭಕ್ತಿಯಿಂದ ಶಾಂತ್ಯಷ್ಟಕದ ರೂಪದಲ್ಲಿ ನಿಮ್ಮ ಭಕ್ತಿಯನ್ನು ಮಾಡುತ್ತಿರುವ ಈ ಭಕ್ತನ ದೃಷ್ಟಿಯನ್ನು ನಿರ್ಮಲವನ್ನಾಗಿ ಮಾಡಿರಿ, ಎಂದು ಸ್ತೋತ್ರ ಮಾಡಲು ಮುನಿಗಳ ಕಣ್ಣಿನ ರೋಗವು ತತ್‌ಕ್ಷಣ ದೂರವಾಗಿ ಮೊದಲಿನಂತೆ ಕಣ್ಣು ಕಾಣ ಹತ್ತಿತು.

ನೋಡಿ, ಆತ್ಮ ಭಕ್ತಿಯ ಪ್ರಭಾವವೆಷ್ಟಿದೆ ? ಆದುದರಿಂದ ಪ್ರತಿ ಒಬ್ಬರೂ ದೃಢವಾದ ವಿಶ್ವಾಸವನ್ನಿಟ್ಟು ತನ್ನ ಆತ್ಮ ಸ್ವರೂಪವನ್ನು ಧ್ಯಾನಿ

ಮಾವಿನ ಹಣ್ಣನ್ನು ಕೊಯಿದನು. ಆ ಮಾವಿನ ಹಣ್ಣು ಕೈಯಿಂದ ಜಾರಿ ಬಿದ್ದು ಒಂದು ಬಿಲದೊಳಗೆ ಹೋಯಿತು. ಆ ಬಿಲದಿಂದ ಮಾವಿನ ಹಣ್ಣನ್ನು ತೆಗೆಯುತ್ತಿದ್ದಾಗ ಅದರೊಳಗಿದ್ದ ಸರ್ಪವು ಇವನ ಕೈಯನ್ನು ಕಚ್ಚಿ ಬಿಟ್ಟಿತು. ಆಗ ಅವನು ಅತ್ಯಂತ ಭಕ್ತಿಯಿಂದ ಮುನಿಗಳ ಸಮೀಪಕ್ಕೆ ಹೋಗಿ ನಾಲ್ಕು ವಿಧವಾದ ಆಹಾರಗಳನ್ನು ಪರಿತ್ಯಜಿಸಿ ಣಮೋಂಕಾರ ಮಂತ್ರವನ್ನು ಹೇಳುತ್ತಾ ಸಮಾಧಿಯಿಂದ ಶಾಂತಿ ಪೂರ್ವಕವಾಗಿ ಪ್ರಾಣವನ್ನು ಬಿಟ್ಟನು. ವ್ರತದ ಪ್ರಭಾವದಿಂದ ಅವನು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಅದರ ನಂತರ ಕೆಲವು ಭವಗಳನ್ನು ಪರಿವರ್ತಿಸಿ ಅವನೇ ನೇಮಿನಾಥ ತೀರ್ಥಂಕರನಾದನು. ನೋಡಿ, ಮುನಿಗಳ ಧ್ಯಾನ ಸಾಮರ್ಥ್ಯದಿಂದ ತನ್ನ ಪಾಪವನ್ನು ಉಪಶಮ ಮಾಡಿ ಸರ್ವೋತ್ತಮವಾದ ತೀರ್ಥಂಕರ ಪದವಿಯನ್ನು ಅವನು ಹೊಂದಿದನೆಂದ ಮೇಲೆ ಭವ್ಯರೇ! ನೀವೂ ಈ ಆಕಿಂಚಿನ್ಯ ಧರ್ಮವನ್ನು ಧರಿಸಿರಿ. ಎಲ್ಲಾ ಧರ್ಮಗಳಲ್ಲಿ ಆಕಿಂಚಿನ್ಯ ಧರ್ಮವು ಉತ್ತಮವಾಗಿದೆ. ಆಕಿಂಚಿನ್ಯ ಧರ್ಮವು ಈ ಪ್ರಾಣಿಗಳ ಅನೇಕ ಭವಗಳಲ್ಲಿ ಮಾಡಿದ ಕರ್ಮಗಳನ್ನು ನಾಶ ಮಾಡಲು ಸಮರ್ಥವಾಗಿದೆ. ಈ ಜೀವನಿಗೆ ಇದು ವರೆಗೆ ಆಕಿಂಚಿನ್ಯ ಧರ್ಮದ ಪ್ರಾಪ್ತಿಯಾಗಲಿಲ್ಲ. ಆದುದರಿಂದ ಸಂಸಾರದ ದುಃಖವನ್ನು ಅನುಭವಿಸುತ್ತಿದ್ದಾನೆ. ಈಗ ಆ ದುಃಖವನ್ನು ದೂರಗೊಳಿಸುವುದಕ್ಕೋಸ್ಕರವಾಗಿ ನೀವು ಈ ಆಕಿಂಚಿನ್ಯ ಧರ್ಮವನ್ನು ನಿಮ್ಮ ಅಂತರಂಗದಲ್ಲಿ ಧರಿಸಿರಿ. ಮತ್ತು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಹೀಗೆ ಜೈನಾಚಾರ್ಯರ ಉಪದೇಶವಾಗಿದೆ. ಈ ಪ್ರಕಾರ ಆಕಿಂಚಿನ್ಯ ಧರ್ಮವನ್ನು ಸಂಕ್ಷೇಪವಾಗಿ ವಿವೇಚಿಸಲಾಯಿತು.

ಉತ್ತಮ ಆಕಿಂಚಿನ್ಯಧರ್ಮಾಯ ನಮಃ

# ಉತ್ತಮ ಬ್ರಹ್ಮಚರ್ಯ.

ಮಂಗಲಾಚರಣೆ.

**ಏತಾವಂತ್ಯೇವ ಸತಾಮಕೃತ್ರಿಮಾಣ್ಯಥ ಜಿನೇಶಿನಾಂ ಭವನಾನಿ**
**ಭುವನತ್ರಿತಯೇತ್ರಿಭುವನಸುರಸಮಿತಿಸಮಚ್ಯ್ರಮಾನಸತ್ಪ್ರತಿಮಾನಿ**
**ಯೇಷು ಜಿನಾನಾಂ ಪ್ರತಿಮಾಃ ಪಂಚಶತಶರಾಸನೋಚ್ಛ್ರಿತಾಃ**
**ಸತ್ಪ್ರತಿಮಾಃ**
**ಮಾಣಿಕಕನಕರಜತವಿಕೃತಾಃ ದಿನಕರಕೋಟಿಪ್ರಭಾಧಿಕಪ್ರಭದೇಹಾಃ**

ಅರ್ಥಃ—ಮೂರು ಲೋಕಗಳಲ್ಲಿ ಅಕೃತ್ರಿಮ ಜಿನಮಂದಿರಗಳು ಎಷ್ಟಿವೆ ಎಂಬ ವಿಷಯವನ್ನು ಇಲ್ಲಿ ಹೇಳಿದ್ದಾರೆ. ಎಂಟು ಕೋಟಿ ಐವತ್ತಾರು ಲಕ್ಷ ಐವತ್ತೇಳು ಸಾವಿರ ಅಕೃತ್ರಿಮ ಜಿನಮಂದಿರಗಳಿವೆ. ಆ ಮಂದಿರಗಳಲ್ಲಿ ಜಿನೇಂದ್ರ ಭಗವಂತನ ಪ್ರತಿಮೆಗಳು, ರತ್ನ, ಬಂಗಾರ ಮತ್ತು ಬೆಳ್ಳಿಯಿಂದ ನಿರ್ಮಿತವಾಗಿವೆ. ಕೋಟಿ ಸೂರ್ಯರ ತೇಜದಂತೆ ಆ ಪ್ರತಿಮೆಗಳ ಕಾಂತಿಯಿದೆ. ಅವುಗಳ ಉನ್ನತಿಯು ಐನೂರು ಧನುಷ ಪ್ರಮಾಣವಾಗಿದೆ. ಆ ಅಕೃತ್ರಿಮ ಚೈತ್ಯಾಲಯಗಳು ಸೂರ್ಯ ವಿಮಾನ ದಂತೆ ಯಾವಾಗಲೂ ದೇದೀಪ್ಯಮಾನವಾಗಿರುತ್ತವೆ. ಆ ಜಿನ ಬಿಂಬಗಳಿಗೆ ನಾನು ನನ್ನ ಪಾಪಗಳ ನಾಶಕ್ಕೋಸ್ಕರವಾಗಿ ಮನ ವಚನ ಕಾಯಗಳ ಶುದ್ಧಿ ಪೂರ್ವಕವಾಗಿ ಅತ್ಯಂತ ಭಕ್ತಿಯಿಂದ ವಂದಿಸುತ್ತೇನೆ.

**ಅನುಭೂತಾಂಗನಾಸ್ಮರಣತತ್ಕಥಾಶ್ರವಣಸಂಸಕ್ತಶಯನಾಸನಾದಿ ವರ್ಜನಾದ್ ಬ್ರಹ್ಮಚರ್ಯಂ ಪೂರ್ಣಮವತಿಷ್ಠತೆ. ಸ್ವತಂತ್ರ ವೃತ್ತಿ ನಿವೃತ್ತ್ಯರ್ಥೋ ಗುರುಕುಲಾವಾಸೋ ವಾ ಬ್ರಹ್ಮಚರ್ಯಂ ॥**

ಸರ್ವಾರ್ಥಸಿದ್ಧಿ

ಪಂಚೇಂದ್ರಿಯ ಸಂಬಂಧವಾದ ವಿಷಯಗಳ ಮೇಲೆ ಅನುರಾಗವನ್ನು ಬಿಟ್ಟು ಬ್ರಹ್ಮ ಅಂದರೆ ಜ್ಞಾಯಕಸ್ವರೂಪನಾದ ಆತ್ಮನಲ್ಲಿ ಚರ್ಯೆ

ಅಂದರೆ ಪ್ರವೃತ್ತಿಯನ್ನಿಡುವುದಕ್ಕೆ ಬ್ರಹ್ಮಚರ್ಯವೆಂದು ಹೆಸರು. ಇದನ್ನು ಹೇಗೆ ರಕ್ಷಿಸಬೇಕೆಂಬ ವಿಷಯವನ್ನು ಹೇಳುತ್ತಾರೆ.

ವಿವೇಕಿಗಳೇ ! ಬ್ರಹ್ಮಚರ್ಯವ್ರತವು ಬಹಳ ದುರ್ಧರವಾಗಿದೆ. ಸಂಸಾರದಲ್ಲಿ ಪ್ರತಿ ಒಬ್ಬ ಪ್ರಾಣಿಯೂ ವಿಷಯಾಧೀನನಾಗಿದ್ದಾನೆ. ಆತ್ಮಜ್ಞಾನ ರಹಿತನಾಗಿದ್ದಾನೆ. ಎಲ್ಲರೂ ಈ ವ್ರತವನ್ನು ಧರಿಸಲು ಅಸಮರ್ಥರಾಗಿರುತ್ತಾರೆ. ಯಾರು ಸಾಧುಗಳಂತೆ ವಿರಕ್ತರಾಗಿರುತ್ತಾರೆಯೋ ಅವರೇ ಬ್ರಹ್ಮಚರ್ಯವನ್ನು ಧರಿಸಲು ಸಮರ್ಥರಾಗುತ್ತಾರೆ. ಯಾರಿಗೆ ವಿಷಯ ಭೋಗಗಳ ಆಕಾಂಕ್ಷೆಯು ವಿಶೇಷವಾಗಿರುತ್ತದೆಯೋ ಅವರು ಬ್ರಹ್ಮಚರ್ಯವನ್ನು ಧರಿಸಲು ಸಮರ್ಥರಾಗುವುದಿಲ್ಲ. ಯಾರು ಬ್ರಹ್ಮಚರ್ಯವನ್ನು ಧರಿಸಿದ್ದಾರೆಯೋ ಅವರು ಇಂದ್ರಿಯ ಮತ್ತು ಕಷಾಯಗಳನ್ನು ಸುಲಭವಾಗಿ ಜಯಿಸುತ್ತಾರೆ, ಜ್ಞಾನಿಗಳೇ ! ವಿಷಯ ಸುಖಗಳಲ್ಲಿ ಮಗ್ನನಾದ ಮದೋನ್ಮತ್ತ ಈ ಮನಸ್ಸೆಂಬ ಆನೆಯನ್ನು ವೈರಾಗ್ಯ ಭಾವನೆಯಿಂದ ಜಯಿಸಿ ವಿಷಯೇಚ್ಛೆಯಿಂದ ಉಪೇಕ್ಷಿತರಾಗಿ ಈ ದುರ್ಧರ ಬ್ರಹ್ಮಚರ್ಯವನ್ನು ಧರಿಸಿರಿ. ಮೊದಲು ಇಂದ್ರಿಯಗಳನ್ನು ಜಯಿಸಿರಿ. ಇಂದ್ರಿಯವೆಂಬ ಸೈನ್ಯವು ವೀರರಿಂದಲೇ ಜಯಿಸಲ್ಪಡುತ್ತದೆ. ಒಂದೊಂದು ಇಂದ್ರಿಯಗಳ ವಶವಾಗಿದ್ದರಿಂದ ಅನೇಕ ಜೀವಗಳ ಘಾತವಾಗಿದೆ.

ಸ್ಪರ್ಶ ಇಂದ್ರಿಯಕೆ ವಶಮೇ ಜೋ ಹಾಥೀ ಹುವಾ
ಕಾಮ ದೇವನೇ ಉಸಕೋ ಜೋ ಅಂಧಾ ಕಿಯಾ
ಜ್ಯೊಂಹೀ ಝಪಟಾ ಗಢೇಮೇ ವಹ ಜಾಕರ ಪಡಾ
ಸಡಕರಕೇ ವಹಾಂ ಮರ ಜಾನಾ ಹುವಾ ||

ಒಂದು ಸ್ಪರ್ಶನೇಂದ್ರಿಯ ವಿಷಯ ಸುಖದ ಇಚ್ಛೆಯನ್ನು ಮಾಡಿ ಪ್ರಬಲವಾದ ಆನೆಯು ದೊಡ್ಡ ಹೊಂಡದಲ್ಲಿ ಹೆಣ್ಣಾನೆಯನ್ನು ಕಂಡು ಅದನ್ನು ಭೋಗಿಸುವ ಇಚ್ಛೆಯಿಂದ ಆ ಹೊಂಡದಲ್ಲಿ ಬೀಳುತ್ತದೆ, ಮತ್ತು ಕಾಲುಗಳು ತುಂಡಾಗಿ ಅಲ್ಲಿ ಸಾಯುವ ಪ್ರಸಂಗವೂ ಬರುತ್ತದೆ. ಮತ್ತು

ದುರ್ಗತಿಗೆ ಹೋಗುತ್ತದೆ. ಆದ್ದರಿಂದ ಭವ್ಯರೇ! ನೀವು ಸ್ಪರ್ಶನ ಇಂದ್ರಿಯ ವಿಷಯಗಳನ್ನು ಜಯಿಸಿರಿ.

ಜಿಹ್ವಾ ಇಂದ್ರಿಯಕೇ ವಶಮೆ ಜೋ ಮಛಲೀ ಹುಯಿ
ದೇಖೋ ಧೀವರಕೆ ಜಾಲಮೇ ಹಾಂ ಜಾಕರ ಫಸೀ
ಜ್ಯೋಂಹೀ ಆಟೇಕೀ ಗೋಲೀಕೋ ಖಾನೇ ಲಗೀ
ತಬ ಕಾಂಟಾ ಚುಭಾ ದುಃಖ ಪಾನೆ ಲಗೀ ||

ನೋಡಿ, ಕರ್ಮದ ಉದಯವು ಹೇಗಿದೆ? ರಸನೇಂದ್ರಿಯದ ಲೋಭದಿಂದ ಮೀನು ಆ ಗಾಳದ ತುದಿಯಲ್ಲಿರುವ ಹಿಟ್ಟಿನ ಗುಳಿಗೆಯನ್ನು ತಿನ್ನುವ ಆಶೆಯಿಂದ ಬಾಯಿ ಹಾಕುತ್ತದೆ. ಮೀನು ಹಿಡಿಯುವವನು ಆ ಗಾಳವನ್ನು ಎಳೆಯುತ್ತಾನೆ. ಆ ಗಾಳದಲ್ಲಿ ಸಿಕ್ಕಿ ಮೀನುಗಳು ಜಾಲದಲ್ಲಿ ಬರುತ್ತವೆ. ನೋಡಿ, ಭವ್ಯರೇ, ಒಂದು ರಸನೇಂದ್ರಿಯದ ಕಾರಣದಿಂದ ಆ ಮೀನುಗಳು ಮರಣವನ್ನು ಹೊಂದಿದವು. ಆದುದರಿಂದ ನೀವೂ ರಸನೇಂದ್ರಿಯದ ವಿಷಯವನ್ನು ತ್ಯಜಿಸಿರಿ.

ದೇಖೋ ಭೋರೆಕೀ ಕೈಸೀ ಹುಯಿ ದುರ್ದಶಾ
ಗಂಧ ಸೇವನಸೇ ಜಬ ವಹ ತೃಪ್ತ ನ ಹುವಾ
ಜಬ ಸೂರಜ ಛಿಪಾ ಕಮಲ ಬಂದ ಹುವಾ
ವಹ ಅಂದರ ಕಮಲಕೇ ತಡಫಕರ ಮರಾ ||

ನೋಡಿ, ಪ್ರಾಣಿಗಳ ಪರಿಣಾಮದ ಗತಿಯು ಹೇಗಿದೆ? ಒಂದು ಘ್ರಾಣೇಂದ್ರಿಯದ ವಶವಾಗಿ ಭ್ರಮರ (ದುಂಬಿ) ವು ಕಮಲ ಕರ್ಣಿಕೆಯ ಮೇಲೆ ಅದರ ಸುಗಂಧಕ್ಕೆ ಲುಬ್ಧವಾಗಿ ಕೂತು ಬಿಟ್ಟಿತು. ಸೂರ್ಯಾಸ್ತವಾಗಲು ಕಮಲ ಮುಚ್ಚಿ ಹೋಗಲು ಅದಕ್ಕೆ ಹೊರಗೆ ಬರಲಾಗಲಿಲ್ಲ. ಅಲ್ಲಿಯೇ ಸತ್ತು ಹೋಯಿತು. ಕಠಿಣವಾದ ಕಟ್ಟಿಗೆಯನ್ನು ಕೊರೆಯಲು ಸಮರ್ಥವಾದ ಭ್ರಮರವು ಹೂವಿನಿಂದ ಹೊರಡಲು ಸಾಧ್ಯವಾಗಲಿಲ್ಲ. ಮೋಹನೀಯ ಕರ್ಮದ ತೀವ್ರ ಉದಯದಿಂದ ಪ್ರಾಣವನ್ನು ಕಳೆದು

ಕೊಂಡಿತು. ಆದುದರಿಂದ ಭವ್ಯರೇ, ಈ ನಾಶಿಕಾ ಇಂದ್ರಿಯದ ವಿಷಯ ವನ್ನು ತ್ಯಜಿಸಿರಿ.

ಚಕ್ಷು ಇಂದ್ರಿಯಕಾ ಜಗನೋ ವಿಷಯೆ ಹೈ ಬುರಾ
ಇಸಕೇ ವಶವೋ ಪತಂಗಾ ಹೈ ಜಲಕೇ ಮರಾ ॥

ನೋಡಿ, ಪ್ರಾಣಿಗಳ ಪರಿಣತಿಯು ಎಷ್ಟು ವಿಚಿತ್ರವಾಗಿದೆ. ಚಕ್ಷು ಇಂದ್ರಿಯಕ್ಕೆ ವಶವಾಗಿ ದೀಪದ ಹುಳಗಳು ಆ ದೀಪದ ಜ್ಯೋತಿಯ ಮೇಲೆ ಮೋಹಿತವಾಗಿ ಅದರ ಮೇಲೆ ಬಿದ್ದು ಸಾಯುತ್ತವೆ. ಆದುದರಿಂದ ಭವ್ಯರೇ ! ನೀವೂ ಈ ಚಕ್ಷು ಇಂದ್ರಿಯದ ವಿಷಯವನ್ನು ಪರಿತ್ಯಜಿಸಿರಿ.

ಕರ್ಣ ರಸಕಾ ಸ್ವೈಯೊ ಹಿರಣ ಜೋ ಭಯಾ
ವಹ ಅಹೇಡೀಕೀ ಬೀನಸೇ ಮೋಹಿತ ಹುವಾ
ಬೀರ ಖಾಕೇ ಅಜಿಲಕಾ ನಿಶಾನಾ ಹುವಾ

ನೋಡಿ, ಕರ್ಮದಿಂದ ಹೇಗೆ ಈ ಜೀವನು ಮೋಸಗೊಳ್ಳುತ್ತಾನೆ. ಅತ್ಯಂತ ವೇಗದಿಂದ ಓಡಿ ಹೋಗುವ ಜಿಂಕೆಯೂ ಕರ್ಣೇಂದ್ರಿಯಕ್ಕೆ ವಶವಾಗಿ ಬೇಡನು ಬಾರಿಸುತ್ತಿರುವ ವೀಣೆಯ ಸಂಗೀತದಿಂದ ಮೋಹಿತ ವಾಗಿ ಒಂದು ಕಡೆ ನಿತ್ತು ಬಿಡುತ್ತದೆ. ಮತ್ತು ಅವನ ಬಾಣದಿಂದ ಕೊಲ್ಲ ಲ್ಪಡುತ್ತದೆ. ಆದುದರಿಂದ ಭವ್ಯರೇ ! ಕರ್ಮದ ವಿಚಾರವನ್ನು ಮಾಡಿ ಮನಸ್ಸಿನಲ್ಲಿ ಅನೇಕ ಪ್ರಕಾರದ ಇಚ್ಛೆಯನ್ನು ಉತ್ಪನ್ನ ಮಾಡುವ ವಿಷಯ ಸುಖಗಳನ್ನು ಜಯಿಸಿರಿ. ಭವ್ಯರೇ ! ಈ ಸ್ತ್ರೀ ಸುಖದಲ್ಲಿ ಅನುರಕ್ತವಾದ ಮನಸ್ಸೆಂಬ ಆನೆಯನ್ನು ವೈರಾಗ್ಯದಿಂದ ಕಟ್ಟಿ ವಿಷಯಸುಖದ ಅಭಿ ಲಾಷೆಯನ್ನು ದೂರ ಮಾಡಿ ದುರ್ಧರವಾದ ಬ್ರಹ್ಮಚರ್ಯವನ್ನು ಧರಿಸಿರಿ. ಈ ಕಾಮನು ಚಿತ್ತವೆಂಬ ಭೂಮಿಯಲ್ಲಿ ಹುಟ್ಟುತ್ತಾನೆ. ಮಾಡಲಿಕ್ಕೆ ಅಯೋಗ್ಯವಾದ ಕಾರ್ಯಗಳನ್ನು ಈ ಮನುಷ್ಯನು ಅವನ ಕಾರಣದಿಂದ ಮಾಡುತ್ತಾನೆ. ಈ ಕಾಮ ವಿಕಾರವು ಮನಸ್ಸನ್ನು ಮುಗ್ಧನನ್ನಾಗಿ ಮಾಡು

ತ್ತದೆ. ಮನಸ್ಸು ಮತ್ತು ಜ್ಞಾನವನ್ನು ಮಥಿಸುತ್ತದೆ. ಆದುದರಿಂದ ಇದಕ್ಕೆ ಮನ್ಮಥನೆಂಬ ಹೆಸರಿನಿಂದ ಹೇಳಲಾಗಿದೆ.

ಮೋಹಿಗಳು ವಿವೇಕಭ್ರಷ್ಟರಾಗಿ ಸ್ತ್ರೀ ಜಾತಿಯ ಮಹಾದುರ್ಗಂಧ ಮತ್ತು ನಿಂದ್ಯ ಶರೀರದ ಮೇಲೆ ಅನುರಕ್ತರಾಗಿ ಅವರನ್ನು ಭೋಗಿಸುತ್ತಾರೆ. ಮತ್ತು ಕಾಮಾಂಧರಾಗಿ ಆ ಸಮಯದಲ್ಲಿ ಅನೀತಿಗೊಳಗಾಗಿ ತನ್ನ ಮತ್ತು ಇತರ ಸ್ತ್ರೀಯರ ವಿಚಾರ ಮಾಡುವುದಿಲ್ಲ. ಕಾಮಾಂಧ ಜನರು ತಾವು ಏನು ಮಾಡುತ್ತೇವೆಂಬ ವಿಚಾರ ಮಾಡುವುದಿಲ್ಲ. ಅವರು ವಿವೇಕ ಭ್ರಷ್ಟ ರಾಗಿ ಸಂಪೂರ್ಣ ಭೋಗದಿಂದ ಚ್ಯುತರಾಗುತ್ತಾರೆ. ಮತ್ತು ಮುಂದೆ ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಾರೆ.

ಒಂದು ಸಾರಿ ಒಬ್ಬ ಮಹಾ ಪಾಪಿಯಾದ ಸ್ತ್ರೀಯು ತನ್ನ ಶೀಲ ರಕ್ಷಣೆಯನ್ನು ಮಾಡದೆ ಇಂದ್ರಿಯ ಭ್ರಷ್ಟಳಾಗಿ ಹೇಗೆ ತನ್ನ ಅಧಃಪಾತ ವನ್ನು ಮಾಡಿಕೊಂಡಳೆಂಬ ವಿಷಯವನ್ನು ನೋಡಿರಿ. ಅತ್ಯಂತ ಸದ್ಗುಣಿ ಯಾದ ಅವಳ ಪತಿ. ಅವಳ ಮೇಲೆ ಅವನಿಗೆ ಅಪಾರ ಪ್ರೇಮ. ಅವಳ ಮೇಲೆ ವಿಶ್ವಾಸವನ್ನಿಟ್ಟು ಪರಊರಿಗೆ ಹೊರಟು ಹೋದನು, ಆ ಪಾಪಿ ನಿಯು ಕೋಟಿ ರೂಪ್ಯಾಗಳ ಧನವನ್ನು ಒಬ್ಬ ಪರ ಪುರುಷನಿಗೆ ಕೊಟ್ಟು ಹೇಳುತ್ತಾಳೆ. ಪ್ರಿಯ, ನನ್ನ ಪತಿಯು ಬರುವ ಮೊದಲೇ ಈ ಸಂಪತ್ತಿಯನ್ನು ಹಿಡಿದುಕೊಂಡು ನಾವು ಇಲ್ಲಿಂದ ಓಡಿ ಹೋಗೋಣ. ಪತಿಯು ಬಂದ ನಂತರ ಏನೂ ಮಾಡಲು ಸಾಧ್ಯವಿಲ್ಲವೆಂದು ಹೀಗೆ ವಿಚಾರ ಮಾಡಿದಳು. ಈ ವಿಷಯವು ಅವಳ ದಾಸಿಗೆ ತಿಳಿಯಿತು. ಅವಳು ಆ ಪಾಪಿಯಾದ ಸ್ತ್ರೀಗೆ ಹೇಳುತ್ತಾಳೆ. ' ನೀನು ನಿನ್ನ ಪುಣ್ಯವಂತನಾದ ಪತಿಯನ್ನು ಬಿಟ್ಟು ಹೋಗುವ ವಿಚಾರವನ್ನು ಮಾಡುತ್ತಿದ್ದೀಯೇ? ಇದು ಬಹಳ ಅನ್ಯಾಯವಾಗಿದೆ. ಈ ಅನ್ಯಾಯದ ಫಲವು ನಿನಗೆ ದುಃಖದಾ ಯಕವಾಗಬಹುದು. ಎಂದಳು. ಇದನ್ನು ಕೇಳಿ ಆ ಪಾಪಿನಿಯು ಕ್ರೋಧ

ದಿಂದ, ನಿನಗೆ ಏನು ತಿಳಿಯುತ್ತದೆ ಸುಮ್ಮನೆ ಕೂತುಕೋ, ನಾನು ಆ ನನ್ನ ಪುರುಷನನ್ನು ಬಿಟ್ಟು ಜೀವಿಸಲಾರೆ. ಅವನಿಲ್ಲದೆ ನನಗೆ ಅನ್ನ ನೀರೂ ಸೇರುವುದಿಲ್ಲವೆಂದಳು. ಪಾಪಿಗಳು ಪಾಪ ಮಾಡುವುದಕ್ಕೆ ಹೆದರುವುದಿಲ್ಲ.

ಪಾಕಂ ತ್ಯಾಗಂ ವಿವೇಕಂ ಚ ವೈಭವಂ ಮಾನಿತಾಮಪಿ
ಕಾಮಾರ್ತಾಃ ಖಲು ಮುಂಚಂತಿ ಕಿಮನ್ಯೈಃ ಸ್ವಂಚ ಜೀವಿತಂ

ಕಾಮವಿಕಾರದಿಂದ ಪೀಡಿತರಾದ ಪ್ರಾಣಿಗಳ ಎಲ್ಲಾ ವಿವೇಕವೂ ಭ್ರಷ್ಟವಾಗುತ್ತದೆ, ನೀತಿ, ವೈಭವ, ಮಾನ್ಯತೆಗಳನ್ನು ಅವರು ಬಿಡುತ್ತಾರೆ. ವಿಶೇಷವೇನು ? ಅವರು ತಮ್ಮ ಪ್ರಾಣವನ್ನೂ ಕಳೆದುಕೊಳ್ಳುತ್ತಾರೆ.

ಆ ಪಾಪಿನಿಯು ಅನೇಕ ಧನ ಧಾನ್ಯಗಳಿಂದ ತುಂಬಿದ ಆ ಮನೆಯನ್ನು ಬಿಟ್ಟು ಆ ಪರ ಪುರುಷನೊಡನೆ ಓಡಿ ಹೋಗುತ್ತಿರಲು ದಾರಿಯಲ್ಲಿ ಒಂದು ಹೊಳೆ ಬಂತು. ಆಗ ಆ ಮನುಷ್ಯನು ವಿಚಾರ ಮಾಡುತ್ತಿದ್ದಾನೆ, ' ಇವಳು ಮಹಾ ಪಾಪಿಯಾಗಿದ್ದಾಳೆ. ತನ್ನ ಪುಣ್ಯವಂತನಾದ ಪತಿಯನ್ನು ಮೋಸಗೊಳಿಸಿ, ತನ್ನ ಶೀಲದ ವಿಚಾರವನ್ನು ಮಾಡದೆ, ಇಂದ್ರಿಯಗಳ ವಶಳಾಗಿ ನನ್ನೊಡನೆ ಓಡಿ ಬಂದಿದ್ದಾಳೆ. ಇವಳ ಮೇಲೆ ನಾನು ವಿಶ್ವಾಸವಿಟ್ಟರೆ ನನ್ನ ಘಾತವನ್ನೂ ಮಾಡಬಹುದು. ಈ ಪ್ರಕಾರ ವಿಚಾರ ಮಾಡಿ ಅವನು ತನ್ನ ಇಂದ್ರಿಯಗಳನ್ನು ವಶ ಮಾಡಿಕೊಂಡನು. ನೋಡಿ, ಭವ್ಯರೇ ! ಸಂಸಾರದಲ್ಲಿ ಇಂದ್ರಿಯ ವಿಷಯಗಳು ಬಹಳ ವಿಚಿತ್ರವಾಗಿವೆ.

ಗಜ ಮೀನ ಪತಂಗ ಹರಿಣ ಭೌರಾ
ಏಕ ಏಕ ವಿಷಯ ವಶ ಸಂಕಟ ಸಹಾ
ಹಮತೋ ಪಾಂಚೋಂಕೀ ಭೋಗೀ ಹುಯೇ ಹಾಯ
ಹಾ ಶಿವರಾಮ ವಿಚಾರೋ ದಶಾ ಹೋಗೀ ಕ್ಯಾ ?

ನೋಡಿ, ಒಂದೊಂದು ಇಂದ್ರಿಯಗಳ ಅಧೀನರಾಗಿ ಅನೇಕ ಪ್ರಾಣಿಗಳು ಅನೇಕ ವಿಧದಿಂದ ದುಃಖವನ್ನು ಅನುಭವಿಸುತ್ತವೆ. ಆದರೆ ನಾವು

ನಾವೂ ಇಂದ್ರಿಯಗಳ ವಶವಾಗಿ ವಿಷಯ ಭೋಗಗಳನ್ನು ಭೋಗಿಸುತ್ತಿದ್ದೇವೆ. ನಾವು ಎಷ್ಟು ಪಾಪಗಳನ್ನು ಅರ್ಜಿಸುತ್ತೇವೆ. ವಿಚಾರ ಮಾಡಿರಿ. ಇಂದ್ರಿಯಗಳನ್ನು ಜಯಿಸಿರಿ.

ಆ ಪಾಪಿನಿಯಾದ ಸ್ತ್ರೀಯು ಪಂಚೇಂದ್ರಿಯಗಳ ವಶಳಾಗಿ ಹೇಗೆ ದುಃಖವನ್ನು ಅನುಭವಿಸಿದಳು. ನೋಡಿ. ಆ ಪುರುಷನು ಅವಳಿಗೆ ಹೇಳುತ್ತಾನೆ. ನೀನು ಇಲ್ಲಿ ನದೀ ತೀರದಲ್ಲಿ ಕುಳಿತುಕೋ, ನಾನು ಹೊಳೆಯಲ್ಲಿ ಎಷ್ಟು ನೀರು ಇದೆ ಎಂದು ನೋಡಿ ಈ ಎಲ್ಲಾ ಸಾಮಾನುಗಳನ್ನು ಆ ಕಡೆ ಪಾರ ಮಾಡಿ ನಿನ್ನನ್ನು ತೆಗೆದುಕೊಂಡು ಹೋಗಲು ಬರುತ್ತೇನೆ. ಹೀಗೆ ಹೇಳಿ ಕೋಟಿ ರೂಪ್ಯಾಗಳ ಅವಳ ವಸ್ತ್ರ, ಅಲಂಕಾರ, ಧನಕನಕಗಳನ್ನು ಹಿಡಿದುಕೊಂಡು ಹೊಳೆಯನ್ನು ದಾಟಿ ತನ್ನ ಊರಿಗೆ ಓಡಿ ಹೋದನು. ಆ ಪಾಪಿನಿಯು ಸಂಪತ್ತಿಹೀನಳಾಗಿ ಪಶುಗಳಂತೆ ಅಲ್ಲಿಯೇ ಕುಳಿತು ವಿಲಾಪ ಮಾಡತೊಡಗಿದಳು ನೋಡಿ, ಪಾಪ ಕರ್ಮದ ಉದಯವು ಹೇಗಿದೆ ? ಧನ ಹೋಯಿತು, ಶೀಲ ಹೋಯಿತು, ದೊಡ್ಡ ದುಃಖವು ಬಂತು. ಇಂದ್ರಿಯಗಳನ್ನು ವಶಪಡಿಸಿಕೊಳ್ಳದಿದ್ದರಿಂದ ದೊಡ್ಡ ದುಃಖಕ್ಕೆ ಒಳಗಾದಳು. ಆದುದರಿಂದ ಶೀಲವನ್ನು ಪಾಲಿಸಿರಿ. ಶೀಲವಿಲ್ಲದೆ ಶೋಭೆ ಇಲ್ಲ.

ದುಗ್ಧೇನ ಧೇನುः ಕುಸುಮೇನ ವಲ್ಲೀ
ಶೀಲೇನ ಭಾರ್ಯಾ ಸರಸೀ ಜಲೇನ

ಹಾಲಿಲ್ಲದಿದ್ದರೆ ಆಕಳಿಗೆ ಶೋಭೆ ಇಲ್ಲ. ಹೂ ಇಲ್ಲದಿದ್ದರೆ ಬಳ್ಳಿಗೆ ಶೋಭೆ ಇಲ್ಲ. ಹಾಗೆಯೇ ಶೀಲವಿಲ್ಲದಿದ್ದರೆ ಸ್ತ್ರೀಗೆ ಶೋಭೆ ಇಲ್ಲ. ನೀರಿಲ್ಲದಿದ್ದರೆ ಸರೋವರಕ್ಕೆ ಶೋಭೆ ಇಲ್ಲ.

ನೋಡಿ, ಅವಳು ಶೀಲ ನಾಶ ಮಾಡಿಕೊಂಡಿದ್ದರಿಂದ ಭಾಗ್ಯಹೀನ ರೂಪಹೀನಳಾಗಿ ನಿಸ್ತೇಜಳಾದಳು. ತಾನು ಮಾಡಿದ ಕುಕೃತ್ಯಕ್ಕೋಸ್ಕರವಾಗಿ ಆರ್ತಧ್ಯಾನದಿಂದ ಆ ಹೊಳೆಯಲ್ಲಿ ಬಿದ್ದು ಸತ್ತಳು.

ಮತ್ತು ಅಲ್ಲಿಯೇ ಮೀನಾಗಿ ಹುಟ್ಟಿದಳು. ನೋಡಿ, ಪಾಪವಾಸನೆಯಿಂದ ಇಹ ಭವದ ಸುಖಗಳನ್ನು ಕಳೆದುಕೊಂಡಳು. ಮುಂದಿನ ಭವದಲ್ಲಿಯೂ ದುರ್ಗತಿಯನ್ನು ಹೊಂದಿ ದುಃಖಗಳನ್ನು ಅನುಭವಿಸಿದಳು. ಆದುದರಿಂದ ಭವ್ಯರೇ ! ಇಂದ್ರಿಯಗಳನ್ನು ಜಯಿಸಿ ಶೀಲವನ್ನು ಪರಿಪಾಲಿಸಿರಿ. ಆ ಶೀಲದಿಂದ ನಿಮಗೆ ಸದ್ಗತಿಯಾಗುವುದು. ಹೀಗೆ ಆಚಾರ್ಯರ ಉಪದೇಶವಾಗಿದೆ. ನೀವು ಶೀಲವನ್ನು ಪರಿಪಾಲಿಸಿ ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ.

ಕಾಮಾಂಧ ಪುರುಷರು ಹಿಂದು ಮುಂದಿನ ವಿಚಾರವನ್ನು ಮಾಡುವುದಿಲ್ಲ. ಕಾಮ ಪರವಶನಾಗುವುದರಿಂದ ನನ್ನ ಘಾತವಾಗಬಹುದು. ರಾಜನು ನನಗೆ ದಂಡವನ್ನು ಕೊಡಬಹುದು. ನಾನು ಧರ್ಮ ಭ್ರಷ್ಟನಾಗುವೆನು. ಮತ್ತು ಸತ್ತು ಅನೇಕ ಸಾರಿ ತಿರ್ಯಂಚ ಯೋನಿಯಲ್ಲಿ ದುಃಖಮಯವಾದ ಜನ್ಮವನ್ನೆತ್ತಿ ಕುಮಾನವರಲ್ಲಿ ಹುಟ್ಟಿ ಕುರುಡ, ಕುಂಟ, ದರಿದ್ರ, ದೀನ, ವಿಕಲ, ಚಾಂಡಾಲ, ಭಿಲ್ಲ ಮೊದಲಾದ ಕುಯೋನಿಯಲ್ಲಿ ಜನ್ಮ ಪಡೆಯುವೆನು ಎಂಬ ವಿಚಾರವನ್ನು ಅವರು ಎಂದೂ ಮಾಡುವುದಿಲ್ಲ.

ವಿಷಯಾಸಕ್ತ ಚಿತ್ತಾನಾಂ ಗುಣಃ ಕೋ ವಾ ನ ನಶ್ಯತಿ
ನ ವೈದುಷ್ಯಂ ನ ಮಾನುಷ್ಯಂ ನಾಭಿಜಾತ್ಯಂ ನ ಸತ್ಯವಾತ್
ಕ್ಷತ್ರಚೂಡಾಮಣಿ

ಪಂಚೇಂದ್ರಿಯ ವಿಷಯಗಳಲ್ಲಿ ಆಸಕ್ತನಾದ ಮನುಷ್ಯನು ಯಾವ ವಿಚಾರವನ್ನು ಮಾಡುವುದಿಲ್ಲ. ಅವನ ವಿವೇಕವು ನಷ್ಟವಾಗುತ್ತದೆ. ಅವನ ವಿದ್ವತ್ತೆ, ಮನುಷ್ಯತ್ವ, ಕುಲೀನತೆ, ಶ್ರೇಷ್ಟತೆ, ಸ್ವಚ್ಛತೆ, ನಿರ್ಮಮತೆ, ಮೊದಲಾದ ಎಲ್ಲಾ ಗುಣಗಳೂ ನಷ್ಟವಾಗುವವು. ಅವನು ವಿವೇಕ ಭ್ರಷ್ಟನಾಗಿ, ಯಾವಾಗಲೂ ಹುಚ್ಚನಂತೆ ಇರುತ್ತಾನೆ. ಕರ್ಮದ ಉದಯವು ಹೇಗಿದೆ ? ನೋಡಿರಿ. ತ್ರಸ ಸ್ಥಾವರ ಪರ್ಯಾಯಗಳಲ್ಲಿ ಅನಂತ ಕಾಲದವರೆಗೆ ಪರಿಭ್ರಮಣೆ ಮಾಡಬೇಕಾಗುವುದೆಂಬ ವಿಚಾರವು ಕಾಮಾಂಧ

ಜೀವರಿಗೆ ಬರುವುದೇ ಇಲ್ಲ. ಕಾಮಿ ಪುರುಷರು ಅಜ್ಞಾನಿಗಳಾಗಿದ್ದು ಇಂದ್ರಿಯ ಸುಖವೇ ಲೋಕದಲ್ಲಿ ನಿಜವಾದ ಸುಖವೆಂದು ತಿಳಿದು ಬಹಳ ದುಃಖವನ್ನು ಅನುಭವಿಸುತ್ತಾರೆ. ಕ್ಷಣಿಕ ಸುಖಕ್ಕೋಸ್ಕರ ಅನಂತ ದುಃಖಗಳನ್ನು ಅನುಭವಿಸುತ್ತಾರೆ. ಕ್ಷಣ ಭಂಗುರವಾದ ಸುಖವನ್ನು ಎಷ್ಟು ಅನುಭವಿಸಿದರೂ ತೃಪ್ತಿಯಾಗುವುದಿಲ್ಲ. ಪುನಃ ಪುನಃ ಹೆಚ್ಚಾದ ಇಚ್ಛೆಯಾಗುತ್ತದೆ. ಆದುದರಿಂದ ಭವ್ಯರೇ! ಈ ಇಂದ್ರಿಯ ಸುಖವನ್ನು ತ್ಯಾಗ ಮಾಡಲು ಪ್ರಯತ್ನ ಮಾಡಿರಿ

**ಒಡಲೆಂಬೀ ಜಡನಂ ಲಯ ಪ್ರಕಟನಂ ನಿಶ್ಚೇಷ್ಟನಂ ದುಷ್ಟನಂ**
**ಪಡಿಮಾತೇಂ ಪೆಣನಂ ಮನಂ ಧರಿಸಿತಾಂ ತನ್ನೊಂದು ಚೈತನ್ಯದಿಂ**
**ನಡೆಯಿಪ್ಪಂ ರಥಿಕಂಬೊಲೇಂ ನುಡಿಯಿಪಂ ಮಾರ್ದಂಗಿಕಂಬೋ-**
**ಳ್ಪಿಸುಳ್ ಬಿಡುವಂ ಜೋಹಟಿಗಂಬೋಲೇಂ ಕುಶಲನೋ**
**ರತ್ನಾಕರಾಧೀಶ್ವರಾ ||**

ಈ ಶರೀರವು ಜಡವಾಗಿದೆ. ನಾಶಶೀಲವಾಗಿದೆ ಚೇಷ್ಟಾರಹಿತವಾಗಿದೆ. ದುಷ್ಟವಾಗಿದೆ- ಹೆಚ್ಚೇನು ಹೆಣದಂತಿದೆ. ಆದರೂ ಆತ್ಮನು ತನ್ನ ಚೈತನ್ಯ ಶಕ್ತಿಯಿಂದ ರಥಿಕನ ಹಾಗೆ ಇದನ್ನು ನಡೆಸುತ್ತಾನೆ. ಮೃದಂಗ ಬಾರಿಸುವವನಂತೆ ಇದನ್ನು ನುಡಿಸುತ್ತಾನೆ. ಬಹುರೂಪಿಯಂತೆ ಅನೇಕ ವೇಷಗಳನ್ನು ಧರಿಸುತ್ತಾನೆ. ಹೀಗೆ ಶರೀರಸುಖವನ್ನೇ ಆತ್ಮ ಸುಖವೆಂದು ತಿಳಿದು ಅಜ್ಞಾನಿಯಾಗುತ್ತಿದ್ದಾನೆ. ಮತ್ತು ಅನೇಕ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಎಷ್ಟರವರೆಗೆ ಅವನು ವಿಷಯಗಳಿಂದ ವಿರಕ್ತನಾಗುವುದಿಲ್ಲವೋ ಅಷ್ಟರ ವರೆಗೆ ಈ ದುಃಖಗಳಿಂದ ಬಿಡುಗಡೆಯಾಗುವುದಿಲ್ಲ. ಆದುದರಿಂದ ನೀವು ಇಂದ್ರಿಯ ವಿಷಯಗಳಿಂದ ವಿರಕ್ತರಾಗಿ ಇದರ ವಸ್ತುಸ್ಥಿತಿಯನ್ನು ವಿಚಾರ ಮಾಡಿರಿ. ವಿಚಾರ ಮಾಡಿದರೆ ಈ ಇಂದ್ರಿಯ ಸುಖದಿಂದ ನಿಮಗೆ ಅವಶ್ಯ ವಿರಕ್ತಿಯಾಗಬಹುದು.

ತೇ ಪಾಪ ಬೀಜ ಸಂಸ್ಕೃತಿ ಸೌಖ್ಯ ಸಮುಜಣೇ ಸದಾ ಅನಿತ್ಯಮನೊ
ನಿಃಕಾಂಕ್ಷಿತಾಂಗ ತ್ಯಾತೇ ವ್ಟುಣತಿ ಸುಧೇಸಮು ಭವವ್ಯಥಾ
ಶಮನೀ

ಈ ಪ್ರಕಾರ ಪಾಪ ಮೂಲಕವಾದ ಸಂಸಾರ ದುಃಖವನ್ನು ಯಾವಾಗಲೂ ಅನಿತ್ಯವೆಂದು ತಿಳಿದು ಅದರ ವಿಷಯವಾಗಿ ಉಪೇಕ್ಷಿತನಾಗಿರುವುದಕ್ಕೆ ನಿಃಕಾಂಕ್ಷಿತ ಅಂಗವೆಂದು ಹೇಳಲಾಗಿದೆ. ಇದು ಸಂಸಾರದ ದುಃಖವನ್ನು ಶಮನ ಮಾಡುವುದಕ್ಕೆ ಅಮೃತದಂತಿನೆ.

ಭವ್ಯರೇ, ಒಂದು ಸಾರಿ ಒಬ್ಬ ಪುರುಷನು ಕಾಮಾಂಧನಾಗಿ ಒಬ್ಬ ಸ್ತ್ರೀಯ ಮನೆಗೆ ಹೋಗುತ್ತಿದ್ದನು. ಒಂದು ದಿವಸ ಅವನು ಹೋದಾಗ ಅವಳು ಸಂಸಾರದಿಂದ ವಿರಕ್ತಳಾಗಿ ಗುರುಗಳಿಂದ ಶೀಲ ವ್ರತದ ಪ್ರತಿಜ್ಞೆಯನ್ನು ಮಾಡಿಕೊಂಡಿದ್ದಳು. ಆದುದರಿಂದ ಅವಳು ಬರುವ ದಾರಿಯನ್ನು ಬಂದು ಮಾಡಿಟ್ಟದ್ದಳು. ಆಗ ಅವನು ಬಂದು ದಾರಿಯು ಯಾವ ಕಡೆಯಿಂದ ಇದೆ. ನಾನು ಎಲ್ಲಿಂದ ಬರಬೇಕೆಂದು ಬೊಬ್ಬೆ ಹೊಡೆದನು. ಆಗ ಆ ಸ್ತ್ರೀಯು ಹೇಳುತ್ತಾಳೆ. ಇನ್ನು ನಾನು ದಾರಿ ತೋರಿಸಲಾರೆ. ಅದಕ್ಕೋಸ್ಕರವೇ ದಾರಿಯನ್ನು ಮುಚ್ಚಿದ್ದೇನೆ. ನಾನು ಈಗ ಶೀಲವನ್ನು ಪಾಲಿಸುವೆನೆಂದು ನನ್ನ ಗುರುಗಳಿಂದ ಪ್ರತಿಜ್ಞೆಯನ್ನು ತೆಗೆದು ಕೊಂಡಿದ್ದೇನೆ. ಇದನ್ನು ಕೇಳಿ ಆ ಪಾಪಿಷ್ಟನಾದ ಕಾಮಾಂಧನಿಗೆ ಕೋಪ ಬಂತು. ಹೇಗಾದರೂ ಮುಂದೆ ಹೋಗಬೇಕೆಂಬ ವಿಚಾರದಿಂದ ಆ ದಾರಿಯಲ್ಲಿ ಹರಡಿದ್ದ ಮುಳ್ಳಿನ ಮೇಲೆ ಒಬ್ಬ ಬಾಲಕನನ್ನು ಮಲಗಿಸಿ ಆ ಬಾಲಕನ ಮೇಲೆ ಕಾಲಿಟ್ಟು ಹೋಗುವುದೆಂದು ವಿಚಾರ ಮಾಡತೊಡಗಿದನು. ಆಗ ಅವನಿಗೆ ಶಿಕ್ಷೆಯನ್ನು ಕೊಡಲು ಆಕಾಶವಾಣಿಯಾಯಿತು. ' ನಿನ್ನ ಇಂದ್ರಿಯ ಸುಖಕ್ಕೋಸ್ಕರವಾಗಿ ನಿರ್ದಯನಾಗಿ ಈ ಬಾಲಕನ ವಧೆಯನ್ನು ಮಾಡುವ ವಿಚಾರ ಮಾಡುತ್ತಿದ್ದೀಯೇ, ನಿನ್ನ ಪಾಪವಾಸನೆಗೆ ಧಿಕ್ಕಾ

ರವಿರಲಿ, ನೀನು ಕ್ಷಣಿಕ ಭೋಗದ ತೃಪ್ತಿಗಾಗಿ ದೊಡ್ಡ ಪಾಪಬಂಧವನ್ನು ಮಾಡಿಕೊಳ್ಳುತ್ತಿದ್ದಿಯೇ ಎಂದು ಆಕಾಶವಾಣಿಯಾಯಿತು.

ಪಾಪಿಗಳು ತನ್ನ ಅನುಕೂಲಳಾದ ತನ್ನ ಸ್ತ್ರೀಯನ್ನು ಬಿಟ್ಟು ಪರಸ್ತ್ರೀ ಲಂಪಟರಾಗಿ ದೊಡ್ಡ ಪಾಪವನ್ನು ಆಚರಿಸುತ್ತಿರುತ್ತಾರೆ.

**ಪರಿಪೂರ್ಣೇಪಿ ತಟಾಕೇ ಕಾಕಃ ಕುಂಭೋದಕಂ ಪಿಬತಿ**
**ಅನುಕೂಲೇಪಿ ಕಲತ್ರೇ ನೀಚಃ ಪರದಾರ ಲಂಪಟೋ ಭವತಿ ॥**

ಸುಭಾಷಿತಾವಲಿ.

ಹೇಗೆ ಕಾಗೆಯು ಸರೋವರದಲ್ಲಿ ನೀರು ತುಂಬಿದ್ದರೂ ಎಲ್ಲಿಯಾದರೂ ಗಡಿಗೆಯಲ್ಲಿ ತುಂಬಿದ್ದ ನೀರನ್ನೇ ಕುಡಿಯುತ್ತದೆಯೋ, ಹಾಗೆಯೇ ಮನೆಯಲ್ಲಿ ಅನುಕೂಲಳಾದ ಪತ್ನಿ ಇದ್ದರೂ ಪಾಪಿಗಳು ಪರಸ್ತ್ರೀ ಲಂಪಟರಾಗಿ ಪಾಪಬಂಧವನ್ನು ಮಾಡಿಕೊಂಡು ದುರ್ಗತಿಗೆ ಹೋಗುತ್ತಾರೆ. ಆ ಸಮಯದಲ್ಲಿ ಆ ಪಾಪಿಯೂ ಕ್ರೋಧದಿಂದ ಆತ್ಮಹತ್ಯೆಯನ್ನು ಮಾಡಿಕೊಂಡು ದುರ್ಗತಿಗೆ ಹೋದನು.

ಆದುದರಿಂದ ಭವ್ಯರೇ ! ಇಂದ್ರಿಯಗಳು ಬಹಳ ವಿಷಮವಾಗಿವೆ. ಇವುಗಳನ್ನು ಜಯಿಸಿರಿ. ತಮ್ಮ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳಿರಿ. ಹೀಗೆ ಆಚಾರ್ಯರ ಉಪದೇಶವಾಗಿದೆ.

ಕಾಮವಾಸನೆಯು ಕೆಟ್ಟ ಹೆಮ್ಮೆಯನ್ನು ಉತ್ಪನ್ನ ಮಾಡುತ್ತದೆ. ಆದಕ್ಕಾಗಿಯೇ ಕಾಮದೇವನಿಗೆ ಕಂದರ್ಪನೆಂದು ಹೇಳಲಾಗಿದೆ. ವಿಶೇಷ ಕಾಮನೆಯನ್ನು ಮಾಡಿಸಿ ದುಃಖವನ್ನು ಕೊಡುತ್ತಾನೆಂದು ಅವನಿಗೆ ಕಾಮನೆಂದು ಹೇಳಲಾಗಿದೆ. ಆ ಕಾಮನ ಕಾರಣದಿಂದ ಅನೇಕ ತಿರ್ಯಂಚ ಮತ್ತು ಮನುಷ್ಯರು ಪರಸ್ಪರ ಜಗಳಾಡಿ ಸಾಯುತ್ತಾರೆ. ಹಾಗಿರುವುದರಿಂದಲೇ ಅವನಿಗೆ ಮಾರನೆಂದು ಹೇಳಲಾಗಿದೆ. ಸಂವರಕ್ಕೆ ಅವನು ಶತ್ರು. ಆದುದರಿಂದ ಅವನಿಗೆ ಸಂವರಾರಿ ಎಂದು ಹೇಳಲಾಗಿದೆ. ಬ್ರಹ್ಮನೆಂದರೆ ಆತ್ಮಾ ಅಥವಾ ತಪಶ್ಚರ್ಯೆ. ಆ ಆತ್ಮನನ್ನು ತಪದಿಂದ

ಚಲಾಯಿಸುವನನ್ನಾಗಿ ಮಾಡುತ್ತಾನೆಂದು ಅವನಿಗೆ ಬ್ರಹ್ಮನೂ ಎಂದು ಹೇಳಲಾಗಿದೆ. ಹೀಗೆ ಅನೇಕ ಅನ್ವರ್ಥಕ ಹೆಸರು ಅವನಿಗೆ ಇವೆ. ಇದನ್ನು ತಿಳಿದು ಮನವಚನ ಕಾಯಗಳನ್ನು ನಿರೋಧಿಸಿ ಬ್ರಹ್ಮಚರ್ಯ ವ್ರತವನ್ನು ಪಾಲಿಸಿರಿ. ಬಾಲಬ್ರಹ್ಮಚರ್ಯ ವ್ರತವನ್ನು ಪಾಲಿಸುವವರು ತನ್ನ ರೂಪದಿಂದ ಇತರರಲ್ಲಿ ವಿಕಾರ ಉತ್ಪನ್ನವಾಗುವ ಶೃಂಗಾರ ವಸ್ತ್ರ ಆಭರಣಗಳನ್ನು ಬಿಡಬೇಕು. ವೈರಾಗ್ಯವನ್ನು ವರ್ಧಿಸುವ ವಸ್ತ್ರಾಲಂಕಾರಗಳನ್ನು ಧರಿಸಬೇಕು. ವೈರಾಗ್ಯವನ್ನು ವರ್ಧಿಸುವ ವಸ್ತ್ರಾಲಂಕಾರಗಳು ಯಾವುವೆಂದು ಈ ಕೆಳಗೆ ಹೇಳುತ್ತಾರೆ

**ಹಾತೀ ಪಾಟಲೀಗೋಟ ಕಸಲೇ ಘಾಲಾ ಕರೋನಿ ವ್ರತಕಂಕಣಾಲಾ**
**ಜಳೋನೀ ಕರ್ಮತೃಣ ಸಗಳೇ ಜಾಲಮಗ ನೋಕ್ಷಾಲಾ**
**ಲುಗಡೀ ಕಸಲೀ ನೇಸಾ ಬಾರಾ ಭಾವನಾ ಮಧೀ ಕಾಢಾ**
**ರತ್ನತ್ರಯಾಚಿ ಕಾಢಾ ಖಡೀ ಸತ್ಯ ಭಾಷಣ ಜರೀಸಾಡೀ**
**ಶ್ವಾಸ ಜಾಪಾಚೀ ನಥ ಘಾಲಾ ತುಮ್ಹೀ ತೀ ನಾಕಾಂತ**
**ದಿಸತೋ ಅತಿ ಶೋಭಿವಂತ ಮಿಳೇಲ ಮಾನ ಮುಕ್ತಿಪದಾಂತ**

ಆತ್ಮ ಸಿದ್ಧಿಗೋಸ್ಕರವಾಗಿ ನೀವು ವೈರಾಗ್ಯವೆಂಬ ರತ್ನ ಅಲಂಕಾರಗಳನ್ನು ಧರಿಸಿರಿ. ಕೈಯಲ್ಲಿ ವ್ರತವೆಂಬ ಪಾಟಲೀ ಬಳೆಗಳನ್ನು ಧರಿಸಿರಿ. ಅದು ನಿಮಗೆ ವಿಶೇಷವಾದ ಸೌಂದರ್ಯವನ್ನು ಬೆಳೆಸುವುದು. ಮತ್ತು ಕಡೆಗೆ ಕರ್ಮವನ್ನು ನಾಶ ಮಾಡುವುದು. ನೀನು ಇಂಥಹ ಸೀರೆಯನ್ನು ಉಡಬೇಕು. ಅದರಲ್ಲಿ ಹನ್ನೆರಡು ಭಾವನೆಗಳೆಂಬ ಕಸೀದಿಯನ್ನು ತೆಗೆಯಬೇಕು. ರತ್ನತ್ರಯವೆಂಬ ಕಡ್ಡಿಗಳನ್ನು ರಚಿಸಬೇಕು. ಸತ್ಯ ಭಾಷಣವೆಂಬ ಜರಿಯ ಸೀರೆಯನ್ನು ನೀನು ಧರಿಸಬೇಕು. ಜಪವೆಂಬ ನಥನ್ನು ಮೂಗಿನಲ್ಲಿ ಹಾಕಿಕೋ. ಆ ನಥು ನಿನಗೆ ಬಹಳ ಶೋಭಿಸಿ ಕಾಣಬಹುದು. ಮತ್ತು ಅದರಿಂದ ನಿನಗೆ ಬೇಗನೇ ಮುಕ್ತಿ ಮಾರ್ಗದ ಪ್ರಾಪ್ತಿಯಾಗುವುದು. ಸ್ತ್ರೀಯರಲ್ಲಿ ಅನುರಾಗವನ್ನು ನಿರ್ಮಿಸುವ ಕಥೆಯನ್ನು ಕೇಳ

ಬೇಡಿರಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಿರಿ. ಹಿಂದೆ ಭೋಗಿಸಿದ ವಿಷಯಗಳನ್ನು ಸ್ಮರಿಸ ಬೇಡಿರಿ. ಇಂದ್ರಿಯಗಳು ಮದೋನ್ಮತ್ತವಾಗುವ ಬ್ರಹ್ಮಚರ್ಯ ವ್ರತವನ್ನು ಚ್ಯುತ ಮಾಡುವ ಆಹಾರಗಳನ್ನು ಸೇವಿಸ ಬೇಡಿರಿ. ಚಿತ್ರಪಟಗಳ ಸ್ತ್ರೀಪುರುಷರ ಶೃಂಗಾರ ರೂಪಗಳನ್ನು ನೋಡ ಬೇಡಿರಿ. ಯಾವಾಗಲೂ ವೈರಾಗ್ಯ. ಉದಾಸೀನ ವೃತ್ತಿಯಲ್ಲಿರಲು ಪ್ರಯತ್ನ ಮಾಡಿರಿ ಇಂದ್ರಿಯಗಳು ಬಹಳ ಶಕ್ತಿಶಾಲಿಗಳಾಗಿವೆ. ಆ ಇಂದ್ರಿಯಗಳು ದೊಡ್ಡ ದೊಡ್ಡವರನ್ನು ಕೆಡಿಸಿ ದುರ್ಗತಿಗೆ ಒಯ್ಯುತ್ತವೆ. ಆದುದರಿಂದ ನೀವು ವಿರಕ್ತಭಾವನೆಯಿಂದ ಜಾಗೃತರಾಗಿರಿ.

ನೋಡಿ, ಒಂದು ಕಡೆಯಲ್ಲಿ ಹೀಗೆ ವೃತ್ತಾಂತ ಬಂದಿದೆ. ಒಬ್ಬ ಮುದುಕನ ೬೦ ನೇ ವರ್ಷದಲ್ಲಿ ಹೆಂಡತಿ ತೀರಿ ಹೋಯಿತು. ಅವನು ತನ್ನ ಆತ್ಮಕಲ್ಯಾಣದ ವಿಚಾರವನ್ನು ಮಾಡದೆ ಪುನಃ ಸಂಸಾರವನ್ನು ವರ್ಧಿಸುವ ವಿಚಾರದಿಂದ ಎರಡನೆ ಮದುವೆ ಮಾಡಿಕೊಂಡನು. ಆಗ ಅವನ ಆ ಯುವತಿಯಾದ ಸ್ತ್ರೀಯು ಅವನನ್ನು ನೋಡಿ ಅವನ ಸೇವೆ, ಚಾಕರೀ, ಮತ್ತು ಹೆಂಡತಿಯ ಕರ್ಮವನ್ನು ಪರಿಪಾಲಿಸಲಿಲ್ಲ. ಅದನ್ನು ನೋಡಿ ಮುದುಕನಿಗೆ ದುಃಖವಾಯಿತು. ಒಂದು ದಿವಸ ಹೇಳುತ್ತಾನೆ. ನೀನು ನನ್ನೊಡನೆ ಹೀಗೆ ಯಾಕೆ ವರ್ತಿಸುತ್ತಿರುವಿ. ಇದು ಯೋಗ್ಯವಲ್ಲ. ಆಗ ಆ ತರುಣಿಯು ಹೇಳುತ್ತಿದ್ದಾಳೆ. ' ನೀನು ೬೦ ವರ್ಷದ ಮುದುಕನಾಗಿದ್ದು ಪಂಚೇಂದ್ರಿಯಗಳನ್ನು ಜಯಿಸದೆ ಬೇರೆಯವರ ವಿಷಯ ಸುಖವನ್ನು ನಾಶ ಮಾಡುವುದಕ್ಕೋಸ್ಕರವಾಗಿ ಮದುವೆ ಏಕೆ ಮಾಡಿಕೊಂಡಿದ್ದು ? ಇದನ್ನು ಕೇಳಿ ಆ ಮುದುಕನು ಹೇಳುತ್ತಾನೆ. ನಿನಗೆ ಯಾವ ವಿಷಯದ ನ್ಯೂನತೆ ಇದೆ. ನಿನಗೆ ದೊಡ್ಡ ಮಗನಿದ್ದಾನೆ. ಆಗ ಅವಳು ಹೇಳುತ್ತಾಳೆ. ಅವನು ಸರ್ವ ಸಂಪತ್ತಿಯ ಅಧಿಪತಿಯಾಗುವನು. ನಾನು ಮಾತ್ರ ಚಾಕರಿ ಮಾಡಿ ಜೀವಿಸ ಬೇಕಾಗುವುದು. ಇದೇ ನನ್ನ ದೈವದಲ್ಲಿದೆ. ಒಂದು ವೇಳೆ ನಾನು ಸುಖಿಯಾಗಬೇಕೆಂಬ ಇಚ್ಛೆ ಇದ್ದರೆ ನಿನ್ನ ಆ ದೊಡ್ಡ

ಮಗನನ್ನು ಕೊಂದು ಬಾ. ನಂತರ ನನ್ನಿಂದ ಆದ ಮಗನು ನಿನಗೆ ಮತ್ತು ನನಗೆ ಸುಖವನ್ನು ಕೊಡುವನು. ಇದನ್ನು ಕೇಳಿ ಪ್ರೇಮಪಾಶದಿಂದ ಆ ಮುದುಕನು ಅವನ ಮಗನನ್ನು ಕೊಲ್ಲಲು ಸಿದ್ಧನಾದನು.

ನೋಡಿ, ಕರ್ಮದ ಚಮತ್ಕಾರವು ಹೇಗಿದೆ? ಆ ಮುದುಕನು ಕಾಮಾಂಧನಾಗಿ ತನ್ನ ಮಗನನ್ನು ಕೊಂದು ತಾನು ಇಂದ್ರಿಯ ಸುಖದ ಅಭಿಲಾಷೆಯನ್ನು ಮಾಡಿದನು.

**ವಪುಃ ಕುಬ್ಜೀಭೂತಂ ಗತಿರಪಿ ತಥಾ ಯಷ್ಟಿ ಶರಣಾ**
**ವಿಶೀರ್ಣಾ ದಂತಾಲಿಃ ಶ್ರವಣ ವಿಕಲಂ ಶ್ರೋತ್ರಯುಗಲಂ**
**ಶಿರಃ ಶುಕ್ಲಂ ಚಕ್ಷುಸ್ತಿಮಿರಪಟಲೈರಾವೃತಮಹೋ**
**ಮನೋ ಮೇ ನಿರ್ಲಜ್ಜಂ ತದಪಿ ವಿಷಯೇಭ್ಯಃ ಸ್ಪೃಹಯತಿ ॥**

ಸುಭಾಷಿತಾವಲಿ.

ನೋಡಿ, ಇಂದ್ರಿಯ ವಿಷಯಗಳು ಎಷ್ಟು ಅನರ್ಥಕ್ಕೆ ಕಾರಣವಾಗಿವೆ. ಅರುವತ್ತು ವರ್ಷದ ಮುದುಕನಾದ ಅವನ ಶರೀರವು ಶಿಥಿಲವಾಗಿ ಕೈಯಲ್ಲಿ ಕಟ್ಟಿಗೆ ಇಲ್ಲದೆ ಅವನಿಗೆ ನಡೆಯಲಿಕ್ಕೆ ಬರುವುದಿಲ್ಲ. ಕಿವಿ ಕೇಳುವುದಿಲ್ಲ. ತಲೆಯಲ್ಲಿ ಕರಿ ಕೂದಲು ಒಂದೂ ಇಲ್ಲ. ಹಲ್ಲೆಲ್ಲಾ ಬಿದ್ದು ಹೋಗಿವೆ. ಹೀಗಿರುವಾಗಲೂ ಆತನು ರಾತ್ರಿ ಹಗಲು ಆ ತನ್ನ ಮಗನನ್ನು ಕೊಲ್ಲಲು ಯುಕ್ತಿಯನ್ನು ವಿಚಾರ ಮಾಡುತ್ತಿದ್ದಾನೆ. ಇಂದ್ರಿಯ ವಿಕಾರಗಳು ಅನರ್ಥಕ್ಕೆ ಹೇಗೆ ಕಾರಣವಾಗುತ್ತಿವೆ ನೋಡಿರಿ. ಆಗ ಅವನಿಗೆ ಯಾವ ಯುಕ್ತಿಯೂ ಕಾಣಲಿಲ್ಲ. ಅದರ ಚಿಂತೆಯನ್ನೇ ಮಾಡುತ್ತಿದ್ದನು. ಆಗ ಆ ತರುಣ ಸ್ತ್ರೀಯು ಅವನಿಗೆ ಹೇಳಿದಳು. ಈ ಪ್ರಕಾರ ನೀವು ಚಿಂತೆ ಏನು ಮಾಡುತ್ತಿದ್ದೀರಿ. ನಿಮಗೆ ಏನಾಗಬೇಕಾಗಿದೆ. ಹೇಳಿ.

ಆಗ ಆ ಮುದುಕನು ‘ ನಿನ್ನ ಸಂತೋಷಕ್ಕೋಸ್ಕರವಾಗಿ ಆ ಮಗನನ್ನು ಹೇಗೆ ಕೊಲ್ಲುವುದೆಂಬ ಯುಕ್ತಿಯನ್ನು ವಿಚಾರಿಸುತ್ತಿದ್ದೇನೆ. ಅದರ ಚಿಂತೆಯನಾಗಿದೆ ’ ಎಂದನು. ಆಗ ಅವಳು ಯುಕ್ತಿಯನ್ನು ಹೇಳು

ತ್ತಿದ್ದಾಳೆ. ನಾನು ಹೇಳುತ್ತೇನೆ ಕೇಳಿ. ನಿನ್ನ ಮಗನು ಬೆಳಿಗ್ಗೆ ಎದ್ದು ಹೊಲಕ್ಕೆ ಹೋಗುತ್ತಾನೆ. ಆಗ ನೀನು ಅವನ ಹಿಂದಿನಿಂದ ಹೋಗಿ ಅವನಿಗೆ ತಿಳಿಯದಂತೆ ಅವನ ಕುತ್ತಿಗೆಯನ್ನು ಶಸ್ತ್ರದಿಂದ ಕಡಿದು ಹಾಕು. ಎಂದಳು. ಈ ಯುಕ್ತಿಯು ಆ ಮುದುಕನಿಗೆ ಉಚಿತವೆಂದು ತೋರಿತು. ಹಾಗೆಯೇ ಮಾಡುವೆನೆಂದನು. ಇವರು ಮಾತಾಡುವ ವಿಷಯವನ್ನು ಮಗನ ಹೆಂಡತಿ ( ಸೊಸೆ ) ಯು ಕೇಳಿದಳು ಈ ವಿಷಯವನ್ನು ಅವಳ ಗಂಡನಿಗೆ ತಿಳಿಸಿದಳು. ಅದನ್ನು ಕೇಳಿ ಆ ಮಗನು ಆಶ್ಚರ್ಯಚಕಿತನಾಗಿ ಹೊಲದಕಡೆ ಹೊರಟನು. ಹೊಲದಲ್ಲಿ ಧಾನ್ಯದ ಅಂಕುರಗಳು ಮೇಲಕ್ಕೆ ಬಂದು ಅವುಗಳಲ್ಲಿ ಧಾನ್ಯವು ತಯ್ಯಾರಾಗುವ ಸ್ಥಿತಿಯಲ್ಲಿತ್ತು. ಅವುಗಳ ನ್ನೆಲ್ಲಾ ಕಿತ್ತು ಕಿತ್ತು ತೆಗೆಯ ಹತ್ತಿದನು. ಮುದುಕನು ಅವನ ಹಿಂದಿನಿಂದ ಹೋಗಿ ಅವನನ್ನು ಹೇಗೆ ಕೊಲ್ಲುವುದೆಂಬ ವಿಚಾರವನ್ನು ಮಾಡುತ್ತಿದ್ದನು.

ನೋಡಿ, ಕರ್ಮದ ಗತಿಯು ಹೇಗೆ ವಿಚಿತ್ರವಾಗಿದೆ ? ಯಾವನಾ ದರೊಬ್ಬ ಜೀವನನ್ನು ಘಾತ ಮಾಡುವ ಸಂಕಲ್ಪವನ್ನು ಮನಸ್ಸಿನಲ್ಲಿ ಮಾಡಿ ದರೂ ಪ್ರತ್ಯಕ್ಷವಾಗಿ ಆ ಜೀವನ ಘಾತವಾಗದಿದ್ದರೂ ಅವನಿಗೆ ಹಿಂಸೆಯ ಪಾಪವು ಬರುತ್ತದೆಂದು ಜೈನಾಗಮದಲ್ಲಿ ಹೇಳಲಾಗಿದೆ.

**ಕೋಣ್ಯಾಹಿ ಪ್ರಾಣ್ಯಾಚ್ಯಾ ಛೇದನ ವಾ ಹನನ ಬಂಧನಾ ವಿಷಯಿ**
**ಕರಣೇ ಚಿಂತನ ಧರುನೀ ದ್ವೇಷಾಚೀ ದುಷ್ಟಭಾವನಾ ಹೃದಯಿ**

ಆ ಮುದುಕನು ಯಾವ ಪಾಪದ ವಿಚಾರವನ್ನೂ ಮಾಡದೆ ಆ ಮಗ ನನ್ನು ಕೊಲ್ಲಲು ಉದ್ಯುಕ್ತನಾದನು. ಅವನು ಮಗನ ಸಮೀಪಕ್ಕೆ ಬಂದನು ಆ ಸಮಯದಲ್ಲಿ ಮಗನೂ ಮಗನ ಹೆಂಡತಿಯೂ ಇಬ್ಬರು ಅಲ್ಲಿ ಇದ್ದುದ ರಿಂದ ಅವನ ಕಾರ್ಯವು ಸಿದ್ಧವಾಗಲು ಸ್ವಲ್ಪ ತೊಂದರೆಯಾಯಿತು. ಮಗನು ಆ ಅಪಕ್ವ ಧಾನ್ಯಗಳನ್ನು ಕೈಯಿಂದ ಕಿತ್ತೊಗೆಯುತ್ತಿದ್ದನು. ಅದನ್ನು ನೋಡಿ ಅವನು ಮಗನಿಗೆ ಕೇಳುತ್ತಾನೆ. ಏಕೆ ಹುಚ್ಚನಂತೆ ಮಾಡುತ್ತೀ. ಈ ಎಂಟು ದಿವಸಗಳಲ್ಲಿ ಬರುವ ಧಾನ್ಯಗಳನ್ನು ಏಕೆ

ಕಿತ್ತೊಗೆಯುತ್ತಿರುವಿ ? ಇದನ್ನು ಕೇಳಿ ಮಗನು ಅಪ್ಪಾ ! ಈ ಧಾನ್ಯವು ಚೆನ್ನಾಗಿ ಬರಲಿಲ್ಲ. ಆದುದರಿಂದ ಇದನ್ನು ಕಿತ್ತು ತೆಗೆದು ಹಾಕಿ ಪುನಃ ಈ ಭೂಮಿಯಲ್ಲಿ ಬೀಜ ಬಿತ್ತುವ ವಿಚಾರವನ್ನು ಮಾಡುತ್ತಿದ್ದೇನೆ. ಎಂದನು. ಆಗ ತಂದೆಯು ' ಅವಿವೇಕಿ ' ಈಗ ತಯ್ಯಾರಾದ ಧಾನ್ಯಗಳನ್ನು ನಾಶ ಮಾಡಿ ಮುಂದೆ ಉತ್ಪನ್ನ ಮಾಡುವ ವಿಚಾರವು ಅತ್ಯಂತ ಮೂರ್ಖತನದ್ದಾಗಿದೆ. ಎಂದನು. ಆಗ ಮಗನು ' ಇದು ತಮ್ಮ ವೃತ್ತಿ ಮತ್ತು ಶಿಕ್ಷಣದಿಂದಲೇ ಕಲಿತಿರುವೆನು ' ಎಂದನು. ಆಗ ಆ ಮುದುಕನ ಹೃದಯದಲ್ಲಿ ವಿವೇಕೋದಯವಾಯಿತು. ನನ್ನಂಥಹ ಪಾಪಿಗಳು ಲೋಕದಲ್ಲಿ ಯಾರು ಇದ್ದಾರೆಂದು ಪಶ್ಚಾತ್ತಾಪ ಮಾಡಿಕೊಂಡು ಮೂರ್ಛಿತನಾಗಿ ಬಿದ್ದನು. ಆಗ ತಂದೆಯನ್ನು ಮಗನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಶೀತೋಪಚಾರ ಮಾಡಿ ಸಾವಧಾನ ಮಾಡಿದನು ಆಗ ಅವನು ಪಶ್ಚಾತ್ತಾಪದಿಂದ ತನ್ನ ಮನಸ್ಸಿನಲ್ಲಿದ್ದ ಎಲ್ಲಾ ಪಾಪವೃತ್ತವನ್ನು ಮಗನಿಗೆ ಹೇಳಿದನು. ಅವನ ಹೃದಯದಲ್ಲಿ ಪೂರ್ಣ ವೈರಾಗ್ಯದ ಉದಯವಾಯಿತು. ತನ್ನ ಎಲ್ಲಾ ಸಂಪತ್ತಿಗಳನ್ನು ಮಗನಿಗೆ ಕೊಟ್ಟು ತಾನು ಮುನೀಶ್ವರರ ಸಮೀಪ ಹೋಗಿ ದೀಕ್ಷೆಯನ್ನು ತೆಗೆದುಕೊಂಡನು. ಆತ್ಮಧ್ಯಾನದಲ್ಲಿ ಲೀನನಾಗಿ ಎಲ್ಲಾ ವಿಷಯಗಳಲ್ಲಿ ಅವನು ಸಮತಾಭಾವವನ್ನು ಧರಿಸಿದನು.

ಸಮತಾ ಮಂದಿರಮೇ ಪಗ ಧರೇ
ಅನುಭವ ಅಮೃತ ಸೇವನ ಕರೇ ।

ಸ್ವಾನುಭವದರ್ಪಣ.

ಸಮತಾಭಾವದಲ್ಲಿ ತನ್ನ ಧ್ಯಾನಾಮೃತವನ್ನು ಪಾನ ಮಾಡಿ ಅವನು ಪರಬ್ರಹ್ಮನಾದನು. ಇದೇ ಉತ್ತಮ ಬ್ರಹ್ಮಚರ್ಯವಾಗಿದೆ.

ಆದುದರಿಂದ ಭವ್ಯರೇ, ಪಂಚೇಂದ್ರಿಯ ವಿಷಯಗಳನ್ನು ಜಯಿಸಿ ನೀವು ಆತ್ಮಸಿದ್ಧಿಗೋಸ್ಕರವಾಗಿ ಉತ್ತಮ ಬ್ರಹ್ಮಚರ್ಯವನ್ನು ಹೃದಯದಲ್ಲಿ ಧರಿಸಿರಿ. ಹೀಗೆ ಆಚಾರ್ಯರ ಉಪದೇಶವಾಗಿದೆ.

ಭವ್ಯರೇ, ನಿಮಗೆ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳುವ ಇಚ್ಛೆ ಇದ್ದರೆ ನೀವು ಬ್ರಹ್ಮಚರ್ಯವನ್ನು ಧರಿಸಿರಿ. ಇದು ಎಲ್ಲಾ ವ್ರತಗಳಲ್ಲಿ ಶ್ರೇಷ್ಠವಾಗಿದೆ. ಬ್ರಹ್ಮಚರ್ಯವಿಲ್ಲದಿದ್ದರೆ ಎಲ್ಲಾ ವ್ರತಗಳು ವ್ಯರ್ಥವಾಗಿವೆ. ಅಸಾರವಾಗಿವೆ. ಹೊರಗಿನ ಸ್ಪರ್ಶನೇಂದ್ರಿಯ ಸುಖದಿಂದ ವಿಮುಖರಾಗಿ ಅಂತರಂಗದಲ್ಲಿರುವ ಪರಮಾತ್ಮನ ನಿರ್ಮಲತೆಯನ್ನು ಅನುಭವಿಸಿರಿ. ಅದರಿಂದ ನೀವು ಆತ್ಮಕಲ್ಯಾಣದ ಮಾರ್ಗವನ್ನು ಪಡೆಯುವಿರಿ. ಪ್ರಯತ್ನ ಮಾಡಿರಿ.

" ಬ್ರಹ್ಮ ಸ್ವರೂಪೇಣ ಚರತೀತಿ ತದ್ ಬ್ರಹ್ಮಚರ್ಯಂ "

ಬ್ರಹ್ಮಚರ್ಯದಿಂದ ಉಭಯ ಲೋಕಗಳ ಸಿದ್ಧಿಯಾಗುತ್ತದೆ. ನಿಮಗೆ ಶೀಲ, ಪ್ರತಿಷ್ಠೆ, ಮತ್ತು ಕೀರ್ತಿಯ ಇಚ್ಛೆ ಇದ್ದರೆ ನಿಮ್ಮ ಹೃದಯದಲ್ಲಿ ಪರಮಾಗಮದ ಈ ಉಪದೇಶವನ್ನು ಸದಾ ಧರಿಸಿರಿ. ಬ್ರಹ್ಮಸ್ವರೂಪನಾದ ಆತ್ಮನಲ್ಲಿ ತನ್ನ ವೃತ್ತಿಯನ್ನಿಡುವುದಕ್ಕೆ ಬ್ರಹ್ಮಚರ್ಯವೆಂದು ಹೆಸರು.

ನಿಜ ಸ್ವರೂಪಮೇ ಮಗ್ನ ಹುಯೇ ಜಬ
ಪರಮಾನಂದ ದಶಾ ಪ್ರಕಟಾನೀ
ಸೋ ಯಥಾರ್ಥ ಬ್ರಹ್ಮಚರ್ಯ ಅವಸ್ಥಾ
ತಾಕೋ ಲಹತೇ ವರತ ಶಿವರಾನೀ ॥

ವಿಷಯ ಸುಖವನ್ನು ತ್ಯಜಿಸಿರಿ. ಆತ್ಮ ಸ್ವರೂಪದಲ್ಲಿ ಲೀನರಾಗಿದ್ದು ರತ್ನತ್ರಯವನ್ನು ವೃದ್ಧಿಗೊಳಿಸಿರಿ. ಅದನ್ನೇ ಸೇವಿಸಿರಿ. ಅದರಲ್ಲಿಯೇ ಕ್ರೀಡಿಸಿರಿ. ಆತ್ಮನ ಉನ್ನತಿಯನ್ನು ಮಾಡುವುದಕ್ಕೆ ಚಾರಿತ್ರವೇ ಕಾರಣವಾಗಿದೆ. ತನ್ನ ಆತ್ಮ ಸ್ವರೂಪದಲ್ಲಿರುವುದೇ ನಿಜವಾದ ಚಾರಿತ್ರ. ಆ ನಿಶ್ಚಯ ಚಾರಿತ್ರದಲ್ಲಿದ್ದು ಆತ್ಮ ಸ್ವರೂಪದ ಅನುಭವವನ್ನು ಮಾಡುವುದು ಅದೇ ಬ್ರಹ್ಮಚರ್ಯ. ಆ ಬ್ರಹ್ಮಚರ್ಯ ವ್ರತವನ್ನು ನೀವು ಪರಿ

ಪಾಲಿಸಿರಿ. ಇಂದ್ರಿಯ ಸುಖಗಳನ್ನು ಅನಂತ ಸಾರಿ ಭೋಗಿಸಿದ್ದೀರಿ. ಆದರೆ ಈ ಬ್ರಹ್ಮಚರ್ಯ ವ್ರತವನ್ನು ಇದು ವರೆಗೆ ಪರಿಪಾಲಿಸಲಿಲ್ಲ.

ನೋಡಿ, ಒಂದು ಸಾರಿ ಒಬ್ಬ ರಾಜಕುಮಾರನ ವಿವಾಹದ ಸಮಯ ವಿತ್ತು. ಸ್ವರ್ಗದ ದೇವನೊಬ್ಬನು ಅವನ ಮಿತ್ರನಾಗಿದ್ದನು. ಅವನು ವಿಮಾನದಲ್ಲಿ ಹೋಗುತ್ತಿರಲಾಗಿ ಅರಮನೆಯ ಮೇಲೆ ಬರಲು ಅವನ ವಿಮಾನವು ನಿತ್ತು ಹೋಯಿತು. ವಿಮಾನ ನಿಲ್ಲಲು ಕಾರಣವನ್ನು ಅವಧಿ ಜ್ಞಾನದಿಂದ ತಿಳಿದು ಅವನು ಕೆಳಗೆ ಬಂದನು ಮತ್ತು ತನ್ನ ಮಿತ್ರನೊಡನೆ ' ಮಿತ್ರ ! ನನ್ನನ್ನು ನೀನು ಗುರುತಿಸಿದಿಯಲ್ಲವೇ ? ' ಎಂದು ಕೇಳಿದನು. ಆಗ ಅವನ ವಚನವನ್ನು ಕೇಳಿ ರಾಜಕುಮಾರನಿಗೆ ಜಾತಿಸ್ಮರಣೆಯಾ ಯಿತು. ಮತ್ತು ಇದು ವರೆಗೆ ಭೋಗಿಸಿದ ಎಲ್ಲಾ ದುಃಖಗಳು ನೆನಪಿಗೆ ಬಂದವು. ಮತ್ತು ದುಃಖಿತನಾಗಿ ಅಳುತ್ತಾ ಆ ಮಿತ್ರನನ್ನು ಆಲಿಂಗಿಸಿ ಹೇಳುತ್ತಾನೆ. ' ನೀನು ನನ್ನ ನಿಜವಾದ ಮಿತ್ರನಾಗಿದ್ದೀ. ನನಗೆ ಅನೇಕ ಉಪಕಾರಗಳನ್ನು ಮಾಡಿದ್ದೀ ' ಆಗ ಆ ದೇವನು ' ಆದರೆ ನೀನು ಬಹಳ ಮೋಹದಲ್ಲಿ ಬಿದ್ದಿರುತ್ತೀ. ನಿನ್ನನ್ನು ಅದರಿಂದ ಬಿಡಿಸಲು ನಾನು ಬಂದಿರುತ್ತೇನೆ. ಎಂದನು. ನೀವು ಹಿಂದಿನ ಭವದಲ್ಲಿ ಹೆಣ್ಣು ಪಾರಿವಾಳ ಗಂಡು ಪಾರಿವಾಳಗಳಾಗಿದ್ದಿರಿ. ಎಂದು ಈ ಭವದಲ್ಲಿ ಪತಿ ಪತ್ನಿಗಳಾಗಿ ಆಗುವ ಯೋಗ ಬಂದಿದೆ. ಎಂದನು. ಭವ್ಯರೇ, ನೋಡಿ, ಮಿತ್ರನಿದ್ದರೆ ಹೀಗೆ ಇರಬೇಕು.

ಪಾಪಾನ್ನಿವಾರಯತಿ ಯೋಜಯತೇ ಹಿತಾಯ
ಗುಹ್ಯಂ ನಿಗೃಹ್ಯತಿ ಗುಣಾನ್ ಪ್ರಕಟೀಕರೋತಿ
ಅಪದ್‌ಗತಂ ಚ ನ ಜಹಾತಿ ದದಾತಿ ಕಾಲೇ
ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ

ಸುಭಾಷಿತಾವಲಿ.

ಯಾವನು ತನ್ನನ್ನು ಪಾಪಕಾರ್ಯದಿಂದ ಬಿಡಿಸಿ ನಮ್ಮ ಹಿತವನ್ನು ಮಾಡುತ್ತಾನೆಯೋ ನಮ್ಮ ದೋಷಗಳನ್ನು ಲೋಕದಲ್ಲಿ ಪ್ರಕಟಿಸದೆ ಗುಣಗಳನ್ನು ಮಾತ್ರ ಪ್ರಕಟಿಸುತ್ತಾನೆಯೋ ನಮ್ಮ ಮೇಲೆ ಸಂಕಟಗಳು ಬಂದರೆ ನಮ್ಮ ಕೈಯನ್ನು ಬಿಡದೆ ಸಹಾಯವನ್ನು ಮಾಡುತ್ತಾನೆಯೋ ಅವನೇ ನಮ್ಮ ನಿಜವಾದ ಮಿತ್ರನೆಂದು ತಿಳಿಯಬೇಕು. ನೋಡಿ, ಆ ಮಿತ್ರನು ಹೇಗಿದ್ದನು. ಸ್ವರ್ಗದ ದಿವ್ಯ ವೈಭವಗಳನ್ನು ಅನುಭವಿಸುತ್ತಿದ್ದರೂ ಮಿತ್ರನನ್ನು ಮರೆಯದೆ ಅವನ ಉಪಕಾರಕ್ಕೋಸ್ಕರವಾಗಿ ಬಂದನು. ನಿಜವಾದ ಮಿತ್ರರು ಪರಂಪರೆಯಿಂದ ಮುಕ್ತಿಯನ್ನು ಕೊಡಲೂ ಕಾರಣರಾಗಿರುತ್ತಾರೆ.

ಇಂಥಹ ನಿಜವಾದ ಮಿತ್ರತ್ವವು ದುರ್ಲಭವಾಗಿದೆ. ಆ ಮಿತ್ರನ ಉಪದೇಶವನ್ನು ಕೇಳಿ ಆ ಪತಿ ಪತ್ನಿಯರಿಗೆ ವೈರಾಗ್ಯದ ಉದಯವಾಯಿತು. ಅವರಿಬ್ಬರೂ ದೀಕ್ಷೆಯನ್ನು ತೆಗೆದುಕೊಳ್ಳಲಿಕ್ಕೆ ಹೊರಟರು. ತಾಯಿತಂದೆಗಳು ತಡೆದರು. ' ನೀವು ಹೋದರೆ ಈ ರಾಜ್ಯಕ್ಕೆ ಯಾರೂ ಉತ್ತರಾಧಿಕಾರಿಗಳಿಲ್ಲ. ಒಂದು ಮಗುವಾದ ನಂತರ ನೀವು ದೀಕ್ಷೆಯನ್ನು ತೆಗೆದುಕೊಳ್ಳಿರಿ. ಎಂದರು. ಆಗ ತಾಯಿ ತಂದೆಗಳ ಆಜ್ಞೆಯನ್ನು ಉಲ್ಲಂಘಿಸಲಾಗದೆ ಮನೆಯಲ್ಲಿಯೇ ವಿಷಯ ಭೋಗಗಳಿಂದ ವಿರಕ್ತರಾಗಿರಲು ಮತ್ತು ಬ್ರಹ್ಮಚರ್ಯವನ್ನು ಧರಿಸಿರಲು ನಿರ್ಧರಿಸಿದರು. ಹಾಗೆಯೇ ಮುನಿಗಳ ಸಮೀಪಕ್ಕೆ ಹೋಗಿ ಶುಕ್ಲ ಪಕ್ಷದಲ್ಲಿ ಪತಿಯೂ, ಕೃಷ್ಣಪಕ್ಷದಲ್ಲಿ ಪತ್ನಿಯೂ ಬ್ರಹ್ಮಚರ್ಯದಲ್ಲಿರುವುದೆಂಬ ಯಮ ವ್ರತವನ್ನು ಕೈಕೊಂಡರು ಮತ್ತು ಆ ವ್ರತವನ್ನು ಅತೀಚಾರರಹಿತವಾಗಿ ಪರಿಪಾಲಿಸುತ್ತಿದ್ದರು. ಮನೆಯಲ್ಲಿ ಪ್ರೇಮದಿಂದಿದ್ದು ವಿಕಾರಗಳನ್ನು ಜಯಿಸಿ ವ್ರತವನ್ನು ಪರಿಪಾಲಿಸುವುದು ಸಾಮಾನ್ಯ ವ್ಯಕ್ತಿಗಳ ಕಾರ್ಯವಲ್ಲ. ಇದು ದೊಡ್ಡ ಶೂರರ ಕಾರ್ಯವಾಗಿದೆ. ಇಂಥಹ ಕಠಿನವಾದ ವ್ರತಗಳನ್ನು ತೆಗೆದುಕೊಂಡು ನಿರ್ದೋಷವಾಗಿ ಪರಿಪಾಲಿಸುವವರು ಆಸನ್ನಭವ್ಯರೆಂದೇ ತಿಳಿಯತಕ್ಕದ್ದು.

ಹಿಡಿದರೆ ವ್ರತವ ಹಿಡಿಯಬೇಕು ಸರ್ಪನ ಹಿಡಿವಂತೆ ಕಡು ದೃಢವಾಗಿ। ಹಿಡಿವೋಲಳಿಮನಸಾದರೆ ವ್ರತ ತಾನೇ ಕಡಿವುದು ಫಣಿಯಂತೆ ತನ್ನ ॥

ಅವರೀರ್ವರೂ ಅರಮನೆಯಲ್ಲಿದ್ದು ವಿರಕ್ತಭಾವದಿಂದ ಇರುತ್ತಿದ್ದರು. ತಮ್ಮ ವ್ರತವನ್ನು ಚಿಂತಾಮಣಿ ರತ್ನದಂತೆ ರಕ್ಷಿಸುತ್ತಿದ್ದರು. ವ್ರತವನ್ನು ಧರಿಸಿ ಮೋಹದಿಂದ ಚಿತ್ತದಲ್ಲಿ ಚಂಚಲತೆಯು ಬಂದರೆ ಆ ವ್ರತದಲ್ಲಿ ದೋಷವು ಬರುತ್ತದೆ. ಯಾವ ಪ್ರಕಾರ ಕೈಯಲ್ಲಿ ಹಿಡಿದ ಸರ್ಪವನ್ನು ಸ್ವಲ್ಪ ಸಡಿಲು ಬಿಟ್ಟರೆ ಅದು ಹೇಗೆ ಆ ಹಿಡಿದವನನ್ನೇ ಕಡಿದು ಬಿಡುತ್ತದೆಯೋ ಹಾಗೆಯೇ ವ್ರತವನ್ನು ಧರಿಸಿದವನು ಆ ವ್ರತವನ್ನು ಸಡಿಲ ಬಿಟ್ಟರೆ ಅವನ ಹಾನಿ ಯಾಗುವುದು. ಅವನು ಆ ವ್ರತವನ್ನು ದೃಢವಾಗಿ ಹಿಡಿಯಬೇಕು. ಸ್ವಲ್ಪವೂ ಸಡಿಲ ಬಿಟ್ಟರೆ ಮುಂದಿನ ಅನೇಕ ಜನ್ಮಗಳ ಸುಖದಿಂದ ಅವರು ವಂಚಿತರಾಗುತ್ತಾರೆ.

ಹೀಗೆ ಆ ಪತಿಪತ್ನಿಯರು ಅದನ್ನು ಪರಿಪಾಲಿಸುತ್ತಾ ಕೆಲವು ಕಾಲ ಕಳೆಯಿತು. ಮಕ್ಕಳಾಗಲಿಲ್ಲ. ತಾಯಿತಂದೆಗಳು ಇವರಿಗೆ ಮಕ್ಕಳೇಕಾಗುವುದಿಲ್ಲವೆಂದು ವಿಚಾರ ಮಾಡತೊಡಗಿದರು, ಈ ಹೆಂಡತಿಯಿಂದ ಮಗುವಾಗುವುದಿಲ್ಲವೆಂದು ಮಗನಿಗೆ ಇನ್ನೊಂದು ಮದುವೆಯನ್ನು ಮಾಡಬೇಕೆಂಬ ವಿಚಾರವನ್ನು ಮಾಡಹತ್ತಿದರು. ಆಗ ಮಗನು ಅಪ್ಪ ! ನನ್ನ ಮದುವೆಯು ಆಗಿದೆ. ಪುನಃ ಮದುವೆಯ ವಿಚಾರವೇಕೆ ? ಎಂದನು. ಆಗ ತಂದೆಯು ‘ ಮದುವೆಯಾಗಿ ಬಹಳ ದಿನಗಳಾದರೂ ಸಂತತಿ ಯಾಗುವುದಿಲ್ಲ. ಆದುದರಿಂದ ಇನ್ನೊಂದು ಮದುವೆಯನ್ನು ಮಾಡಿ ನೋಡೋಣವೆಂದನು. ಆಗ ಮಗನು ‘ ಅಪ್ಪಾ, ನಿಜವಾಗಿ ನನ್ನ ಮದುವೆಯನ್ನು ಮಾಡುವ ಇಚ್ಛೆ ಇದ್ದರೆ ಅನಾದಿಕಾಲದಿಂದ ಬಂದ ಈ ಕರ್ಮ ಸಂತತಿಯನ್ನು ನಾಶ ಮಾಡಲು ಮುಕ್ತಿಲಕ್ಷ್ಮಿಯೊಡನೆ ನನ್ನ ಮದುವೆಯನ್ನು ಮಾಡು ಎಂದನು, ಅವರಿಗೆ ವಸ್ತು ಸ್ಥಿತಿಯನ್ನು ತಿಳಿಸಿ ಅವರೀರ್ವರಿಗೂ

ಮುನಿಗಳ ಹತ್ತಿರ ಹೋಗಿ ದೀಕ್ಷೆಯನ್ನು ತೆಗೆದುಕೊಳ್ಳುತ್ತೇವೆಂಬ ತಮ್ಮ ವಿಚಾರವನ್ನು ಅವರಿಗೆ ಅರುಹಿದರು. ಮುನಿಗಳ ಸಮೀಪಕ್ಕೆ ಆ ತಾಯಿ ತಂದೆಗಳು ಹೋಗಿ 'ಗುರುದೇವ' ಇವರಿಗೆ ಒಂದು ಮಗುವಾಗಲಿ, ನಂತರ ದೀಕ್ಷೆಯನ್ನು ದಯಪಾಲಿಸೋಣಾಗಲಿ! ಎಂದರು.

ಇದನ್ನು ಕೇಳಿ ಮುನಿಗಳು 'ಭವ್ಯರೇ ಇವರು ವಿರಕ್ತರಾಗಿದ್ದಾರೆ. ಸಂಸಾರದ ವಿಷಯದಲ್ಲಿ ಇವರಿಗೆ ಇಚ್ಛೆ ಇಲ್ಲ. ಆದುದರಿಂದ ಬ್ರಹ್ಮಚರ್ಯ ದಲ್ಲಿದ್ದಾರೆಂದು ತಿಳಿದ ಮೇಲೆ ಆ ತಾಯಿ ತಂದೆಗಳಿಗೂ ವೈರಾಗ್ಯದ ಉದಯವಾಯಿತು. ಅವರೂ ದೀಕ್ಷೆಯನ್ನು ಪಡೆದು ಮುಂದಿನ ತನ್ನ ಜೀವನವನ್ನು ಸತ್ಸಂಗತಿಯಿಂದ ಸುಧಾರಿಸಿಕೊಂಡರು. ಆದುದರಿಂದ ಭವ್ಯರೇ ! ನೀವೂ ಆತ್ಮಸುಖವನ್ನು ಬಯಸುವುದಾದರೆ ಇಂದ್ರಿಯ ವಿಷಯಗಳನ್ನು ಜಯಿಸಿ ಪರಬ್ರಹ್ಮನಾದ ಆತ್ಮ ಸ್ವರೂಪದಲ್ಲಿ ಲೀನರಾಗಿರಿ. ಇದೇ ಉತ್ತಮ ಬ್ರಹ್ಮಚರ್ಯವಾಗಿದೆ. ಇದನ್ನು ಪರಿಪಾಲಿಸಿ ನೀವು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಆಚಾರ್ಯರ ವಚನವಾಗಿದೆ.

ಭವ್ಯಾತ್ಮರೇ! ನೀವು ನಿಮ್ಮ ಆತ್ಮ ಕಲ್ಯಾಣಕ್ಕೋಸ್ಕರವಾಗಿ ಬ್ರಹ್ಮ ಚರ್ಯವ್ರತವನ್ನು ಪರಿಪಾಲಿಸಿರಿ. ಆ ವ್ರತದಿಂದ ನಿಮ್ಮ ಕರ್ಮವು ನಷ್ಟ ವಾಗಿ ಸುಖವು ಲಭಿಸುವುದು. ದುರ್ಧರವಾದ ಬ್ರಹ್ಮಚರ್ಯವನ್ನು ಪರಿ ಪಾಲಿಸುವ ಶಕ್ತಿ ಇಲ್ಲದಿದ್ದರೆ ತನ್ನ ಸ್ತ್ರೀಯಲ್ಲಿಯೇ ಸಂತುಷ್ಟನಾಗಿರುವುದು ಮತ್ತು ಸ್ತ್ರೀಯರು ತನ್ನ ಪತಿಯಲ್ಲಿಯೇ ಸಂತುಷ್ಟರಾಗಿರುವುದು. ಈ ವ್ರತದಲ್ಲಿ ದೋಷವನ್ನು ಬರದ ಹಾಗೆ ಮಾಡಿಕೊಳ್ಳಿ. ಸ್ತ್ರೀ ಕಥೆಯನ್ನು ಕೇಳಬೇಡಿ. ಸ್ತ್ರೀಯರ ಹಾವಭಾವಾದಿಗಳನ್ನು ನೋಡಬೇಡಿ. ಶೃಂಗಾರ ಮೊದಲಾದ ರಸಗಳಿಂದ ಯುಕ್ತವಾದ ನಾಟಕವನ್ನು ನೋಡಬೇಡಿ. ಅದನ್ನು ನೋಡುವುದರಿಂದ ಪರಿಣಾಮದಲ್ಲಿ ವಿಕಾರ ಉಂಟಾಗುತ್ತದೆ. ಪರಿಣಾಮದಲ್ಲಿ ವಿಕಾರವಾದರೆ ವ್ರತದಲ್ಲಿ ದೂಷಣೆ ಬರುತ್ತದೆ. ನಿಮ್ಮ ವ್ರತವನ್ನು ರಕ್ಷಿಸುವುದಕ್ಕೋಸ್ಕರ ತಾಂಬೂಲ, ಪುಷ್ಪಮಾಲಾ, ಅತರ್ತ

ಮೊದಲಾದ ಶೀಲಭಂಗವನ್ನು ಮಾಡುವ ವಸ್ತುಗಳನ್ನು ಸೇವಿಸಬೇಡಿರಿ. ಗೀತ, ನೃತ್ಯ ಮೊದಲಾದ ಕಾಮೋತ್ಪತ್ತಿಯ ವಿಕಾರವನ್ನು ವರ್ಧಿಸುವ ವಿಷಯಗಳನ್ನು ದೂರದಿಂದ ಪರಿವರ್ಜಿಸಿರಿ.

ಆದುದರಿಂದ ಭವ್ಯರೇ, ನೀವು ಇಂದ್ರಿಯವೆಂಬ ದರ್ಪವನ್ನು ಜಯಿಸಿರಿ. ಆ ದರ್ಪವು ಬಹಳ ನಿರ್ದಯವಾಗಿದ್ದು ಆತ್ಮನ ಅನಂತ ಗುಣಗಳ ಭಾಂಡಾರವನ್ನು ಅಗ್ನಿಯಂತೆ ಸುಡುತ್ತದೆ. ಕೋಟಿ ಯೋಧರನ್ನು ಜಯಿಸುವುದು ಸುಲಭವಾಗಿದೆ. ಆದರೆ ಈ ಕಾಮನೆಂಬ ದರ್ಪವನ್ನು ಜಯಿಸುವುದು ಕಠಿನವಾಗಿದೆ. ವಿವೇಕಿಗಳು ಈ ದರ್ಪವನ್ನು ಲೀಲಾ ಮಾತ್ರದಿಂದ ಜಯಿಸುತ್ತಾರೆ. ಮತ್ತು ತನ್ನ ಆತ್ಮಸಿದ್ಧಿಯನ್ನು ಮಾಡಿಕೊಳ್ಳುತ್ತಾರೆ.

**ಯತ್ಪೂರ್ವಾರ್ಜಿತಕರ್ಮಶೈಲಕುಲಿಶಂ ಯತ್ಕಾಮದಾವಾನಲ-**
**ಜ್ವಾಲಾಜಾಲಜಲಂ ಯದುಗ್ರಕರಣಗ್ರಾಮಾಹಿಮಂತ್ರಾಕ್ಷರಂ**
**ಯತ್ಪಾಪೌಘತಮಃಸಮೂಹದಿವಸಂ ಯಲ್ಲಬ್ಧಿಲಕ್ಷ್ಮೀಲತಾ**
**ಮೂಲಂ ತತ್ದ್ವಿವಿಧಂ ಯಥಾವಿಧಿ ತಪಃ ಕುರ್ವೀತವೀತಸ್ಪೃಹಃ**

ಪ್ರಶ್ನೋತ್ತರಮಾಣಿಕ್ಯಮಾಲಾ.

ಈ ವ್ರತವನ್ನು ಯಾರು ನಿರ್ದೋಷವಾಗಿ ಪರಿಪಾಲಿಸುತ್ತಾರೆಯೋ ಅವರ ಅನೇಕ ಭವಗಳಲ್ಲಿ ಆರ್ಜಿಸಿದ ಕರ್ಮವು ದೂರವಾಗುತ್ತದೆ. ಕರ್ಮವೆಂಬ ಕಾಡನ್ನು ನಷ್ಟ ಮಾಡಲು ಇದು ಮಂತ್ರದಂತಿದೆ. ಪಾಪವೆಂಬ ಕತ್ತಲೆಯನ್ನು ನಾಶ ಮಾಡಲು ಸೂರ್ಯನಂತಿದೆ. ಮೋಕ್ಷಲಕ್ಷ್ಮಿ ಎಂಬ ಬಳ್ಳಿಯ ಬೇರಿನಂತಿದೆ. ಹೀಗೆ ಈ ಬ್ರಹ್ಮಚರ್ಯವು ಉತ್ತಮವಾದ ವ್ರತವಾಗಿದೆ. ನೀವು ಸಂಸಾರದ ವಿಷಯದಲ್ಲಿ ವಿರಕ್ತರಾಗಿ ಆ ವ್ರತವನ್ನು ಧರಿಸಿರಿ, ಇಂದ್ರಿಯ ನಿಗ್ರಹವನ್ನು ಮಾಡಿರಿ. ಮುಕ್ತಿ ಎಂಬ ಸ್ತ್ರೀಯನ್ನು ವಶಪಡಿಸಿಕೊಳ್ಳಿರಿ. ಆ ಮುಕ್ತಿಯೆಂಬ ಸ್ತ್ರೀಯು ನಿಮ್ಮನ್ನು ಅನಂತಕಾಲದ ವರೆಗೆ ಬಿಡದೆ ನಿಮಗೆ ಸುಖ ಕೊಡುವಳು. ಇಂಥಹ ನಿತ್ಯಾನಂದವನ್ನು ಕೊಡುವ ಸ್ತ್ರೀಯು ನಿಮಗೆ ಇದು ವರೆಗೆ ಸಿಗಲಿಲ್ಲ, ವಿಚಾರ

ಮಾಡಿ ನೋಡಿದರೆ ಸಂಸಾರದಲ್ಲಿ ಪತಿಪತ್ನಿಯರ ಸುಖವು ಸ್ವಾರ್ಥಪೂರ್ಣ ವಾಗಿದೆ. ಗಂಡನು ಹೆಂಡತಿಯ ಇಚ್ಛೆಗೆ ಅನುಕೂಲನಾಗಿದ್ದರೆ ಅವಳೂ ಅವನೊಡನೆ ಪ್ರೇಮದಿಂದ ವರ್ತಿಸುತ್ತಾಳೆ. ಹಾಗೆಯೇ ಅವಳು ಅವನ ಇಚ್ಛೆಯಂತೆ ವರ್ತಿಸಿದರೆ ಅವನೂ ಪ್ರೇಮದಿಂದ ವರ್ತಿಸುತ್ತಾನೆ. ಸ್ವಲ್ಪ ವಾದರೂ ಇಂದ್ರಿಯ ಸುಖವು ಕಡಿಮೆ ಬಿದ್ದರೆ ಅವಳು ಸರ್ಪಿಣಿಯಂತೆ ಫುಸ್, ಫುಸ್ ಮಾಡಿ ಸಿಟ್ಟಿಗೆ ಬರುತ್ತಾಳೆ. ಆದರೆ ಸಂಸಾರೀ ಜೀವರು ಇದನ್ನು ವಿಚಾರ ಮಾಡದೆ ಮೋಹದಿಂದ ಸಂಸಾರದಲ್ಲಿ ಸುಖವೆಂದು ತಿಳಿದು ತಮ್ಮ ಪುಣ್ಯವನ್ನು ನಾಶಗೊಳಿಸುತ್ತಿದ್ದಾರೆ.

ನೋಡಿ, ಒಂದು ಸಾರಿ ಏನಾಯಿತು. ಒಬ್ಬ ರಾಜನು ತನ್ನ ರಾಣಿ ಯನ್ನು ತೆಗೆದುಕೊಂಡು ವಿಹಾರಕ್ಕೋಸ್ಕರವಾಗಿ ಲತಾ ಮಂಡಪಕ್ಕೆ ಹೋದನು. ಇಬ್ಬರೂ ಆ ಉಪವನದಲ್ಲಿ ವಿಹಾರ ಮಾಡುತ್ತಾ ಲತಾ ಮಂಡಪಗಳ ಶೋಭೆಯನ್ನು ನೋಡುತ್ತಿದ್ದರು. ರಾನಿಯು ವಿಶ್ರಾಂತಿಗೋ ಸ್ಕರವಾಗಿ ಲತಾ ಮಂಡಪದಲ್ಲಿದ್ದ ಒಂದು ಮಂಚದಲ್ಲಿ ಮಲಗಿದಳು. ರಾಜನು ಅಲ್ಲಿಯೇ ಸಮೀಪದಲ್ಲಿ ವಿಹರಿಸುತ್ತಿದ್ದನು. ರಾನಿಗೆ ಒಂದು ಸರ್ಪವು ಬಂದು ಕಚ್ಚಿತು. ಅವಳು ವಿಷದ ಪ್ರಭಾವದಿಂದ ಮೂರ್ಛಿತಳಾ ದಳು. ರಾಜನು ಬಂದು ಅವಳನ್ನು ನೋಡಿ ಮೋಹದಿಂದ ಅವನೂ ಮೂರ್ಛಿತನಾಗಿ ಬಿದ್ದನು. ಬಹಳ ದುಃಖಪಡುತ್ತಿದ್ದನು. ಆಗ ವನದೇ ವತೆಯು ಅದೃಶ್ಯರೂಪದಿಂದ ರಾಜನನ್ನು ಸಂಬೋಧಿಸಿ 'ರಾಜನ್, ದುಃಖದಿಂದ ಸುಖವಾಗಲಾರದು. ದುಃಖವನ್ನು ದೂರ ಮಾಡುವುದಕ್ಕೋ ಸ್ಕರ ಮತ್ತು ಸುಖವನ್ನು ಪಡೆಯುವುದಕ್ಕೋಸ್ಕರ ಮನುಷ್ಯನು ಪುಣ್ಯ ಕಾರ್ಯವನ್ನು ಮಾಡಬೇಕು. ಪುಣ್ಯಕಾರ್ಯವನ್ನು ಮಾಡುವುದರಿಂದ ದುಃಖದ ನಾಶವಾಗಿ ಸುಖದ ವೃದ್ಧಿಯಾಗುತ್ತದೆ. ಅಶುಭ ಕರ್ಮವು ದೂರವಾಗಿ ಸಂಕಟಗಳು ದೂರವಾಗುತ್ತವೆ. ಆದುದರಿಂದ ಈ ಸಂಕಟದ ಪರಿಹಾರಕ್ಕೋಸ್ಕರವಾಗಿ ನೀವು ಪುಣ್ಯವನ್ನು ಮಾಡಿರಿ. ಅದರಿಂದ ನಿಮ್ಮ ಎಲ್ಲಾ ಕಾರ್ಯಗಳೂ ಸಿದ್ಧಿಯಾಗುವವು.

**ವಿಪದಃ ಪರಿಹಾರಾಯ ಶೋಕಃ ಕಿಂ ಕಲ್ಪತೇ ನೃಣಾಂ**
**ಪಾವಕೇ ನಹಿ ಪಾತಃ ಸ್ಯಾತ್ ಆತಪಕ್ಲೇಶಶಾಂತಯೇ**

ಕ್ಷತ್ರಚೂಡಾಮಣಿ.

ಸಂಕಟ ಪರಿಹಾರಕ್ಕೋಸ್ಕರವಾಗಿ ವಿವೇಕಿಗಳು ಧರ್ಮಾಚರಣೆಯನ್ನು ಮಾಡಬೇಕು. ದುಃಖವನ್ನು ಮಾಡುವುದರಿಂದ ಏನು ಪ್ರಯೋಜನ? ಸೆಕೆಯ ಕಷ್ಟವನ್ನು ದೂರ ಮಾಡುವುದಕ್ಕೋಸ್ಕರವಾಗಿ ಅಗ್ನಿಯಲ್ಲಿ ಬೀಳುವುದು ವಿವೇಕವಲ್ಲ. ಅದರಿಂದ ಅದರ ಬಾಧೆಯು ಹೆಚ್ಚಾಗುವುದು. ಆದುದರಿಂದ ನೀವು ದುಃಖವನ್ನು ತ್ಯಜಿಸಿರಿ. ಇಲ್ಲಿ ಸಮೀಪದಲ್ಲಿಯೇ ಇರುವ ಪಾರ್ಶ್ವ ಜಿನಮಂದಿರದಲ್ಲಿ ನಿಮ್ಮ ರಾಣಿಯನ್ನು ತೆಗೆದುಕೊಂಡು ಹೋಗಿರಿ. ಅಲ್ಲಿ ಭಗವಂತನ ದರ್ಶನದಿಂದ ರಾಣಿಯ ವಿಷಬಾಧೆಯು ದೂರವಾಗುವುದು. ಎಂದಳು.

ಈ ಮಾತನ್ನು ಕೇಳಿ ರಾಜನು ಮೂರ್ಛಿತಳಾದ ರಾಣಿಯನ್ನು ಜಿನಮಂದಿರದಲ್ಲಿ ತೆಗೆದುಕೊಂಡು ಹೋಗಿ ಭಗವಂತನ ಗಂಧೋದಕದಿಂದ ಅವಳ ಶರೀರವನ್ನು ಶೇಚಿಸಿದನು. ಮತ್ತು ಬಹಳ ಭಕ್ತಿಯಿಂದ ಭಗವಂತನ ಸ್ತುತಿಯನ್ನು ಮಾಡತೊಡಗಿದನು.

**ಆಸ್ತಾಮಚಿಂತ್ಯಮಹಿಮಾ ಜಿನ ಸಂಸ್ತವಸ್ತೇ**
**ನಾಮಾಪಿ ಪಾತಿ ಭವತೋ ಭವತೋ ಜಗಂತಿ**
**ತೀವ್ರಾತಪೋಪಹತಪಾಂಥಜನಾನ್ನಿದಾಘೇ**
**ಪ್ರೀಣಾತಿ ಪದ್ಮ ಸರಸಃ ಸರಸೋನಿಲೋಪಿ**

ಭಗವಂತನ ಸ್ತುತಿಯಿಂದ ಸಂಕಟಗಳು ತನ್ನಷ್ಟಕ್ಕೆ ತಾನೇ ನಾಶಹೊಂದುತ್ತವೆ. ತೀವ್ರವಾದ ಉಷ್ಣತೆಯಿಂದ ತ್ರಸ್ತನಾದ ಪಥಿಕನು ಕಮಲ ಸರೋವರದ ಮೇಲೆ ಬೀಸುತ್ತಿರುವ ಗಾಳಿಯಿಂದ ಸಂತುಷ್ಟನಾಗುತ್ತಾನೆ. ಹಾಗೆಯೇ ಶ್ರೀ ಪಾರ್ಶ್ವನಾಥ ಭಗವಂತನ ಭಕ್ತಿಪೂರ್ಣ ಸ್ತುತಿಯಿಂದ

ರಾಣಿಯ ವಿಷಬಾಧೆಯು ದೂರವಾಗಿ, ಅವಳ ಮೂರ್ಛಿತ ಅವಸ್ಥೆಯು ಹೋಯಿತು. ಜಾಗೃತಳಾದಳು. ರಾಜನಿಗೆ ಅತ್ಯಾನಂದವಾಯಿತು. ೧೦೮ ಸುವರ್ಣ ಮತ್ತು ರತ್ನಮಯ ಕಮಲಗಳನ್ನು ಭಗವಂತನ ಚರಣಂಗಳಲ್ಲಿ ಏರಿಸುವುದಕ್ಕೋಸ್ಕರವಾಗಿ ಅವನು ಅರಮನೆಗೆ ಹೋದನು. ರಾಣಿಯು ಅದೇ ಜಿನಮಂದಿರದಲ್ಲಿ ಕುಳಿತಿದ್ದಳು. ಅಷ್ಟರಲ್ಲಿ ಮತ್ತೊಬ್ಬ ರಾಜನು ತಿರುಗಾಡುತ್ತಾ ಜಿನದರ್ಶನಕ್ಕೆಂದು ಅಲ್ಲಿ ಬಂದನು. ಅವನನ್ನು ನೋಡಿ ರಾಣಿಯು ಕಾಮಾಂಧಳಾಗಿ ಅವನಲ್ಲಿ ಮೋಹಿತಳಾದಳು. ಮತ್ತು ಅವನಿಗೆ ಹೇಳುತ್ತಾಳೆ. ' ನನ್ನ ಪತಿಯು ಬರುವುದಕ್ಕೆ ಮುನ್ನವೇ ನಾವು ಇಲ್ಲಿಂದ ಎಲ್ಲಿಯಾದರೂ ಹೊರಟು ಹೋಗೋಣ. ನಾನು ನಿನ್ನೊಡನೆ ಬರಲು ಸಿದ್ಧಳಾಗಿದ್ದೇನೆ. ಇದನ್ನು ಕೇಳಿ ರಾಜನು ವಿಚಾರ ಮಾಡತೊಡಗಿದನು.

ಇವಳು ನನ್ನ ಮಿತ್ರನ ರಾಣಿಯಾಗಿದ್ದಾಳೆ. ನನಗೆ ಪರಸ್ತ್ರೀ ತ್ಯಾಗ ವ್ರತವಿದೆ. ಇವಳು ನನಗೆ ತಂಗಿಗೆ ಸಮಾನಳಾಗಿದ್ದಾಳೆ. ಇಂಥಹ ಪಾಪ ವಿಚಾರವನ್ನು ಮಾಡಬಾರದು. ಎಂದು ವಿಚಾರ ಮಾಡಿ ಅವಳಿಗೆ ಏನೂ ಉತ್ತರಿಸದೆ ಭಗವಂತನ ಸ್ತುತಿಯನ್ನು ಮಾಡ ತೊಡಗಿದನು.

ಪರಸ್ತ್ರೀ ಸೇವನೆಯಿಂದ ದೊಡ್ಡ ದುರ್ಗತಿಯು ಬಂಧವಾಗಿ ಅತಿ ದಾರುಣ ದುಃಖವನ್ನು ಅನುಭವಿಸಬೇಕಾಗುತ್ತದೆ.

**ಬಂಧಂ ಬಂಧಂ ಧನಭ್ರಂಶಂ ಶೋಕಂ ತಾಪಂ ಕುಲಕ್ಷಯಂ**
**ಆಯಾಸಂ ಕಲಹಂ ಮೃತ್ಯುಂ ಲಭಂತೇ ಪಾರದಾರಿಕಾಃ**

ಪರಸ್ತ್ರೀ ಸೇವನೆ ಮಾಡುವವರಿಗೆ ರಾಜನು ದಂಡವನ್ನು ವಿಧಿಸುತ್ತಾನೆ. ಅವರ ಲೋಕದಲ್ಲಿ ನಿಂದೆಯಾಗುತ್ತದೆ. ಅವರ ಅಪಮಾನವಾಗುತ್ತದೆ. ಕ್ರೋಧದಿಂದ ಬೇರೆಯವರೊಡನೆ ಯಾವಾಗಲೂ ಜಗಳ ಮಾಡುತ್ತಾರೆ. ನಂತರ ಜನರು ಅವರನ್ನು ವೈರಿ ಎಂದು ತಿಳಿದು ಪ್ರಾಣವನ್ನು ಅಪಹರಿಸುತ್ತಾರೆ. ಪರಲೋಕದಲ್ಲಿಯೂ ಅವರು ದುಃಖ ಭಾಗಿಯಾಗು

ತ್ತಾರೆ. ಆ ರಾಜನು ವಿವೇಕ ಸಂಪನ್ನನಾಗಿದ್ದರಿಂದ ಅವಳನ್ನು ತನ್ನ ತಂಗಿ ಎಂದು ಭಾವಿಸಿದನು. ಇಷ್ಟರಲ್ಲಿ ಸುವರ್ಣ ಕಮಲಗಳನ್ನು ತೆಗೆದುಕೊಂಡು ಅವಳ ಗಂಡನು ಬಂದನು. ಬಂದ ಕೂಡಲೇ ಮಂದಿರದಲ್ಲಿ ತನ್ನ ಮಿತ್ರನನ್ನು ನೋಡಿ ಅವನಿಗೆ ಬಹಳ ಸಂತೋಷವಾಯಿತು. ಇಬ್ಬರೂ ಒಬ್ಬರಿಗೊಬ್ಬರು ಆಲಿಂಗಿಸಿ ಕುಶಲ ಪ್ರಶ್ನೆಯನ್ನು ಕೇಳಿಕೊಂಡರು. ಎಲ್ಲರೂ ಕೂಡಿ ಭಗವಂತನ ಪೂಜೆಯನ್ನು ಮಾಡೋಣವೆಂದು ಕೂಡಿ ಪೂಜೆಯನ್ನು ಮಾಡತೊಡಗಿದರು. ಪೂಜೆಯು ಮುಗಿದ ನಂತರ ರಾಜನು ಬಹಳ ಭಕ್ತಿಯಿಂದ ಸುವರ್ಣಕಮಲಗಳ ವೃಷ್ಟಿಯನ್ನು ಭಗವಂತನ ಮೇಲೆ ಮಾಡಿದನು. ಶಾಂತಿಧಾರೆಯನ್ನು ಎರೆದು ರಾಜನು ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿರುವಾಗ ರಾಣಿಯು ಶಸ್ತ್ರದಿಂದ ಅವನನ್ನು ಹೊಡೆಯಲು ಪ್ರಯತ್ನಿಸಿದಳು. ಆಗ ಮಿತ್ರ ರಾಜನು ಕೈಹಿಡಿದು ತಡೆದನು. ಆ ಶಸ್ತ್ರವು ರಾಜನಿಗೆ ತಗಲದೆ ಕೇವಲ ಶಬ್ದವಾಯಿತು. ರಾಜನು ಎದ್ದು ನೋಡಿ ಈ ಸಂಗತಿಯಿಂದ ಚಕಿತನಾದನು. ಇದೇನು ? ಪ್ರಕರಣವೆಂದು ಕೇಳಿದನು. ಆಗ ಮಿತ್ರ ರಾಜನು ' ಏನೂ ಇಲ್ಲ. ಕರ್ಮದ ಲೀಲೆಯು ವಿಚಿತ್ರವಾಗಿದೆ. ಎಂದನು. ಇದರಲ್ಲಿ ಏನಾದರೂ ರಹಸ್ಯವಿದೆ ಎಂಬ ಸಂದೇಹದಿಂದ ರಾಜನು ಆ ಮಿತ್ರನನ್ನು ಏಕಾಂತದಲ್ಲಿ ವಿಚಾರಿಸಲು ಅವನು ಎಲ್ಲಾ ವಿಷಯವನ್ನು ಕೂಲಂಕಷವಾಗಿ ತಿಳಿಸಿ ಕರ್ಮದ ಉದಯವು ಹೇಗೆ ಇರುತ್ತದೆಂಬುದನ್ನು ತಿಳಿಸಿದನು. ಆಗ ರಾಜನು ' ನಾನು ರಾಣಿಗೋಸ್ಕರ ಎಷ್ಟು ಚಿಂತೆ ಮಾಡುತ್ತಿದ್ದೆ. ಎಷ್ಟು ಪ್ರೀತಿಸುತ್ತಿದ್ದೆ. ಆದರೆ ಈ ದುಷ್ಟೆಯು ನನ್ನ ಪ್ರಾಣವನ್ನು ತೆಗೆದುಕೊಳ್ಳಲು ಹಿಂಜರಿಯಲಿಲ್ಲ. ಇಂಥಹ ಸ್ತ್ರೀಯರ ಸಂಗತಿಯಲ್ಲಿರುವುದರಿಂದ ಕಾಡಿನಲ್ಲಿರುವುದು ಲೇಸು. ಎಂಬ ವಿಚಾರ ಮಾಡಿ ವಿರಕ್ತಿಯು ಮೂಡಿ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ತನ್ನ ಮಿತ್ರನೊಡನೆ ಜಿನದೀಕ್ಷೆಯನ್ನು ತೆಗೆದುಕೊಂಡನು. ನೋಡಿ. ಈ ಸಂಸಾರವು ನಾಟಕದಂತಿದೆ. ಪುಣ್ಯದಿಂದ ಇಲ್ಲಿ ಪುಣ್ಯವಂತನಿಗೆ ಉತ್ತಮ, ಶೀಲವತೀ ರೂಪವತೀ, ಗುಣವತೀ ಸ್ತ್ರೀಯು ದೊರೆಯುತ್ತಾಳೆ. ಅವಳಿಂದ

ಮನೆಗೆ ಕುಲಕ್ಕೆ ಭೂಷಣವಾಗುತ್ತದೆ. ಅಂಥಹ ಸ್ತ್ರೀಯರು ಪತಿಯೊಡನೆಯೂ ಹೇಗೆ ವರ್ತಿಸುತ್ತಾರೆಂಬ ವಿಷಯವನ್ನು ಈ ಕೆಳಗಿನ ಶ್ಲೋಕದಲ್ಲಿ ಹೇಳಿದ್ದಾರೆ.

ಕಾರ್ಯೇಷು ಮಂತ್ರೀ ಕರಣೇಷು ದಾಸೀ
ಭೋಜ್ಯೇಷು ಮಾತಾ ಶಯನೇಷು ರಂಭಾ
ಧರ್ಮಾನುಕೂಲಾ ಕ್ಷಮಯಾ ಧರಿತ್ರೀ
ಭಾರ್ಯಾ ಚ ಷಾಡ್ಗುಣ್ಯವತೀವ ದುರ್ಲಭಾ

ಶೀಲವತೀ ಸಾಧ್ವಿ ಸ್ತ್ರೀಯು ತನ್ನ ಪತಿಯ ಮನೆಯ ಕಾರ್ಯವನ್ನು ಏನೂ ಹಾನಿ ಮಾಡದೆ ರಾಜನ ಮಂತ್ರಿಯಂತೆ ಅತ್ಯಂತ ಚಿಂತಾಪೂರ್ವಕವಾಗಿ ಮಾಡುತ್ತಾಳೆ. ಪತಿಯ ಸೇವೆಯನ್ನು ಮನೆಯ ದಾಸಿಯಂತೆ ಮಾಡುತ್ತಾಳೆ. ತಾಯಿಯಂತೆ ಪತಿಯ ಊಟದ ವ್ಯವಸ್ಥೆಯನ್ನು ಅತ್ಯಂತ ಸ್ನೇಹಪೂರ್ವಕವಾಗಿ ಮಾಡುತ್ತಾಳೆ. ಕ್ರೀಡೆಯಲ್ಲಿ ಪತಿಯ ಮನಸ್ಸನ್ನು ರಂಭೆಯಂತೆ ಆಕರ್ಷಿಸುತ್ತಾಳೆ. ಧರ್ಮಕಾರ್ಯಗಳಲ್ಲಿ ಅನುಕೂಲಳಾಗಿಯೂ ಮತ್ತು ಭೂಮಿಯಂತೆ ಕ್ಷಮೆಯನ್ನು ಧರಿಸುವವಳೂ ಆಗಿರುತ್ತಾಳೆ. ಇಂಥಹ ಗುಣಗಳನ್ನು ಪಡೆಯುವ ಸ್ತ್ರೀಯರು ಸಂಸಾರದಲ್ಲಿ ವಿರಳ. ಇಂಥಹ ಗುಣಗಳಿಂದ ಆ ಸ್ತ್ರೀಯು ಮನೆಗೆ ಭೂಷಣವಾಗಿರುತ್ತಾಳೆ. ನೋಡಿ, ಆ ರಾಜನ ಅವಳು ರಾಣಿಯಾಗಿದ್ದರೂ ಪತಿ ಭಕ್ತಿ ಇಲ್ಲದಿರುವುದರಿಂದ ಲೋಕನಿಂದೆಗೆ ಪಾತ್ರಳಾದಳು. ಮತ್ತು ಮುಂದೆಯೂ ದುರ್ಗತಿಗೆ ಹೋದಳು. ಆದುದರಿಂದ ಭವ್ಯರೇ, ನೀವು ವಿಚಾರ ಮಾಡಿ ಶೀಲ ಪಾಲನೆಯನ್ನು ಮಾಡಿರಿ. ಶೀಲವಿಲ್ಲದೆ ಮನುಷ್ಯನಿಗೆ ಶೋಭೆ ಇಲ್ಲ. ಶೀಲವನ್ನು ಪರಿಪಾಲಿಸಿ ಎಷ್ಟು ಸ್ತ್ರೀಯರು ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ. ನೋಡಿರಿ. ದ್ರೌಪದಿಯ ಶೀಲಭಂಗವನ್ನು ಮಾಡಲಿಕ್ಕೆ ದುರ್ಯೋಧನನು ವಸ್ತ್ರವನ್ನು ಅಪಹರಿಸಲು ಪ್ರಯತ್ನಿಸಿದನು. ಶೀಲ ಪ್ರಭಾವದಿಂದ ಮೇರು ಪರ್ವತದಂತೆ ವಸ್ತ್ರಗಳು ಅಲ್ಲಿ ಬಂದವು. ಆ ಸಮಯದಲ್ಲಿ ದ್ರೌಪದೀ ಹೇಳುತ್ತಾಳೆ.

ದೂರ ರಹೋ ಸೈತಾನಕೇ ಬಚ್ಚೇ ಮೇಂ ಪತಿವ್ರತಾ ನಾರೀ ಹೂಂ
ವೀರಕೀ ಪತ್ನೀ ವೀರಕೀ ಭಗಿನೀ ವೀರಕೀ ರಾಜದುಲಾರೀ ಹೂಂ

ದುಷ್ಟ ! ನೀನು ದೂರವಾಗಿರು. ನನ್ನನ್ನು ಮುಟ್ಟಬೇಡ. ನಾನು ಪತಿವ್ರತೆಯಾಗಿದ್ದೇನೆ. ವೀರನ ಸತಿಯಾಗಿದ್ದೇನೆ. ವೀರನ ತಂಗಿಯಾಗಿದ್ದೇನೆ. ವೀರನ ಪುತ್ರಿಯಾಗಿದ್ದೇನೆ. ಇಂಥ ಕದುಷ್ಟ ವಿಚಾರಗಳಿಂದ ನಾನು ಹೆದರುವವಳಲ್ಲ. ನನ್ನ ಪಾತಿವ್ರತ್ಯವನ್ನು ಭಂಗ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಈ ನಿರ್ಧಾರವಾಣಿಯನ್ನು ಕೇಳಿ ದೇವತೆಗಳು ಅವಳನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸಿ ಸಿಂಹಾಸನದಲ್ಲಿ ಕುಳ್ಳಿರಿಸಿ ಪೂಜಿಸಿದರು. ಮತ್ತು ಅವಳ ಶೀಲವನ್ನು ಪ್ರಶಂಸಿಸಿದರು. ಆದುದರಿಂದ ಈ ಜಗತ್ತಿನಲ್ಲಿ ಶೀಲವತಿಯೆಂದು ಪ್ರಸಿದ್ಧಳಾದಳು. ಪರಭವದಲ್ಲಿ ಸ್ತ್ರೀಪರ್ಯಾಯವನ್ನು ದೂರ ಮಾಡಿ ಸದ್ಗತಿಯನ್ನು ಹೊಂದಿದಳು ಆದುದರಿಂದ ಭವ್ಯರೇ ! ನೀವು ಇಂದ್ರಿಯಗಳನ್ನು ವಶ ಪಡಿಸಿಕೊಂಡು ಶೀಲವನ್ನು ಪರಿಪಾಲಿಸಿರಿ. ಇಹ ಲೋಕ ಪರಲೋಕಗಳಲ್ಲಿ ಸುಖವನ್ನು ಕೊಡುವ ಬ್ರಹ್ಮಚರ್ಯ ಧರ್ಮವನ್ನು ನಿಮ್ಮ ಹೃದಯದಲ್ಲಿ ಧರಿಸಿರಿ, ಮತ್ತು ಸಿದ್ಧಿಯನ್ನು ಮಾಡಿಕೊಳ್ಳಿರಿ. ಹೀಗೆ ಜೈನಾಚಾರ್ಯರ ಉಪದೇಶವಾಗಿದೆ.

ಭವ್ಯಾತ್ಮರೇ ! ನಿಮಗೆ ಅನಾದಿಕಾಲದಿಂದ ಅಜ್ಞಾನವೆಂಬ ಸರ್ಪದ ಬಾಧೆಯಾಗಿದೆ. ಆ ವಿಷದಿಂದ ನೀವು ಸ್ವಸ್ವರೂಪದ ವಿಚಾರವನ್ನು ಮಾಡದೆ ಇಂದ್ರಿಯ ವಿಷಯವೆಂಬ ಭೋಗದಲ್ಲಿ ಮಗ್ನರಾಗಿದ್ದೀರಿ ಈಗ ಆ ವಿಷವನ್ನು ದೂರ ಮಾಡುವುದಕ್ಕೋಸ್ಕರ ಧರ್ಮವನ್ನು ಪರಿಪಾಲಿಸಿರಿ. ಶುಭ ಧರ್ಮವು ನಿಮಗೆ ಶುಭ ಗತಿಯನ್ನು ಕೊಡುವುದು. ಯಾವಾಗಲೂ ಶುಭ ಭಾವನೆಯನ್ನು ಮಾಡಿರಿ. ಶುಭ ಭಾವನೆಯಿಂದ ನಿಮಗೆ ಶುಭ ಗತಿಯು ಲಭಿಸುವುದು. ಈ ಲೋಕದಲ್ಲಿ ನಿಮ್ಮ ಕೀರ್ತಿಯು ಬೆಳೆಯುವುದು. ಈ ಕಲಿಕಾಲದಲ್ಲಿ ಮನಸ್ಸನ್ನು ನಿರ್ಮಲವಾಗಿಡುವುದು ಬಹಳ ಕಷ್ಟವಾಗಿದೆ. ಮನಸ್ಸನ್ನು ನಿರ್ಮಲ ಮಾಡಿ ಸಮ್ಯಗ್ದರ್ಶನವನ್ನು ಪಡೆಯುವುದು

ಬಹಳ ಕಠಿನ ಸಾಧ್ಯವಾಗಿದೆ. ನೀವು ಅನಂತ ಕಾಲದ ವರೆಗೆ ಬಹಿರಾತ್ಮ ಭಾವನೆಯಿಂದ ಕೂಡಿ ಸಂಸಾರದಲ್ಲಿ ಪರಿಭ್ರಮಣೆಯನ್ನು ಮಾಡುತ್ತಿದ್ದೀರಿ. ನೀವು ಅಂತರಾತ್ಮನ ಸ್ವರೂಪವನ್ನು ವಿಚಾರ ಮಾಡಿರಿ.

ಮಧ್ಯಮ ಅಂತರ ಆತಮ ಹೈ ಜೇ ದೇಶವ್ರತೀ ಅಗಾರೀ
ಜಘನ್ಯ ಕಹೇ ಅವಿರತ ಸಮದೃಷ್ಟೀ ತೀನೋ ಶಿವಮಗಚಾರೀ

ದೇಶವ್ರತಿ ಶ್ರಾವಕನು ಮಧ್ಯಮ ಅಂತರಾತ್ಮನು. ವ್ರತರಹಿತನಾದಾಗ್ಯೂ ಸಮ್ಯಗ್ದರ್ಶನದಿಂದ ಯುಕ್ತನಾದವನು ಜಘನ್ಯ ಅಂತರಾತ್ಮನು. ಹೀಗೆ ಉತ್ತಮ ಮಧ್ಯಮ ಮತ್ತು ಜಘನ್ಯ ಭೇದಗಳಿಂದ ಯುಕ್ತವಾದ ಮೂರೂ ಸಮ್ಯಗ್ದೃಷ್ಟಿಗಳೂ ಮೋಕ್ಷಮಾರ್ಗದಲ್ಲಿ ರತರಾಗಿರುವರು. ಆದುದರಿಂದ ಭವ್ಯರೇ! ನಿಮ್ಮ ಕಲ್ಯಾಣಕ್ಕೋಸ್ಕರ ಯಥಾ ಶಕ್ತಿ ಚಾರಿತ್ರಶೀಲಗಳನ್ನು ಪರಿಪಾಲಿಸಿರಿ.

ಏಕಾಗ್ರಚಿತ್ತಸ್ಯ ದೃಢವ್ರತಸ್ಯ
ಪಂಚೇಂದ್ರಿಯಪ್ರೀತಿನಿವರ್ತಕಸ್ಯ
ಅಧ್ಯಾತ್ಮಯೋಗೇ ಗತಮಾನಸಸ್ಯ
ಮೋಕ್ಷೋ ಧ್ರುವಂ ನಿತ್ಯಮಹೋ ನರಸ್ಯ ॥

ನೀವು ಮೋಕ್ಷದ ಅಭಿಲಾಷೆಯನ್ನು ಮಾಡುವುದಾದರೆ ಮನಸ್ಸನ್ನು ದೃಢಪಡಿಸಿ ಉತ್ತಮ ಬ್ರಹ್ಮಚರ್ಯವನ್ನು ಧರಿಸಿ ಇಂದ್ರಿಯ ಸುಖಗಳನ್ನು ಪರಿತ್ಯಜಿಸಿ ಮನಸ್ಸನ್ನು ಆತ್ಮ ಧ್ಯಾನದಲ್ಲಿ ಲೀನವಾಗಿ ಮಾಡಿ, ಅಹಿಂಸಾ ವ್ರತವನ್ನು ಪರಿಪಾಲಿಸಿರಿ. ಯಾರು ಇದನ್ನು ಪರಿಪಾಲಿಸುತ್ತಾರೆಯೋ ಅವರಿಗೆ ಮೋಕ್ಷವು ಲಭಿಸುತ್ತದೆ. ನೀವು ಇಂದ್ರಿಯ ಸುಖಗಳನ್ನು ಅನಂತ ಸಾರಿ ಭೋಗಿಸಿದ್ದೀರಿ. ಆದರೆ ಮೋಕ್ಷ ಸುಖವನ್ನು ಇದು ವರೆಗೆ ಪಡೆಯಲಿಲ್ಲ. ಆ ಮೋಕ್ಷ ಸುಖಕ್ಕೋಸ್ಕರವಾಗಿ ನೀವು ಪ್ರಯತ್ನಿಸಿರಿ. ಸಂಸಾರದ ವಿಷಯದಲ್ಲಿ ಯಾವಾಗಲೂ ವಿರಕ್ತಿ ಭಾವನೆಯನ್ನು ಧರಿಸಿರಿ.

ನೋಡಿ, ಒಂದು ಸಾರಿ ಒಬ್ಬ ರಾಜ ಕನ್ಯೆಯು ರಾಜ ವೈಭವವನ್ನು ಭೋಗಿಸುತ್ತಿದ್ದೂ ಆ ಸುಖದಿಂದ ವಿರಕ್ತಳಾಗಿದ್ದಳು. ರಾಜನು ಕನ್ಯೆಯು ಯುವತಿಯಾದ ಕೂಡಲೇ ಅವಳ ಮದುವೆಯನ್ನು ಮಾಡುವ ವಿಚಾರ ಮಾಡಿದನು. ಆಗ ಅವಳ ದಾಸಿಯಿಂದ ಹೀಗೆ ತಿಳಿಯಿತು. ಮೇರು ಪರ್ವತಕ್ಕೆ ಸುತ್ತು ಹಾಕಿ ಬಂದು ನಾನು ಹಾಕಿದ ಮಾಲೆಯನ್ನು ಯಾರು ತೆಗೆದುಕೊಳ್ಳುತ್ತಾನೆಯೋ ಅವನೇ ಈ ಭವದಲ್ಲಿ ನನ್ನ ಪತಿ ಎಂದು ರಾಜಕುಮಾರಿಯ ಪ್ರತಿಜ್ಞೆಯಾಗಿದೆ. ಆಗ ರಾಜನು ಈ ವಿಷಯವನ್ನು ದೇಶದಲ್ಲಿ ಎಲ್ಲರಿಗೂ ತಿಳಿಯುವಂತೆ ಸಾರಿದನು. ಈ ವಿಷಯವನ್ನು ಅಸಾಧ್ಯವೆಂದು ತಿಳಿದು ಯಾವ ರಾಜಪುತ್ರರೂ ಈ ಕಾರ್ಯಕ್ಕೆ ಮುಂದೆ ಬರಲಿಲ್ಲ. ಒಬ್ಬ ವಿದ್ಯಾಧರ ರಾಜಪುತ್ರನು ವಿದ್ಯೆಯ ಬಲದಿಂದ ಈ ಕಾರ್ಯವನ್ನು ಸಾಧಿಸಿ ಆ ಮಾಲೆಯನ್ನು ತೆಗೆದುಕೊಂಡನು. ಆಗ ರಾಜನು ಆ ವಿದ್ಯಾಧರನೊಡನೆ ಅವಳ ವಿವಾಹವನ್ನು ಮಾಡಿದನು. ವಿವಾಹನಾದ ನಂತರ ಬಹಳ ವೈಭವದಿಂದ ಆನೆಯಲ್ಲಿ ಮೆರವಣಿಗೆ ಹೊರಟು ಅರಮನೆಯಲ್ಲಿ ಬಂತು. ಇಷ್ಟರಲ್ಲಿ ಒಬ್ಬ ದೇವನ ವಿಮಾನವನ್ನು ನೋಡಿ ಅವರೀರ್ವರಿಗೂ ಜಾತಿಸ್ಮರಣೆ ಯಾಯಿತು. ಪೂರ್ವ ಭವದಲ್ಲಿ ಅವರು ಸ್ವರ್ಗೀಯ ವಿಮಾನದಲ್ಲಿ ದೇವದೇವಿಯರಾಗಿದ್ದರು. ಅವರಿಗೆ ಇದೆಲ್ಲಾ ವಿಷಯವು ಜ್ಞಾಪಕಕ್ಕೆ ಬಂದು ಭೋಗದ ವಿಷಯದಲ್ಲಿ ವಿರಕ್ತಿಯಾಯಿತು. ಆನೆಯಿಂದ ಇಳಿದು ಈರ್ವರೂ ಮುನಿಗಳ ಸಮೀಪಕ್ಕೆ ಹೋಗಿ ದೀಕ್ಷೆಯನ್ನು ಪಡೆದು ಕೊಂಡರು, ಈ ಕಲಿಕಾಲದಲ್ಲಿ ಇಷ್ಟು ರಾಜವೈಭವವಿದ್ದು ಸುಖವಿರುತ್ತಿರಲು ವೈರಾಗ್ಯದ ಉದಯವಾಗುವುದು ಬಹಳ ಕಠಿನ ಕಾರ್ಯವಾಗಿದೆ.

ನಿರ್ವೀರ್ಯಾ ಪೃಥಿವೀ ನಿರೌಷಧರಸೋ ನೀಚಾ ಮಹತ್ವಂಗತಾಃ
ಭೂಪಾಲಾ ನಿಜಕರ್ಮಧರ್ಮರಹಿತಾ ವಿಪ್ರಾಃ ಕುಮಾರ್ಗೇರತಾಃ
ಭಾರ್ಯಾ ಭರ್ತೃವಿರೋಧಿನೀ ಪರರತಾ ಪುತ್ರಾಃ ಪಿತೃದ್ವೇಷಿಣೋ
ಹಾಕಷ್ಟಂ ಖಲು ವರ್ತತೇ ಕಲಿಯುಗೇ ಧನ್ಯಾಃ ನರಾಃ ಸಜ್ಜನಾಃ

ನೋಡಿ, ಆ ರಾಜಕನ್ಯೆಯು ತನ್ನ ಪತಿಯ ವಿಷಯದಲ್ಲಿ ವಿರಕ್ತಳಾಗಿ ಬಾಲಬ್ರಹ್ಮಚರ್ಯವನ್ನು ಪರಿಪಾಲಿಸಿ ಲೋಕವಂದ್ಯಳಾದಳು. ಕಲಿಕಾಲದಲ್ಲಿ ಇಂಥಹ ಭಾವನೆಯಾವುದು ಬಹಳ ದುರ್ಲಭ. ಕಲಿಕಾಲದ ಮಹಿಮೆಯು ಹೇಗಿದೆ ಎಂಬುದನ್ನು ಮೇಲಿನ ಶ್ಲೋಕದಲ್ಲಿ ಕವಿಯು ವರ್ಣಿಸಿದ್ದಾನೆ. ಪೃಥಿವಿಯು ವೀರತೆಯಿಂದ ಹೀನವಾಗಿದೆ. ಔಷಧಕ್ಕೆ ಉಪಯುಕ್ತವಾಗುವ ವನಸ್ಪತಿಗಳು ರಸಹೀನವಾಗಿವೆ. ನೀಚ ಮನುಷ್ಯರಿಗೆ ಮಹತ್ವ ಬಂದಿದೆ, ರಾಜರು ತಮ್ಮ ಧರ್ಮ ಕರ್ಮಗಳನ್ನು ಬಿಟ್ಟಿದ್ದಾರೆ. ಒಳ್ಳೆಯ ಕುಲದಲ್ಲಿ ಹುಟ್ಟಿದ ಬ್ರಾಹ್ಮಣರೂ ಮತ್ತು ಸತ್ಪುರುಷರೂ ಪಾಪಾಚರಣೆಯನ್ನು ಮಾಡತೊಡಗಿದ್ದಾರೆ. ಸ್ತ್ರೀಯರು ತನ್ನ ಪತಿಯೊಡನೆ ದ್ವೇಷ ಮಾಡಿ ಪರಪುರುಷರನ್ನು ಸೇವಿಸುತ್ತಾರೆ. ಮಕ್ಕಳು ತಂದೆಯೊಡನೆ ದ್ವೇಷ ಮಾಡುತ್ತಾರೆ. ಇಂಥಹ ಸ್ಥಿತಿಯುಳ್ಳ ಕಲಿಕಾಲದ ಸ್ಥಿತಿಯು ಕಷ್ಟತರವಾಗಿದೆ. ಹೀಗಿದ್ದರೂ ಕೆಲವರು ತಮ್ಮ ಆತ್ಮಹಿತವನ್ನು ಸಾಧಿಸಿಕೊಳ್ಳುತ್ತಾರೆ. ಅವರು ನಿಜವಾಗಿಯೂ ಪ್ರಶಂಸೆಗೆ ಅರ್ಹರು. ಆದುದರಿಂದ ಭವ್ಯರೇ ! ನೀವು ಈ ಕಲಿಕಾಲದಲ್ಲಿ ಮನಸ್ಸನ್ನು ಇಂದ್ರಿಯಗಳನ್ನು ವಶಪಡಿಸಿಕೊಂಡು ಆತ್ಮಹಿತವನ್ನು ಸಾಧಿಸಿಕೊಳ್ಳಿರಿ. ಆ ರಾಜಕುಮಾರಿಯಂತೆ ಇಹ ಪರಲೋಕದಲ್ಲಿ ಸುಖವನ್ನು ಕೊಡುವ ಬ್ರಹ್ಮಚರ್ಯವ್ರತವನ್ನು ನಿಮ್ಮ ಅಂತಃಕರಣದಲ್ಲಿ ಧರಿಸಿ ಮತ್ತು ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ. ಇದು ಕೇವಲಿಗಳ ವಚನವಾಗಿದೆ.

ಎಲ್ಲಾ ವ್ರತಗಳಲ್ಲಿಯೂ ಬ್ರಹ್ಮಚರ್ಯ ವ್ರತವು ಉತ್ತಮವಾಗಿದೆ. ಬ್ರಹ್ಮನೆಂದರೆ ಆತ್ಮನು. ಆತ್ಮನಲ್ಲಿ ಸ್ಥಿರವಾಗಿರುವುದಕ್ಕೆ ಬ್ರಹ್ಮಚರ್ಯವೆಂದು ಹೇಳಿದ್ದಾರೆ. ಈ ವ್ರತವನ್ನು ಪರಿಪಾಲಿಸುವವರು ದೊಡ್ಡ ಪುಣ್ಯಶಾಲಿಗಳಾಗಿರುತ್ತಾರೆ. ಅವರಿಗೆ ಸಂಸಾರದ ವಿಷಯದಲ್ಲಿ ಆಸಕ್ತಿ ಇಲ್ಲದೆ ವೈರಾಗ್ಯದ ವಿಷಯದಲ್ಲಿ ಉತ್ಸಾಹವಿರುತ್ತದೆ. ಅವರು ಯಾವಾಗಲೂ ಭೋಗದ ವಿಷಯದಲ್ಲಿ ಹೀಗೆ ವಿಚಾರ ಮಾಡುತ್ತಿರುತ್ತಾರೆ.

ಘಾಣೀ ಪಾಸುನಿ ಜನ್ಮೇ ಘಾಣೀಚೆ ಬೀಜ ತೇವಿ ಜೋ ದೇಹ
ದುರ್ಗಂಧಿ ಕಿಳಸವಾಣಾ ಸ್ರವೇ ಜ್ಯಾತುನೀ ನ ಸಂದೇಹ
ದೇಣೆ ಅಶಾ ವಿಚಾರೆ ಸಂಗತಿ ಸೋಡೂನ ಕಾಮಭಾವಾಚೀ
ಹೀ ಹೋಯ ಸಾತವೀ ಪ್ರತಿಮಾ ಜಗಾಂತ ಬ್ರಹ್ಮಚರ್ಯ
ನಾವಾಚೀ

ಯಾವ ದೇಹವು ಅತ್ಯಂತ ನಿಕೃಷ್ಟವಾದ ಮಲದಿಂದಲೇ ಉತ್ಪನ್ನವಾಗಿದೆಯೋ ಅದರಿಂದ ಯಾವಾಗಲೂ ದುರ್ಗಂಧನಾದ ಮಲವು ಸುರಿಯುತ್ತಿರುತ್ತದೆಯೋ ಅಂಥಹ ದೇಹದ ವಿಷಯದಲ್ಲಿ ವೈರಾಗ್ಯ ಭಾವನೆಯನ್ನು ಧರಿಸಿ ಕಾಮ ವಿಕಾರವನ್ನು ಜಯಿಸುವವುದು ಇದು ಏಳನೆಯ ಬ್ರಹ್ಮಚರ್ಯ ಪ್ರತಿಮೆ ಎಂದು ಹೇಳಲಾಗಿದೆ. ಪ್ರಾಪ್ತವಾದ ಭೋಗ ಸಂಪತ್ತಿಗಳನ್ನು ತ್ಯಜಿಸಿ ಈ ದುರ್ಧರವಾದ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸುವವರು ಬಹಳ ವಿರಳ. ಲಕ್ಷದಲ್ಲಿ ಒಬ್ಬರು ಸಿಗುವುದು ಕಷ್ಟ.

ನೋಡಿ, ಭರತೇಶ್ವರನ ನೂರು ಮಕ್ಕಳು ವನಕ್ರೀಡೆಗೆ ಹೋಗಿದ್ದರು. ಆಗ ಆಕಾಶದಿಂದ ಒಬ್ಬ ಚಾರಣ ಮುನಿಗಳು ಹೋಗುತ್ತಿದ್ದರು. ಅವರನ್ನು ಈ ರಾಜಪುತ್ರರು ನೋಡಿದರು. ಆಗ ಅವರಿಗೆಲ್ಲಾ ವೈರಾಗ್ಯದ ಉದಯವಾಗಿ ಎಲ್ಲರೂ ತಮ್ಮ ಮನಸ್ಸಿನಲ್ಲಿ ವಿಚಾರ ಮಾಡಿದರು. ಈಗ ನಮ್ಮ ಯೌವನವನ್ನು ನೋಡಿ ನಮಗೆ ತಂದೆಯವರು ಮದುವೆ ಮಾಡುವರು. ಮದುವೆಯಾದ ನಂತರ ಸಂಸಾರದ ಬಲೆಯಲ್ಲಿ ನಾವು ಬೀಳಬೇಕಾಗುತ್ತದೆ. ಆ ಬಲೆಯ ಬಲಿಗೆ ಬೀಳದೆ ನಾವು ಧರ್ಮಾಚರಣೆಯನ್ನು ಮಾಡಿಕೊಳ್ಳಬೇಕಾಗಿದೆ. ಆದರಿಂದ ಹೆಚ್ಚಿನ ಲಾಭವು ಲೋಕದಲ್ಲಿ ಏನೂ ಇಲ್ಲ. ಆ ಧರ್ಮವೇ ನಮ್ಮನ್ನು ಉದ್ಧರಿಸುವುದಕ್ಕೆ ಸಮರ್ಥವಾಗಿದೆ.

ಧರ್ಮ ಭಿನ್ನ ಫಿರ ಕೌನ ಹೈ ಕಹೋ ಸುಧೀ ಕಲ್ಯಾಣ
ಜಿನಸೇ ಮಿಲತಾ ಸ್ವರ್ಗ ಹೈ ತಥಾ ಕಠಿನ ನಿರ್ವಾಣ

ಧರ್ಮನೀತಿಸಾರಚಿಂತಾಮಣಿ

ಧರ್ಮದಿಂದ ಮನುಷ್ಯನಿಗೆ ಮೋಕ್ಷವು ಲಭಿಸುತ್ತದೆ. ಸ್ವರ್ಗದ ವೈಭವವು ದೊರೆಯುತ್ತದೆ. ಇದರಿಂದ ಹೆಚ್ಚಿನ ಲಾಭವು ಲೋಕದಲ್ಲಿ ಬೇರೆ ಏನಿದೆ. ಯಾವ ಧರ್ಮದ ಮಹಿಮೆಯಿಂದ ಲೋಕದ ಸರ್ವ ಸುಖ ಸಂಪತ್ತಿಗಳನ್ನು ಪಡೆಯುತ್ತಾನೆಯೋ ಆ ಧರ್ಮವೇ ಎಲ್ಲರಿಗೂ ಉಪಾದೇಯವಾಗಿದೆ. ಎಂದು ವಿಚಾರ ಮಾಡಿ ಆ ನೂರು ಮಂದಿ ರಾಜಪುತ್ರರೂ ಕೈಲಾಸ ಪರ್ವತಕ್ಕೆ ಹೋಗಿ ಶ್ರೀಆದಿಪ್ರಭುಗಳ ಸನ್ನಿಧಿಯಲ್ಲಿ ದೀಕ್ಷೆಯನ್ನು ಪಡೆದು ಘೋರ ತಪಶ್ಚರ್ಯೆಯನ್ನು ಮಾಡಿ ಕೇವಲಿಗಳಾದರು. ಸಮ್ಯಗ್ದರ್ಶನ ಪೂರ್ವಕವಾಗಿ ತಪಾಚರಣೆಯನ್ನು ಮಾಡಿದರೆ ನಿಃಸಂದೇಹವಾಗಿ ಆತ್ಮಸಿದ್ಧಿಯಾಗುತ್ತದೆ.

**ಸಮ್ಯಗ್ದರ್ಶನ ಚರಣ ತಪ ಯೇಹಿ ಜಗತಮೇ ಸಾರ ಸರೋ**
**ಪೂರನ ಶಿವಕೋ ಗಹೇ ಜಾಹಿ ಅಬ ಫಿರಜೇಹೈ ಯಹ ನಿಯತಕರೋ**

ಈ ಎಲ್ಲಾ ಆಸನ್ನ ಭವ್ಯರಾದ ರಾಜಪುತ್ರರು ಕೇವಲಿಗಳಾಗಿ ಮೋಕ್ಷ ಸಾಮ್ರಾಜ್ಯವನ್ನು ಪಡೆದರು. ನೋಡಿ, ಚಕ್ರವರ್ತಿಯ ಪುತ್ರರಾಗಿ ಅತುಲ ವೈಭವಗಳಿದ್ದೂ ಕೂಡ ಅವುಗಳನ್ನು ಬಿಟ್ಟು ಅವರು ನಿತ್ಯ ಸುಖದ ಸ್ಥಾನವಾದ ಮೋಕ್ಷವನ್ನು ಅವರು ಸಾಧಿಸಿಕೊಂಡರು. ಆದುದರಿಂದ ಭವ್ಯರೇ ! ನೀವೂ ಹಾಗೆಯೇ ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ.

ಈ ಕಲಿಕಾಲದಲ್ಲಿ ನಿಮಗೆ ರಾಜ್ಯವೈಭವಗಳು ಇಲ್ಲ. ಆದರೂ ಭೋಗಗಳ ವಿಷಯದಲ್ಲಿ ಅನೇಕ ಪ್ರಕಾರದ ಸಂಕಲ್ಪ ವಿಕಲ್ಪಗಳ ತರಂಗವನ್ನು ಮನಸ್ಸಿನಲ್ಲಿ ಧರಿಸಿ ಕಾಂಚನ ಮತ್ತು ಕಾಮಿನಿಯ ವಿಷಯದಲ್ಲಿ ನಿತ್ಯ ವಿಚಾರ ಮಾಡುತ್ತಾ ನೀವು ದುಃಖವನ್ನು ಪಡೆಯುತ್ತಿದ್ದೀರಿ. ಇನ್ನಾದರೂ ಸ್ವಲ್ಪ ವಿಚಾರ ಮಾಡಿ ಆತ್ಮಕಲ್ಯಾಣದ ಮಾರ್ಗವನ್ನು ಹುಡುಕಿರಿ. ಈ ಕಲಿಯುಗದಲ್ಲಿ ಆಯುಷ್ಯವು ಬಹಳ ಕಡಿಮೆ. ಈ ಸ್ವಲ್ಪ ಸಮಯದಲ್ಲಿ ಆತ್ಮ ಹಿತವನ್ನು ಸಾಧಿಸಿಕೊಳ್ಳುವುದು ನಿಮ್ಮ ಕರ್ತವ್ಯವಾಗಿದೆ. ಹೀಗೆ ಆಚಾರ್ಯರ ಉಪದೇಶವಾಗಿದೆ. ಇದನ್ನು ನಿಮ್ಮ ಹೃದಯದಲ್ಲಿ ಧರಿಸಿ ಆತ್ಮಸಿದ್ಧಿಯನ್ನು ಮಾಡಿಕೊಳ್ಳಿರಿ.

ಭವ್ಯಾತ್ಮರೇ ! ಆತ್ಮಕಲ್ಯಾಣವಿಲ್ಲದಿದ್ದರೆ ಎಷ್ಟು ಶಾಸ್ತ್ರಗಳನ್ನು ಓದಿದರೂ ಏನೂ ಪ್ರಯೋಜನವಿಲ್ಲ. ಆತ್ಮ ಸಿದ್ಧಿಯೇ ಲೋಕದಲ್ಲಿ ಎಲ್ಲಾ ಸುಖಕ್ಕೂ ಕಾರಣವಾಗಿದೆ. ಆ ಸುಖವನ್ನು ಬಿಟ್ಟು ಎಷ್ಟು ಇಂದ್ರಿಯ ಸುಖಗಳನ್ನು ಪಡೆದರೂ ಅದು ವಿಧವೆಗೆ ಮಾಡಿದ ಅಲಂಕಾರದಂತೆ ಶೋಭೆಯಿಂದ ರಹಿತವಾಗಿದೆ. ಆದುದರಿಂದ ಇಪ್ಪತ್ತನಾಲ್ಕು ಘಂಟೆಯಲ್ಲಿ ಸ್ವಲ್ಪ ಸಮಯವಾದರೂ ಆತ್ಮಸಿದ್ಧಿಗೋಸ್ಕರ ತಮ್ಮ ಸಮಯವನ್ನು ಕಳೆಯಿರಿ. ಈ ಇಂದ್ರಿಯ ಭೋಗಗಳು ಮಿಂಚಿನಂತೆ ಕ್ಷಣ ಭಂಗುರವಾಗಿವೆ. ಮಿಂಚು ನೋಡು ನೋಡುತ್ತಾ ನಷ್ಟವಾಗುತ್ತದೆ.

**ಅರ್ಥಾಃ ಪಾದರಜಃಸಮಾ ಗಿರಿನದೀವೇಗೋಪಮಂ ಯೌವನಂ**
**ಆಯುಷ್ಯಂ ಜಲಬಿಂದುಲೋಲಚಪಲಂ ಫೇನೋಪಮಂ ಜೀವಿತಂ**
**ಧರ್ಮಂ ಯೋ ನ ಕರೋತಿ ಚಂಚಲಮತಿಃ ಸ್ವರ್ಗಾರ್ಗಲೋ-**
**ದ್ಘಾಟನಂ**
**ಪಶ್ಚಾತ್ತಾಪಯುತೋ ಜರಾಪರಿಗತಃ ಶೋಕಾಗ್ನಿನಾ ದಹ್ಯತೇ**

ಸುಭಾಷಿತಾವಲಿ.

ಈ ಸಂಪತ್ತಿಯೂ ದಾರಿಯಲ್ಲಿರುವ ಧೂಲಿನಂತೆ ನಾಶಶೀಲವಾಗಿದೆ. ತಾರುಣ್ಯವು ಹೊಳೆಗೆ ಬಂದ ನೆರೆಯಂತಿದೆ. ಆಯುಷ್ಯವು ನೀರಿನ ಗುಳ್ಳೆಯಂತಿದೆ. ಜೀವನವು ಅದರಲ್ಲಿ ಬರುವ ನೊರೆಯಂತಿದೆ. ಈ ಎಲ್ಲಾ ವಿಚಾರಗಳನ್ನು ತಿಳಿದೂ ಯಾರು ಸ್ವರ್ಗದ ಬಾಗಿಲನ್ನು ತೆರೆಯಲು ಸಮರ್ಥವಾದ ಧರ್ಮವನ್ನು ಆಚರಿಸುವುದಿಲ್ಲವೋ ಅವರು ಪಶ್ಚಾತ್ತಾಪವೆಂಬ ಬೆಂಕಿಯಿಂದ ಸುಡಲ್ಪಡುತ್ತಾರೆ. ಆದುದರಿಂದ ಭವ್ಯರೇ, ವಿಚಾರ ಮಾಡಿ ಆತ್ಮಗತಿಯನ್ನು ಸುಧಾರಿಸಿ ಕೊಳ್ಳಿರಿ.

ನೋಡಿ, ಒಂದು ಸಾರಿಯ ಘಟನೆಯು ಶಾಸ್ತ್ರದಲ್ಲಿ ಹೀಗೆ ಬಂದಿದೆ. ಒಬ್ಬ ರಾಜ ಕುಮಾರನು ಒಬ್ಬ ಮುನಿಗಳ ಸಮೀಪದಲ್ಲಿ ಏಕಪತ್ನೀವ್ರತವನ್ನು ಕೈಕೊಂಡನು. ಆದರೆ ಈ ವ್ರತವನ್ನು ಮರೆತು ಬಿಟ್ಟನು. ಅವನ ತಂದೆಯು ಮೂವತ್ತೆರಡು ರಾಜಕನ್ಯೆಯರೊಡನೆ ಅವನ ಮದುವೆಯನ್ನು

ಮಾಡುವುದೆಂದು ನಿಶ್ಚಯ ಮಾಡಿದನು. ರಾಜಪುತ್ರನು ಲಗ್ನ ಮಂಡಪ
ದಲ್ಲಿ ಹೋಗಿ ವಿವಾಹ ಸನ್ನದ್ಧನಾಗಿ ನಿತ್ತಿದ್ದಾನೆ. ಇಷ್ಟರಲ್ಲಿ ಸ್ವರ್ಗದಲ್ಲಿದ್ದ
ಅವನ ಮಿತ್ರನಾದ ದೇವನು ಅವಧಿಜ್ಞಾನದಿಂದ ' ಈತನು ಮೋಹದಿಂದ
ತನ್ನ ವ್ರತವನ್ನು ಮರೆತು ದೊಡ್ಡ ಕರ್ಮ ಬಂಧವನ್ನು ಮಾಡಿಕೊಳ್ಳು
ತ್ತಾನೆಂದು ತಿಳಿದು ಅವನನ್ನು ಕೂಡಲೇ ಮೂರ್ಛಿತನನ್ನಾಗಿ ಮಾಡಿದನು.
ಆಗ ಮದುಮಗನಾದ ರಾಜಕುಮಾರನು ಮೂರ್ಛಿತನಾದ ವಿಷಯವನ್ನು
ನೋಡಿ ಎಲ್ಲರೂ ದುಃಖಿತರಾದರು. ಅರಮನೆಯಲ್ಲಿ ರಾಜ್ಯದಲ್ಲಿ ಹಾಹಾ
ಕಾರವು ಪ್ರಾರಂಭವಾಯಿತು. ರಾಜನು ' ನನ್ನ ಕುಮಾರನನ್ನು ವಿದ್ಯೆಯ
ಬಲದಿಂದ ಯಾರಾದರೂ ಎಚ್ಚರಿಸಿದರೆ ಅವರಿಗೆ ನಾನು ಒಂದು ಕೋಟಿ
ಸುವರ್ಣಮುದ್ರೆಗಳನ್ನು ಕೊಡುವೆನೆಂದು ಡಂಗುರ ಸಾರಿಸಿದನು. ಅನೇ
ಕರು ತಮ್ಮ ತಂತ್ರ ಮಂತ್ರಗಳ ಪ್ರಯೋಗವನ್ನು ಮಾಡಿ ರಾಜಕುಮಾರ
ನನ್ನು ಎಚ್ಚರಿಸಲು ಪ್ರಯತ್ನಿಸಿದರು. ಆದರೆ ಎಲ್ಲವೂ ನಿಷ್ಫಲವಾಯಿತು.
ಆಗ ಆ ಮಿತ್ರನಾದ ದೇವನು ವೈದ್ಯನ ರೂಪವನ್ನು ಧರಿಸಿ ಅಲ್ಲಿಗೆ ಬಂದು
ಹೇಳುತ್ತಾನೆ. ನಾನು ಈ ರಾಜಕುಮಾರನನ್ನು ನಿಸ್ಸಂದೇಹವಾಗಿ ಎಚ್ಚರಿ
ಸುತ್ತೇನೆ. ಆದರೆ ಇವನು ಪುನಃ ಈ ರಾಜ್ಯಭೋಗವನ್ನು ಭೋಗಿಸುವ
ದಾದರೆ ನನ್ನ ಮಂತ್ರವು ಇವನ ಮೇಲೆ ನಡೆಯದು. ಇದರಿಂದ ಎಚ್ಚತ್ತು
ಮುನಿಯಾಗಿ ತಪಾಚರಣೆಯನ್ನು ಮಾಡುವುದಾದರೆ ಮಾತ್ರ ನನ್ನ
ಮಂತ್ರವು ನಡೆಯುವುದು ಎಂದನು. ಇದನ್ನು ಕೇಳಿ ರಾಜನು ಮತ್ತು
ರಾಜ ಮಂತ್ರಿಗಳು ವಿಚಾರ ಮಾಡ ತೊಡಗಿದರು. ಈ ಕುಮಾರನು
ಹಾಗೆಯೇ ಸತ್ತು ಹೋದರೆ ಏನು ಪ್ರಯೋಜನ. ನಾವು ಎಲ್ಲರೂ ಅವನ
ಸುಖದಿಂದ ವಂಚಿತರಾಗುತ್ತೇವೆ. ಎಚ್ಚತ್ತು ಮುನಿಯಾದರೂ ಅವನ
ದರ್ಶನವನ್ನಾದರೂ ಪಡೆಯುವೆವು. ಮತ್ತು ಆ ಜೀವನ ಆತ್ಮಹಿತವೂ
ಆಗುವುದು. ಹೀಗೆ ವಿಚಾರ ಮಾಡಿ ಆ ವೈದ್ಯನಿಗೆ ತನ್ನ ಪ್ರಯೋಗವನ್ನು
ಮಾಡಲು ಆಜ್ಞಾಪಿಸಿದರು. ಕೂಡಲೇ ಅವನು ರಾಜಕುಮಾರನನ್ನು
ಎಚ್ಚರಿಸಿದನು. ಅವನು ಎದ್ದು ತನ್ನ ಎದುರಿನಲ್ಲಿದ್ದ ತನ್ನ ಮಿತ್ರನಾದ

ದೇವನನ್ನು ನೋಡಿ ಅವನಿಗೆ ಜಾತಿಸ್ಮರಣೆಯಾಯಿತು. ಪೂರ್ವಭವದ ಎಲ್ಲಾ ವಿಷಯಗಳನ್ನು ಜ್ಞಾಪಿಸಿದ ಕೂಡಲೇ ಅವನಿಗೆ ವೈರಾಗ್ಯದ ಉದಯ ವಾಯಿತು. ಎಲ್ಲರನ್ನು ಸಾಂತ್ವನೆ ಮಾಡಿ ಕೂಡಲೇ ಮುನಿ ದೀಕ್ಷೆಯನ್ನು ತೆಗೆದುಕೊಂಡನು. ಅವನ ಪತ್ನಿಯಾಗಲಿರುವ ಮೂವತ್ತೆರಡು ರಾಜ ಕುಮಾರಿಯರೂ ಆರ್ಯಿಕಾ ದೀಕ್ಷೆಯನ್ನು ಪಡೆದರು. ಎಲ್ಲರೂ ಯಥಾಶಕ್ತಿ ತಪಾಚರಣೆಯನ್ನು ಮಾಡಿದರು. ಆ ಮುನಿಯೂ ಅನೇಕ ವರ್ಷಗಳ ವರೆಗೆ ತಪಾಚರಣೆಯನ್ನು ಮಾಡಿ ಆಯುಷ್ಯದ ಅಂತದಲ್ಲಿ ಸಮಾಧಿ ಮರಣವನ್ನು ಸಾಧಿಸಿ ಆ ಮಿತ್ರನಿರುವ ಸ್ವರ್ಗದಲ್ಲಿ ಮಹರ್ಧಿಕ ದೇವನಾಗಿ ಜನಿಸಿದನು.

ಆದುದರಿಂದ ಭವ್ಯರೇ ! ವಿಚಾರ ಮಾಡಿ. ಪ್ರಾಚೀನ ಸಮಯದಲ್ಲಿ ದೊಡ್ಡ ದೊಡ್ಡ ರಾಜರು ತಮ್ಮ ವೈಭವಗಳನ್ನು ಬಿಟ್ಟು ಇಂದ್ರಿಯ ನಿಗ್ರಹ ವನ್ನು ಮಾಡಿ ದುರ್ಧರ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಿ ಮೋಕ್ಷ ವನ್ನು ಪಡೆದುಕೊಳ್ಳುತ್ತಿದ್ದರು. ಆದರೆ ಈ ಯುಗದಲ್ಲಿ ಎಲ್ಲರೂ ಭೋಗ ವಿಚಾರದಲ್ಲಿ ಸಮಯವನ್ನು ಕಳೆದು ಅಶುಭ ಕರ್ಮಬಂಧವನ್ನು ಮಾಡಿ ಕೊಳ್ಳುತ್ತಿದ್ದಾರೆ. ಈ ಅಶುಭ ಕರ್ಮದ ಕಾರಣದಿಂದ ಭವಭವಗಳಲ್ಲಿ ನಿಮಗೆ ದುಃಖವನ್ನು ಅನುಭವಿಸ ಬೇಕಾಗುತ್ತದೆ. ಆದುದರಿಂದ ನಿಮಗೆ ನಿಜವಾಗಿ ಸುಖದ ಇಚ್ಛೆ ಇದ್ದರೆ ನೀವು ನಿಮ್ಮ ಆತ್ಮಸಿದ್ಧಿಯನ್ನು ಮಾಡಿಕೊಳ್ಳುವುದಕ್ಕೋಸ್ಕರವಾಗಿ ಮನಸ್ಸನ್ನು ನಿರ್ಮಲವನ್ನಾಗಿ ಮಾಡಿರಿ ಇದು ಆಚಾರ್ಯರ ಉಪದೇಶವಾಗಿದೆ. ಆ ನಿರ್ಮಲವಾದ ಮನಸ್ಸಿನಲ್ಲಿ ಬ್ರಹ್ಮಚರ್ಯ ವ್ರತವನ್ನು ಧರಿಸಿರಿ. ಮತ್ತು ಆತ್ಮಹಿತವನ್ನು ಸಾಧಿಸಿಕೊ ಳ್ಳಿರಿ. ಹೀಗೆ ಬ್ರಹ್ಮಚರ್ಯ ಧರ್ಮವನ್ನು ಸಂಕ್ಷೇಪವಾಗಿ ವಿವೇಚಿಸಲಾಗಿದ

ಉತ್ತಮ ಬ್ರಹ್ಮಚರ್ಯಧರ್ಮಾಯ ನಮಃ



## — ಜಿನಗುಣ ಸ್ತವನ —

ರಾಗ—ಬೇಹಾಗ್ ಏಕತಾಳ

ಜಯಜಿನೇಂದ್ರ ಸುಖಕಂದ ನಮಸ್ತೆ ।
ಜಯಜಿನೇಂದ್ರ ಜಿನಚಂದ್ರ ನಮಸ್ತೆ ।
ಜಯ ಜಿನೇಂದ್ರ । ವರಬೋಧ ನಮಸ್ತೆ ।
ಜಯಜಿನೇಂದ್ರ । ಜಿತಕ್ರೋಧ । ನಮಸ್ತೇ ॥ ೧ ॥

ಪಾಪ ತಾಪ ಹರ- ಇಂದು । ನಮಸ್ತೆ ।
ಅರ್ಹಾವರನ ಯುತ ಬಿಂದು ನಮಸ್ತೆ ॥
ಶಿಷ್ಟಾಚಾರ ವಿಶಿಷ್ಟ ನಮಸ್ತೆ ।
ಇಷ್ಟಮಿತ್ರ ಉತ್ಕೃಷ್ಟ ನಮಸ್ತೆ ॥ ೨ ॥

ಪರಮ ಧರ್ಮವರ ಶರ್ಮ ನಮಸ್ತೆ ।
ಮರ್ಮ ಭರ್ಮ ಧನ ಧರ್ಮ ನಮಸ್ತೆ ॥
ದೃಗ್ವಿಶಾಲವರ ಬಾಲ ನಮಸ್ತೆ ।
ಹೃದಿ ದಯಾಲು ಗುಣಮೂಲ ನಮಸ್ತೇ ॥ ೩ ॥

ಶುದ್ಧ ಬುದ್ಧ ಅವಿರುದ್ಧ ನಮಸ್ತೆ ।
ಋದ್ಧಿ ಸಿದ್ಧಿವರ ವೃದ್ಧ ನಮಸ್ತೆ ।
ವೀತರಾಗ ವಿಜ್ಞಾನ ನಮಸ್ತೇ ।
ಚಿದ್ವಿಲಾಸ ಧೃತಧ್ಯಾನ ನಮಸ್ತೇ ॥ ೪ ॥

ಸ್ವಚ್ಛ ಗುಣಾಂಬುಧಿ ರತ್ನ ನಮಸ್ತೆ ।
ಸತ್ವ ಹಿತಂಕರ ಯತ್ನ ನಮಸ್ತೇ ॥
ಕುನಯಕರೀ ಮೃಗರಾಜ ನಮಸ್ತೆ ।
ಮಿಥ್ಯಾ ಖಗವರವಾಜಿ ನಮಸ್ತೇ ॥ ೫ ॥

ಭವ್ಯ ಭವೋದಧಿಪಾರ ನಮಸ್ತೇ ।
ಶರ್ಮಾನ್ವಿತ ಸಿತಸಾರ ನಮಸ್ತೆ ।
ದರ್ಶನ ಜ್ಞಾನ ಸುಖ ವೀರ್ಯ ನಮಸ್ತೆ ।
ಚತುರಾಸನಧರಧೀರ ನಮಸ್ತೇ ॥ ೬ ॥

ಹರಿ ಹರ ಬ್ರಹ್ಮಾ ವಿಷ್ಣು ನಮಸ್ತೇ ।
ಮೋಹಮಹಿಮುವರ ಜಿಷ್ಣು ನಮಸ್ತೇ ।
ಮಹಾ ದಾನ ಯುತ ಭೋಗ ನಮಸ್ತೇ
ಮಹಾ ಜ್ಞಾನ ಮಹಾ ಭೋಗ ನಮಸ್ತೇ ॥ ೭ ॥

ಮಹಾ ಉಗ್ರ ತಪ ಶೂರ ನಮಸ್ತೆ ।
ಭವ ಸಮುದ್ರ ಶತ ಸೇತು ನಮಸ್ತೆ ।
ವಿದ್ಯಾ ಈಶ ಮುನೀಶ ನಮಸ್ತೆ ।
ಇಂದ್ರಾದಿಕನುತಶಿಷ್ಯ ನಮಸ್ತೇ ॥ ೮ ॥

ಜಯ ರತ್ನತ್ರಯ ಮಾರ್ಗ ನಮಸ್ತೇ ।
ಸಕಲ ಜೀವ ಸುಖದಾಯಿ ನಮಸ್ತೇ ।
ಅಶರಣ ಶರಣ ಸಹಾಯ ನಮಸ್ತೇ ।
ಭವ್ಯಸುಪಂಥ ಲಗಾಯ ನಮಸ್ತೇ ॥ ೯ ॥

ನಿರಾಕಾರ ಆಕಾರ ನಮಸ್ತೆ ।
ಏಕಾನೇಕ ಆಧಾರ ನಮಸ್ತೇ ।
ಲೋಕಾಲೋಕ ವಿಲೋಕ ನಮಸ್ತೇ ।
ತ್ರಿಧಾ ಸರ್ವ ಗುಣ ಸ್ತೋಕ ನಮಸ್ತೇ ॥ ೧೦ ॥

ಸಲ್ಲದಲ್ಲದಲ ಮಲ್ಲ ನಮಸ್ತೇ ।
ಕಲ್ಲ ಮಲ್ಲಜಿತ ಲಲ್ಲ ನಮಸ್ತೇ ।
ಭಕ್ತಿ ಮುಕ್ತಿ ದಾತಾರ ನಮಸ್ತೇ ।
ಉಕ್ತಿ ಸೂಕ್ತಿ ಶೃಂಗಾರ ನಮಸ್ತೇ ॥ ೧೧ ॥

ಗುಣ ಅನಂತ ಭಗವಂತ ನಮಸ್ತೇ ।
ಜಯ ಜಯ ಜಯ ಜಯವಂತ ನಮಸ್ತೇ ॥

## — ಜಿನಭಕ್ತಿಸಾರ —

ಜರೆ ಜನನ ಮದ ರಾಗ ಸ್ವೇದವು ।
ಮರಣ ಕ್ಷುದೆ ತೃಷೆ ರೋಗ ಮೋಹವು ॥
ನಿರುತ ವಿಸ್ಮಯ ನಿದ್ರೆ ಖೇದವು ಖತಿಯು ಚಿಂತೆಗಳು ।
ವಿರಹ ವಿಷಯವು ಭಯಗಳೆಂಬವು ।
ಸುರ ನರಾದಿಗಳಲ್ಲಿ ದೋಷವು ।
ಹರಿಸಿರುವನವ ದೇವ ರಕ್ಷಿಸಲೆಮ್ಮನನವರತಾ ॥ ೧ ॥

ಧರಣಿ ಮನೆ ಧನ ಧಾನ್ಯ ದ್ವಿಪದ ।
ತುರಗ ತುರುವುಗಳಾದಿ ಪಾಲಕಿ ।
ವಿರುವ ವಾಹನ ವಸ್ತ್ರ ಸೇವಕಸೇವಿಕಾದಿಯುರೂ
ನಿರುತ ಬಾಹಿರದಲ್ಲಿ ದಶವಿಧ ।
ವರಿಸಿ ಪರಿಗ್ರಹವೆಂಬವನು ಪರಿ
ಹರಿಸಿದಾತಿನ್ನಾವ ಗುರು ಕಾಯೆಮ್ಮನನವರತಾ ॥೨॥

ಕ್ರೋಧ ಮಾನವು ಮಾಯ ಲೋಭವು ।
ವೇದ ರತಿ ಮಿಥ್ಯಾತ್ವ ಅರತಿ ।
ಗಳಿಂದ ಭಯಗಳು ರಾಗ ಶೋಕವು ದ್ವೇಷ ಹೇಸಿಕೆಯು ।
ಸಾಧಕದ ಹಾಸ್ಯಾದಿ ಚತುರ್ದಶ ।
ವಾದ ಪರಿಗ್ರಹಂತರದಿ ಯುಭ ।
ಯಾದ ವಗಲಿದ ನಾತ ಸದ್ಗುರು ಕಾಯ್ಲೆನನವರತಾ ॥೩॥

ಹುಸಿಯು ಮೊದಲಾದ ವ್ಯಸನದ ।
ದೆಸೆಯೊಳೈತಹುದೆಲ್ಲ ಪಾಪದ ।
ಡಸಿಯ ಶೂಲದಿ ಸಿಕ್ಕಿ ನರುಳುವ ಮಾರ್ಗಕಾಧಾರ ॥
ವೆಸನಿಯಾಗಲದಲರಿದು ।
ಕೊಲೆಕಳೆ ಹುಸಿಯು ಪರದಾರ ಜೂಜು ಬೇಂಟಿಗ ।
ಳಸಮ ಪರಿಗ್ರಹ ವೇಳೆನುಳಿಯಿಂ ನಾತ್ಮನನವರತಾ ॥೪॥

ಸಾರಿಯರ ಮೂಲದಲಿ ಸ.ಖ ।
ತೋರುವದು ಸುತ ಮಿತ್ರರಾಲಯು ।
ಸಾರದ್ರವ್ಯ ಸಹಾಯದಿಂದಲಿ ಸ್ವಾಂತ ಸಕಲೀಕ್ಷ್ಣ ॥
ಸಾರಿ ನಲಿವುದು ನೂರಕೊಬ್ಬನ ।
ದಾರಿಯಿದು ಇನ್ನುಳಿದರೆಲ್ಲರು
ಘೋರಪಡುವದು ಸಾಕು ರಕ್ಷಿಸು ಇಲ್ಲಿ ಸುಖವಿಲ್ಲಾ ॥ ೫ ॥

ಲಕ್ಷಯೆಂಭತ್ತ ನಾಲ್ಕು ಯೋನಿಯು ।
ಲಕ್ಷಣಿರಲಿ ಚೌರಸೀತಿಯ ।
ಲಕ್ಷದೊಳಗೀ ಮನುಜ ಜನ್ಮವು ಏಕವಹುದೈಸೆ ।
ಲಕ್ಷಿಸಲು ಇನ್ನುಳಿದ ತಿರ್ಯಗಂ ।
ಚಕ್ಷಯಾಗಿಹವಲ್ಲ ಸ.ಖಕ ।
ಪ್ರೀಕ್ಷಣಿಲ್ಲವು ದೇವ ರಕ್ಷಿಸು ನಮ್ಮನನವರತಾ ॥ ೬ ॥

ದಿವ್ಯ ಸಖಿಯರ ಭೋಗ ಸುರಕುಜ ।
ದಿವ್ಯ ಭೋಜನದಿಂದ ದಣಿಯುದ ।
ಸೇವ್ಯ ನಿನಗುತ್ತಮವೆಯಿದು ತಾ ಜೀವನೇ ಪೇಳು ।
ಭಾವ್ಯ ವಲ್ಲೆಂದದುಹ ಚರಣವು ।
ಸೇವ್ಯಗೊಳು ಸುಖಿಯಾಗೆ ಜೀವನೆ
ದಿವ್ಯಮಂಗಲ ಸುಖವ ಧರಿಸೆಲೆ ಜೀವ ಅನವರತಾ ॥ ೭

ದೇವ ನಿರ್ಮಿತ ಸಮವಸರಣದಿ ।
ಭಾವದಿಂದೊಂಭತ್ತು ಪರಿಧಿಯು ।
ಶೀವಿ ವಿಧಿಗಳಿಗಪ್ಪರೊಳಗಾವಾವ ವಸ್ತುಗಳು ।
ಕಾವಿಸಿಹ ಮಧ್ಯದಲ್ಲಿ ನವರ
ತ್ನಾವಲಂಬನ ಗಂಧ ಕುಟಿಯೊಳ ।
ಗಾವಲಂಬನ ದೇವ ರಕ್ಷಿಸು ನಮ್ಮನನವರತ ॥ ೮ ॥

—o—